# ವನಿತಾ
















ಸೆಪ್ಟೆಂಬರ್—1992

ಬೆಲೆ 6/— ರೂ.

ಅಡಿಗೆ ಮನೆಯಲ್ಲಿ ನನ್ನ ಯಜಮಾನರು




# ಸೌಮ್ಯ ಪೋಷಣೆ.

**ತಿಂಗಳ ನಿಮ್ಮ ಮಗುವಿನ ಸಹಜ ಆಹಾರವನ್ನು , ಸುಲಭವಾಗಿ ಜೀರ್ಣವಾಗುವ ಪೌಷ್ಟಿಕ ಸತ್ತ್ವಗಳನ್ನು ಒಳಗೊಂಡ ನೆಸ್ಟಮ್ ನಿಂದ ಸಮೃದ್ಧಗೊಳಿಸಿ.**

ನೆಸ್ಟಮ್, ಹಾಲಿನಿಂದ ತಯಾರಿಸಲಾಗಿದ್ದು, ನಿಮ್ಮ ಮಗುವಿನ ಮೊದಲ ಘನ ಆಹಾರವಾಗಲು ತೀರ ಯೋಗ್ಯವಾಗಿದೆ. ಇದು, ಪೌಷ್ಟಿಕ ಸತ್ತ್ವಗಳಿಂದ ಸಮೃದ್ಧವಾದ, ಸಮತೂಲಿತ ಆಹಾರವಾಗಿದೆ. ನೀವು ನಿಮ್ಮ ಮಗುವಿಗೆ ಕೊಡುವ ಯಾವುದೇ ಆಹಾರದಲ್ಲಾಗಲಿ ಬೇಯಿಸಿದ ಹಣ್ಣು, ಬೇಯಿಸಿ-ಜಜ್ಜಿದ ತರಕಾರಿಗಳು, ತೊವ್ವೆಯಲ್ಲಿ-ನಸ್ಟಮ್ ಅನ್ನು ಸೇರಿಸಬಹುದಾಗಿದೆ.

ನೆಸ್ಟಮ್-ಅನ್ನು ,-ಅಕ್ಕಿಯಿಂದ ತಯಾರಿಸಲಾಗಿದ್ದು, ಸುಲಭವಾಗಿ ಜೀರ್ಣವಾಗುತ್ತದೆ. ಆದ್ದರಿಂದ, ಇದು ನಿಮ್ಮ ಮಗುವಿನ ಪೋಷಣೆಗೆ ತಕ್ಕುದಾದ ಧಾನ್ಯಾಹಾರವಾಗಿದೆ. ನೆಸ್ಟಮ್, ಡಾಕ್ಟರ್‌ರು ನಿಮ್ಮ ಮಗುವಿಗಾಗಿ ಶಿಫಾರಸುಮಾಡುವ ಹಲವು ಪೌಷ್ಟಿಕ ಸ್ವತಗಳನ್ನು-ಗಟ್ಟಿಯಾದ ಹಲ್ಲು ಮತ್ತು ಎಲುಬಿಗಾಗಿ-ಕ್ಯಾಲ್ಷಿಯಂ; ಆರೋಗ್ಯವಾದ ರಕ್ತಕ್ಕಾಗಿ ಕಬ್ಬಿಣಾಂಶ, ಚರ್ಮದ ಕಾಂತಿಗಾಗಿ;ಹೊಳೆಯುವ ಕಣ್ಣುಗಳಿಗಾಗಿ ವಿಟಮಿನ್‌ಗಳು ಮತ್ತು ರೋಗ ನಿರೋಧಕ ಗುಣಗಳನ್ನು ಹೊಂದಿದೆ.

ನಿಮ್ಮ , ಮಗು ನೆಸ್ಟಮ್-ನ ಜೊತೆ ಹೇಗೆ ಬೆಳೆಯುತ್ತದೆಯೊ ನೋಡಿ.

**ಮಗುವಿನ ಸುಲಭವಾಗಿ ಜೀರ್ಣವಾಗುವ ಧಾನ್ಯಾಹಾರ**

## ನೆಸ್ಟಮ್

**ಮುಖ್ಯಸೂಚನೆ: ಎದೆ ಹಾಲು ನಿಮ್ಮ ಮಗುವಿಗೆ ಅತ್ಯುತ್ತಮ. 4 ಮಾಸ ತುಂಬಿದಾಗ, ತಾಯಿ ಹಾಲಿನ ಜೊತೆಗೆ ಧಾನ್ಯಾಹಾರವನ್ನು ಕೊಡಿ.**

# ವನಿತಾ ವಾಣಿ

ಆಗಸ್ಟ್ ತಿಂಗಳಿನ ವನಿತಾ ಮಾಸಪತ್ರಿಕೆಯಲ್ಲಿ ಮೂಡಿ ಬಂದ ಶ್ರೀಮತಿ ಉಮಾಸಪ್ರೆ ಅವರ "ಹಳ್ಳಿಯ ಕಥೆ" ತುಂಬಾ ಸೊಗಸಾಗಿ ಮೂಡಿ ಬಂತು. ಆ ಕತೆಯಲ್ಲಿನ ಶಾಂತಿ ಪಾತ್ರ ನಿಜವಾಗಲೂ ಸೊಗಸಾಗಿತ್ತು. ಆ ಹುಡುಗಿಯ ಮುಗ್ಧತೆ ಅವರ ಮನೆಯ ಬಡತನ ಇವೆಲ್ಲವನ್ನೂ ಸೊಗಸಾಗಿ ವರ್ಣಿಸಿರುವ ಉಮಾರವರಿಗೆ ನನ್ನ ಧನ್ಯವಾದಗಳು. ಈ ಕತೆಯ ಘಟನೆ ಇಂದಿನ ಹಲವಾರು ಮಧ್ಯಮ ವರ್ಗದಲ್ಲಿ ಕುಟುಂಬಗಳಲ್ಲಿ ಸರ್ವೆ ಸಾಮಾನ್ಯವಾಗಿದೆ.

ಲಲಿತಮ್ಮ — ಮರಿದಾಸನ ಹಳ್ಳಿ

ಆಗಸ್ಟ್ ಮಾಹೆಯ 'ವನಿತಾ'ದಲ್ಲಿ ಮೂಡಿ ಬಂದಿರುವ 'ಹರಟೆ'; 'ನಮ್ಮ ಅಜ್ಜಿಯ ಶೋಕಿ'ಓದಿ ನಿಜಕ್ಕೂ ತಡೆಯಲಾರದಷ್ಟು ನಗು ಬಂದಿತು. ಅಜ್ಜಿಯ ಆಧುನಿಕತೆಯ ವಿಚಾರದ ಬಗ್ಗೆ ಹೆಮ್ಮೆ ಮೂಡಿತು.

ಬಾಬಾಬುಡನ್‌ಗಿರಿ, ಕೆಮ್ಮಣ್ಣುಗುಂಡಿ, ಆಗುಂಬೆಯ ಸುಂದರ ತಾಣದ ಚಿತ್ರಣ ಮನಮೋಹಕವಾಗಿತ್ತಲ್ಲದೆ, ಕಣ್ಮನಗಳಿಗೆ ಮುದ ನೀಡಿತು. ಈ ಪ್ರವಾಸ ಲೇಖನ ದಿಂದ ನಾವು ಅಲ್ಲಿಗೆ ಹೋದ ಅನುಭವವಾಯಿತು.

ಜ್ಯೋತಿರಾವ್‌ರವರ ಕುಂಚದಿಂದ ಮತ್ತಷ್ಟು ಚಿತ್ರಗಳು ಮೂಡಿಬರಲಿ. ಅವರ ಪರಿಚಯ ಲೇಖನ ದೊಂದಿಗೆ ರಚಿಸಿರುವ ಚಿತ್ರಕಲೆಯು ಅವರ ಸಾಧನೆ ಯನ್ನು ತಿಳಿಸುತ್ತದೆ. ಸಂಗೀತದೊಂದಿಗೆ ಮನೋ ರೋಗಗಳನ್ನು ನಿವಾರಿಸುವಲ್ಲಿ ಯಶಸ್ವಿಯಾಗಿರುವ ಡಾ। ಪದ್ಮಾಮೂರ್ತಿರವರ ಸಾಧನೆ ಶ್ಲಾಘನೀಯ.

ಮಧುರೆಯಲ್ಲಿ ಜಯಾ ವಿಜಯೋತ್ಸವದ ಬಗ್ಗೆ ಓದಿ ನಿಜಕ್ಕೂ ಆಶ್ಚರ್ಯವಾಯಿತು. ಒಬ್ಬ ಮಹಿಳಾ ಮುಖ್ಯಮಂತ್ರಿ ಅಷ್ಟು ಯಶಸ್ಸು ಗಳಿಸಿರುವುದು ನಿಜಕ್ಕೂ ಸಂತೋಷ ತರುವ ವಿಷಯ.

ಕು। ಹೆಚ್. ಗೀತಾಮೂರ್ತಿ — ತುಮಕೂರು

ಹಲವಾರು ಪ್ರತಿಭೆಯನ್ನು ರೂಢಿಸಿಕೊಂಡಿರುವ ಶಾಲಿನಿಯವರ ಮುಖಪುಟದ ಆಗಸ್ಟ್ ತಿಂಗಳ 'ವನಿತಾ'ದಲ್ಲಿನ ಅಡುಗೆಮನೆ ಸಾಹಿತ್ಯ ಓದುಗರ ಪ್ರತಿಕ್ರಿಯೆಗಳಲ್ಲಿ ಹಲವಾರು ಅಂಶಗಳು ಅಡಗಿದ್ದು ಮಹಿಳೆಯೊಬ್ಬಳು ಲೇಖಕಿಯಾಗುವ ಹಿನ್ನೆಲೆಯಲ್ಲಿನ ತೊಡಕುಗಳನ್ನು ತಿಳಿಸುವುದರೊಡನೆ, ಉತ್ತಮ ಕೃತಿ ಹೊರಬರದೇ ಇರುವುದರ ಬಗ್ಗೆಯೂ ಪ್ರತಿಕ್ರಿಯೆ ಎದ್ದಿರುವುದು ಸಮಂಜಸ.

ಸ್ವಯಂ ಉದ್ಯೋಗಿ ಉಮಾರೆಡ್ಡಿಯವರಂತವರು ಹಲವಾರು ನಿರುದ್ಯೋಗಿ ಮಹಿಳೆಯರಲ್ಲಿ ಆತ್ಮ ವಿಶ್ವಾಸ, ಸ್ಥೈರ್ಯ ಮೂಡಿಸುವಲ್ಲಿ ಕಾರಣಕರ್ತರು ಆಗಬಹು ದೆನಿಸಿತು.

'ಇವರೂ ಮನುಷ್ಯರು', 'ಮುಕ್ತಿ' ಕತೆ ಚೆನ್ನಾಗಿದ್ದು ನಮ್ಮ ಸುತ್ತಮುತ್ತಲಿನ ಸಮಾಜದ ಜನರ ವರ್ತನೆ ಯನ್ನು ಪ್ರತಿಬಿಂಬಿಸುವಂತಿತ್ತು.

ವಿಭಾ — ತುಮಕೂರು

ಮುಖಪುಟದಲ್ಲಿ ಶಾಲಿನಿವರ ಭಾವಚಿತ್ರವನ್ನು ಹೊತ್ತು ತಂದ ಈ ಬಾರಿಯ ವನಿತಾ ನಮಗೆಲ್ಲಾ ಅತೀವ ಸಂತಸ ತಂದಿದೆ. 'ಸಾಧನಾ' ಧಾರಾವಾಹಿ ಕ್ಷಣಕ್ಷಣವೂ ಕುತೂಹಲ ಕೆರಳಿಸುತ್ತ ಸಾಗುತ್ತಿದೆ. ಸಾಧನಾಳಿಗೆ ಮೂಡಿದ ಆಶಾಭಾವ ನಿರಾಶೆಯಾಗಿ ಪರಿಣಮಿಸಿದ್ದು ಬೇಸರವಾಯಿತು. 'ಇವರೂ ಮನು ಷ್ಯರು' ಮಾನವ ಸ್ವಭಾವಕ್ಕೆ ಹಿಡಿದ ಕನ್ನಡಿಯಂತಿದೆ! 'ಹದಿಹರೆಯದ ಹರಾಮಕೋರತನ' ಹಾಸ್ಯಲೇಖನ ವೆಂದು ಭಾವಿಸಿ ಓದಿದಾಗ, ನಿಜ ಸ್ಥಿತಿ ಅರಿವಾಗಿ ನಮ್ಮ ಯುವ ಪೀಳಿಗೆ ಎತ್ತ ಸಾಗಿದೆ? ಎಂದು ಗಂಭೀರವಾಗಿ ಯೋಚಿಸುವಂತಾಯಿತು. "ನಮ್ಮ ಅಜ್ಜಿಯ ಶೋಕಿ" ಉತ್ತಮವಾದ ಹರಟೆ. ಯಜ್ಞಾವತಿಯವರ ಬಾಬಾ ಬುಡನ್ ಪ್ರವಾಸ ಕಣ್ಮನಗಳಿಗೆ ತಂಪೆರೆಯಿತು!

ತರಂಗಿ — ತುಮಕೂರು


## ವನಿತಾ

ಮಹಿಳೆಯರ ಮಾಸಪತ್ರಿಕೆ

ಸಂಪುಟ : 15 ಸಂಚಿಕೆ : 12

ಸೆಪ್ಟೆಂಬರ್: 1992

ಬಿಡಿ ಪ್ರತಿ : 6-00 ರೂಪಾಯಿ

ವಾರ್ಷಿಕ ಚಂದಾ : 72/- ರೂ.

ವಿಳಾಸ

ಡಾಲ್ಟನ್ ಪಬ್ಲಿಕೇಷನ್ಸ್

ಚಂದಮಾಮ ಬಿಲ್ಡಿಂಗ್ಸ್

ಮದರಾಸು - 26

ಬೆಂಗಳೂರು ಕಚೇರಿ ವಿಳಾಸ

"ವನಿತಾ"

ಕಮಾಂಡರ್ಸ್ ಪ್ಲೇಸ್ (ಮಹಡಿ)

ರಾಜಾರಾಮ್ ಮೋಹನ್‌ರಾಯ್ ರಸ್ತೆ

ಬೆಂಗಳೂರು - 560 025

ಫೋನ್ : 220912


ಆಗಸ್ಟ್ ತಿಂಗಳ ಶಾಲಿನಿಯವರ ಮುಖಚಿತ್ರ ಹೊತ್ತು ಬಂದ ವನಿತಾ ಸುಂದರವಾಗಿದೆ. 'ಹದಿಹರೆಯದ ಹರಾಮಕೋರತನ' ಓದಿ ಮೈ ಜುಮ್ಮೆಂದಿತು. ತನು ಮೈಸೂರ್‌ರವ ನಮ್ಮ ಅಜ್ಜಿಯ ಶೋಕಿ ಹಾಸ್ಯಲೇಖನ ಓದಿ ತುಂಬಾ ನಗು ಬಂತು.

ವಿಜಯಲಕ್ಷ್ಮಿ ಧನಂಜಯ — ನಲ್ಲಸೋಪಾರ, ಮುಂಬೈ

ಆಗಸ್ಟ್ ತಿಂಗಳ ವನಿತಾದಲ್ಲಿ ಅಂಜಲಿಯವರು ಮಹಿಳೆಯರು ತಮ್ಮ ಪತಿಯ ಹೆಸರುಗಳನ್ನು ಸೇರಿಸಿಕೊಂಡು ಬರೆಯುತ್ತಾರೆ. ವನಿತಾ ಮಹಿಳೆಯರ ಪತ್ರಿಕೆ, ಆದ್ದರಿಂದ ಸ್ತ್ರೀಯರು ತಮ್ಮ ಪತಿಯ ಹೆಸರನ್ನು ಸೇರಿಸಿಕೊಂಡು ಬರೆಯುವುದು ಸರಿ ಕಾಣುವದಿಲ್ಲ ಎಂದು ಬರೆದಿದ್ದಾರೆ.

ಇದರ ಬಗ್ಗೆ ನಾನು ಅಂಜಲಿಯವರಿಗೆ ತಿಳಿಸು ವುದೇನೆಂದರೆ ವನಿತಾ ಪತ್ರಿಕೆ ಮಹಿಳೆಯರ ಪತ್ರಿಕೆ ನಿಜ. ಅಂದರೆ ಮಹಿಳೆಯರ ಬರವಣಿಗೆಗೆ ಮಾತ್ರ ಅಂದರೆ ಕಥೆ, ಕವನ, ಕಾದಂಬರಿ (ಧಾರಾವಾಹಿ) ಮುಂತಾದ ಲೇಖನಗಳನ್ನು ಪ್ರಕಟಿಸುವುದಕ್ಕೆ ವನಿತಾ ಮಹಿಳೆಯರಿಗೆ ಮೀಸಲಾಗಿದೆ. ಇಲ್ಲಿ ಪುರುಷರ ಯಾವುದೆ ಬರವಣಿಗೆಗೆ ಇಲ್ಲಿ ಸ್ವಾಗತವಿಲ್ಲ ಎಂದು ಅರ್ಥ. ಅಷ್ಟೇ ಹೊರತು ಬೇರೇನಲ್ಲ. ಅದರಲ್ಲೂ ಮಹಿಳೆಯರು ಸಮಪಾಲು ಬೇಕೆಂದು ಹೋರಾಡು ವವರಿಗೆ ಮಾತ್ರ ಇದು ಮೀಸಲಾಗಿಲ್ಲವಲ್ಲ? ಎಷ್ಟೋ ಜನ ಪತಿಯರು ಪತ್ನಿಯರಿಗೆ ಕಥೆ, ಕವನ, ಲೇಖನ ಗಳನ್ನು ಬರೆಯಲು ಪ್ರೋತ್ಸಾಹ ನೀಡುತ್ತಿರುತ್ತಾರೆ. ವನಿತಾದಲ್ಲಿ ಬರೆಯುವ ಮಹಿಳೆಯರು ತಮ್ಮ ಪತಿಯ ಪ್ರೋತ್ಸಾಹದಿಂದ ಬರೆಯುವವರೂಇರುತ್ತಾರೆ. ಆದ್ದರಿಂದ ತಮ್ಮ ಹೆಸರಿನ ಜೊತೆ ಪತಿಯ ಹೆಸರನ್ನು ಸೇರಿಸಿಕೊಂಡು ಬರೆಯುವುದರಲ್ಲಿ ತಪ್ಪೇನೂ ಇಲ್ಲ ಎಂದು ನನ್ನ ಅನಿಸಿಕೆ.

ಅನುಪಮ ಮಂಜುನಾಥ್ — ಶಿವಾರಪಟ್ಟಣ

## ವನಿತಾ ಪದಸಂಪದ—47 ಫಲಿತಾಂಶಗಳು

ಈ ಬಾರಿಯ ಸ್ಪರ್ಧೆಯಲ್ಲಿ 20 ಸ್ಪರ್ಧಿಗಳು ಗೆದ್ದಿದ್ದು, ಬಹುಮಾನದ ಹಣವನ್ನು ಅವರಿಗೆ ಸಮವಾಗಿ ಹಂಚಲಾಗುವುದು. ವಿಜೇತರ ಹೆಸರು ಗಳನ್ನು ಇಲ್ಲಿ ಕೊಡಲಾಗಿದೆ.

1. ಅನುರಾಧ ಜಿ. ಶರ್ಮ, ಮರದಾಮೂಲ (ಶಿವಮೊಗ್ಗ)
2. ಸಿ.ಕೆ. ಬಾಲಮಣಿ, ಬೆಂಗಳೂರು –41.
3. ಬಿ. ಸುಹಾಸಿನಿ, ಬೆಂಗಳೂರು–50.
4. ಎಂ.ಪಿ. ಸುಮಂಗಲಾ ರಾಜ್, ಬೆಂಗಳೂರು- 46.
5. ಮಣಿಕರ್ಣಿಕಾ ಎಸ್. ಊಟಿ.
6. ಎ.ಎನ್.ರೇವತಿ, ಬೆಂಗಳೂರು–40.
7. ಶ್ರೀಮತಿ ಗೀತಾ ಗುಡಿ, ರಾಯಚೂರು
8. ಎ.ಆರ್. ಗಿರಿಜಾ, ಮೈಸೂರು–23.
9. ಶ್ರೀಮತಿ ಸರಸ ಆರ್. ರಾಮಚಂದ್ರ, ಊಟಿ.
10 ಶ್ರೀಮತಿ ವಿಶಾಲಾಕ್ಷಿ ಶಿವಾಂ, ಚಿಕ್ಕಮಗಳೂರು.
11. ಕೆ. ಆರ್.ಗೀತಾ, ಬೆಂಗಳೂರು–19.
12. ಶ್ರೀಮತಿ ಅಯಿಷಾ ಸುಲ್ತಾನ, ಬಾಗೇಶಪುರ (ಹಾಸನ)
13. ಪ್ರೇಮಾ ಎಸ್. ಶೆಟ್ಟಿ, ಹುಬ್ಬಳ್ಳಿ
14. ಸೀತಾಲಕ್ಷ್ಮಿರಾವ್, ಮೈಸೂರು–20
15. ಶ್ರೀಮತಿ ಮಂಗಲಾ ಸಿ. ಕುಲಕರ್ಣಿ, ಗುಲ್ಬರ್ಗಾ
16. ಶ್ರೀಮತಿ ರತ್ನಕುಮಾರಿ, ಬಜತ್ತೂರು (ದ.ಕ.)
17. ಬಿ. ಪದ್ಮಾ ಬ್ಯಾರಿ, ಮಣಿಪಾಲ್
18. ಕೆ.ಜಿ. ರಮಾದೇವಿ, ಹೊಸೂರ್
19. ಜಿ.ಕೆಯು ಶ್ರೀಮತಿ, ಬೆಂಗಳೂರು–32.
20. ಶ್ರೀಮತಿ ಎಸ್. ಜಯಲಕ್ಷ್ಮಿ ಬೆಂಗಳೂರು– 19

| | | | | | | | | | | |
|---|---|---|---|---|---|---|---|---|---|---|
| 1 ಆ | ನೆ | 2 ಕಾ | ಲು | ■ | ■ | ■ | 3 ಗಾ | 4 ಜ | ನೂ | 5 ರು |
| ಪ್ರೋ | ■ | ರ್ಮಿ | ■ | 6 ನಾ | ಟ | 7 ಕ | ■ | ನ | ■ | ದ್ರ |
| ತ | ■ | 8 ಕ. | ಲಾ | ಯಿ | ■ | 9 ಪಾ | ನ | ಕ | ■ | ವೀ |
| 10 ನ | 11 ವ | ■ | ■ | ಭಾ | ■ | ಲಿ | ■ | ■ | 12 ಅ | ಣೆ |
| ■ | 13 ರ | ಸಾ | ತ | ಲ | ■ | 14 ನಿ | ರಂ | ತ | ರ | ■ |
| ■ | ದಿ | ■ | ■ | ■ | ■ | ■ | ■ | ■ | ವ | ■ |
| ■ | 15 ಗಾ | ರು | ಡಿ | 16 ಗ | ■ | 17 ಮ | ದ | ನಾ | ರಿ | ■ |
| 18 ಮ | ರ | ■ | ■ | ಬ್ಬಿ | ■ | ದ | ■ | ■ | 19 ಸು | 20 ರ |
| ರು | ■ | 21 ಮಾ | ಧು | ರಿ | ■ | 22 ರಾ | ಜೀ | 23 ವ | ■ | ಘು |
| ದಿ | ■ | ಧ | ■ | 24 ಸು | ರಿ | ಸು | ■ | ರು | ■ | ಪ |
| 25 ನ | ದೆ | ವ | ಳಿ | ■ | ■ | ■ | 26 ಗ | ಣ | ಪ | ತಿ |

# ಗಣೇಶ - ಒಂದು ಬೌದ್ಧಿಕ ಪ್ರತೀಕ

— ಮೀರಾ

ಹಿಂದುಗಳು ಪೂಜಿಸುವ ಅನೇಕಾನೇಕ ದೇವತೆಗಳಲ್ಲಿ ಗಣೇಶನು ಅಗ್ರಪೂಜ್ಯನು. ಗಣೇಶನನ್ನು ಗಣಪತಿ, ಗಜಾನನ, ವಿಘ್ನೇಶ್ವರ, ವಿನಾಯಕ, ಏಕದಂತ, ಮೂಷಿಕವಾಹನ ಎಂದು ಬಗೆಬಗೆಯ ಹೆಸರುಗಳಿಂದ ಕರೆಯುತ್ತಾರೆ. ವಿಘ್ನಗಳಿಗೆಲ್ಲ ಮೂಲ ಅವನೇ. ಅಂದರೆ ವಿಘ್ನಗಳ ಈಶ್ವರ ಎಂದು ತಿಳಿದು, ಯಾವುದೇ ಶುಭ ಕಾರ್ಯಾರಂಭದಲ್ಲಿ ಮೊದಲ ಪೂಜೆಯನ್ನು ಗಣೇಶನಿಗೆ ಸಲ್ಲಿಸುತ್ತಾರೆ. ಉತ್ತರ ಭಾರತದಲ್ಲಿ ಈ ರೀತಿ ಕಾರ್ಯಾರಂಭ ಮಾಡುವುದನ್ನು 'ಶ್ರೀ ಗಣೇಶ' ಮಾಡುವುದು ಎಂದು ಹೇಳಿ ಗಣೇಶನಿಗೆ ಒಂದು ಅತಿಶಯ ಸ್ಥಾನವನ್ನು ಕೊಟ್ಟಿದ್ದಾರೆ.

ಈಶ್ವರನಾಗಲಿ, ವಿಷ್ಣುವಾಗಲಿ ಬಹಳ ದೊಡ್ಡ ದೇವತೆಗಳು ಕೈಗೆ ಎಟುಕದವರು. ಸುಲಭದಲ್ಲಿ ಸ್ಮರಿಸಲು, ಪೂಜಿಸಲು, ಬೇಡಲು-ಅಭೀಷ್ಟಗಳು ಪೂರೈಸುವುದು ಎಂದು ಭರವಸೆ ನೀಡುವ ಅಭಯ ಹಸ್ತನಾದ ಹೊಸ ದೇವತೆಯ ಸೃಷ್ಟಿಗೆ ತೊಡಗಿದಾಗ ನಿರ್ಮಾಣವಾದ ದೇವರೇ ಗಣೇಶ. ಗಜಾನನ, ತನ್ನ ಆನೆಯ ಮೊಗದಿಂದಾಗಿ ನಮಗೆ ಅತಿ ಸಮೀಪದವನಾಗಿದ್ದಾನೆ. ಆನೆ ಭೂಲೋಕದ ಪ್ರಾಣಿ-ಜನಪ್ರಿಯ ಪ್ರಾಣಿ. ಬಹಳ ಪ್ರಯೋಜನಕಾರಿ. ಅದರ ಮುಖವುಳ್ಳ ದೇವನೂ ಎಲ್ಲರಿಗೂ ಹತ್ತಿರದವನು, ಪ್ರೀತಿಪಾತ್ರನು.

ಗಣಪತಿ ಮೂಲತಃ ದ್ರಾವಿಡರ ಕಲ್ಪನೆ. ಕಾಲಕ್ರಮದಲ್ಲಿ ಆರ್ಯರು ಭರತಖಂಡಕ್ಕೆ ಬಂದು ನೆಲಸಿ, ಅನೇಕ ವರ್ಷಗಳ ಹೋರಾಟದ ನಂತರ ಇಲ್ಲಿನ ದ್ರಾವಿಡರೊಡನೆ ಹೊಂದಾಣಿಕೆ ಮಾಡಿಕೊಂಡು, ದ್ರಾವಿಡರ ಪ್ರಮುಖ ದೈವವೆಂದು ಪೂಜಿಸಲ್ಪಡುತ್ತಿದ್ದ ಗಣಪತಿಯನ್ನು ತಮ್ಮ ಸಂಸ್ಕೃತಿಯಲ್ಲಿ ಸೇರಿಸಿಕೊಂಡರೆಂಬ ಪ್ರತೀತಿ ಇದೆ. ಈಗ ಗಣಪತಿ ಹಿಂದೂಗಳ ಸಕಲ ಪಂಥದವರಿಂದಲೂ ಅಗ್ರಪೂಜೆಗೊಳ್ಳುವ ಏಕೈಕ ದೇವತೆ. 'ಸತ್, ಚಿತ್, ಆನಂದ. ಜ್ಞಾನ, ಇಚ್ಛಾ, ಕ್ರಿಯಾ, ವಿದ್ಯಾ, ಬುದ್ಧಿ, ಸಿದ್ಧಿ, ಬ್ರಹ್ಮ, ವಿಷ್ಣು. ರುದ್ರ, ಲಕ್ಷ್ಮೀ, ಶಾಂಭವೀ, ಸರಸ್ವತೀ ಇವೆಲ್ಲವೂ ನೀನೇ' ಎಂದು ಗಣೇಶೋಪನಿಷತ್ತಿನಲ್ಲಿ ಗಣೇಶನ ಮಹಿಮೆಯನ್ನು ಹೇಳಲಾಗಿದೆ.

**ಋಗ್ವೇದದಲ್ಲಿ (2 : 23 : 1)**

ಗಣಾನಾಂ ತ್ವಾಂ ಗಣಪತಿಂ ಹವಾಮಹೇ  
ಕವಿಂ ಕವೀನಾಂ ಉಪವಿಶ್ರವಸ್ತವಂ  
ಜ್ಯೇಷ್ಠ ರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ  
ಸಃ ಶೃಣ್ವನ್ನೊತಿಭಿಃ ಸೀದ ಸಾದನಂ॥

ಎಂದು ಗಣಪತಿಯ ಪ್ರಸ್ತಾಪವಿದೆ. ಅಂದರೆ ಗಣಗಳ ಪತಿಯೂ, ಕವಿಗಳಿಗೆ ಕವಿಯೂ, ಬ್ರಹ್ಮ ವಿಶ್ರುತನೂ, ಪ್ರಣವ ಸ್ವರೂಪನೂ, ಬ್ರಹ್ಮ ಜ್ಞಾನಿಯೂ ಆದ ನಿನ್ನನ್ನು ಆಹ್ವಾನಿಸುವೆವು. ಎಲೈ ಮಂತ್ರಗಳ ಅಧಿರಾದನೇ, ನಮ್ಮ ಕರೆಯನ್ನು ಆಲಿಸಿ-ಅನುಗ್ರಹಿಸು. ನಿನಗಾಗಿಯೇ ಸಿದ್ಧಪಡಿಸಿದ ಪೀಠದಲ್ಲಿ ಆಸೀನನಾಗು ಎಂದು. ಇಲ್ಲಿ ಬರುವ ಬ್ರಹ್ಮಣಸ್ಪತಿಯು ಬ್ರಹ್ಮ, ವೇದ, ಶಬ್ದ, ಛಂದ, ಮಂತ್ರ ಇವುಗಳೆಲ್ಲದರ ಸ್ವರೂಪನು ಎಂದು '.on the veda' ಎಂಬ ತಮ್ಮ ಗ್ರಂಥದಲ್ಲಿ ಮಹರ್ಷಿ ಅರವಿಂದರು ವ್ಯಾಖ್ಯಾನ ಮಾಡಿದ್ದಾರೆ.

ಯಜುರ್ವೇದದ ತೈತ್ತರೀಯ ಸಂಹಿತೆಯಲ್ಲಿ "ಗಣೇಭ್ಯೋ ಗಣಪತಿ ಭಶ್ವವೋ ನಮಃ" ಎಂಬ ಗಣಪತಿ ಸ್ತುತಿ ಮಂತ್ರವಿದೆ. ಗಣಪತಿ ಸೂರ್ಯ, ಗಣಪತಿ, ಶಕ್ತಿ, ಶಿವ, ವಿಷ್ಣು ಈ ಪಂಚಾಯತನ ದೇವತೆಗಳ ಪ್ರತೀಕ ಎಂಬ ನಂಬಿಕೆಯಿದೆ. ಮನುಷ್ಯನ ದೇಹದ ಆರು ಚಕ್ರಗಳಲ್ಲಿ ಮೊದಲನೆಯ ಮೂಲಾಧಾರ ಚಕ್ರಕ್ಕೆ ನಾಲ್ಕು ದಳ-ಅದರ ದೇವತೆ ಗಣಪತಿ ಎಂದೂ ಹೇಳುವುದುಂಟು.

ವೈದಿಕ ಸಾಹಿತ್ಯದಲ್ಲೂ, ಮುದ್ಗಲ, ಸ್ಕಂದ, ಭಾಗವತ, ಉಪನಿಷತ್ತುಗಳಲ್ಲೂ ಗಣೇಶನ ಪ್ರಸ್ತಾಪವಿದೆ. ಇವೆಲ್ಲ, ಗಣೇಶನು ಇಷ್ಟಾರ್ಥಗಳನ್ನು ಪೂರೈಸುವ ಶುಭಕಾರ್ಯಗಳಲ್ಲಿ ಆದಿ ಪೂಜಿತನಾದ ದೇವರೆಂದೇ ಸಾರುತ್ತವೆ.

ಪೌರಾಣಿಕ ಸಾಹಿತ್ಯದಲ್ಲಿ ಗಣೇಶನು ವಿದ್ಯೆ, ಬುದ್ಧಿ, ಸಿದ್ಧಿಗಳಿಗೆ ಅಧಿಪತಿ ಎನಿಸಿಕೊಂಡಿದ್ದಾನೆ. ಅಮರಕೋಶದಲ್ಲಿ,

ಆದಿತ್ಯ ವಿಶ್ವವಸ ವಸ್ತು ತಾ ಭಾಸ್ಕರಾನಿಲಾಃ  
ಮಹಾರಾಜಿತ ಸ್ವಾಧ್ಯಾಶ್ಚಾ ರುದ್ರಾಶ್ಚಾ  
ಗಣದೇವತಾಃ

ಎಂಬ ಗಣೇಶ ಸ್ತುತಿಯಿದೆ.

'ಓಂ ನಮಸ್ತೇ ಗಣಪತಯೇ

ತ್ವಮೇವ ಪ್ರತ್ಯಕ್ಷಂ ತತ್ವಮಸಿ' ಎಂಬ ಸ್ತೋತ್ರದಿಂದ ದೇವಾಲಯಗಳಲ್ಲೂ ಗಣೇಶ ಮಂತ್ರ ಪಠಿಸುತ್ತ ಪೂಜಿಸುವ ವಾಡಿಕೆಯಿದೆ. ಅಂತೆಯೇ ಮಹಾಭಾರತದಂತಹ ಬೃಹತ್ ಗ್ರಂಥ ರಚನೆಗೆ ಭಗವಾನ್ ವ್ಯಾಸರು ಶೀಘ್ರಲಿಪಿಕಾರನಾಗಿ ಗಣಪತಿಯನ್ನೇ ನೇಮಿಸಿದರು.

## ಗಣಪತಿಯ ಮೂಲ

ಗಣೇಶ ಆಕಾರದಲ್ಲೂ ವಿಲಕ್ಷಣನೇ. ನಮ್ಮ ಜನ ಒಳ್ಳೆಯ ಕಥೆಗಾರರು ಎಂಬುದಕ್ಕೆ ಸಾಕ್ಷಿ ಎಂಬಂತೆ ಗಣೇಶ ಸೃಷ್ಟಿಗೆ ಒಂದು ಅದ್ಭುತವಾದ ಕಥೆಯನ್ನೇ ಹೆಣೆದಿದ್ದಾರೆ. ಮಾನವರಿಗಿರುವಂತೆ ದೇವತೆಗಳಿಗೂ ವಂಶಾವಳಿಗಳನ್ನು ರಚಿಸಿರುತ್ತಾರೆ. ಇದಕ್ಕೆ ಗಣೇಶನೇನೂ ಹೊರತಾಗಿಲ್ಲ.

ಗಣೇಶನ ಸೃಷ್ಟಿಗೆ ಸಂಬಂಧಿಸಿದಂತೆ ನಮ್ಮ ಪುರಾಣದಲ್ಲಿ ಪ್ರಚಲಿತವಿರುವ ಕಥೆಯ ಪ್ರಕಾರ, ದೇವಿ ಪಾರ್ವತಿ ತನ್ನ ಮೈಯ ಬೆವರು ಮತ್ತು ಧೂಳಿನ ಕಣಗಳಿಂದ ಒಂದು ಬೊಂಬೆಯನ್ನು ಮಾಡಿ, ಅದಕ್ಕೆ ಜೀವತುಂಬಿ, ಯಾರು ಬಂದರೂ ಒಳಗೆ ಬಿಡದಂತೆ ಕಾವಲಾಗಿ ಕೈಲಾಸ ದ್ವಾರದಲ್ಲಿ ನಿಲ್ಲಿಸಿ, ಮಂಗಳಸ್ನಾನಕ್ಕೆ ತೆರಳುತ್ತಾಳೆ. ಕಾರ್ಯಾರ್ಥವಾಗಿ ಹೊರಹೋಗಿದ್ದ ಶಿವನು ಕೈಲಾಸಕ್ಕೆ ಹಿಂದಿರುಗಿ ಬಂದಾಗ ಬಾಗಿಲಿನಲ್ಲಿ ಅಪರಿಚಿತ ತರಳ ತಡೆಯುತ್ತಾನೆ. ಕುಪಿತಗೊಂಡ ಶಿವನು ಅವನನ್ನು ನಾಶಮಾಡುತ್ತಾನೆ (ತಲೆ ಕಡಿಯುತ್ತಾನೆ) ಪಾರ್ವತಿಯು, ತನ್ನ ಮಗನು ಹತನಾದುದನ್ನು ಕಂಡು ಕ್ರೋಧಗೊಂಡಾಗ, ಸ್ತ್ರೀ ಶಕ್ತಿಯ ಪ್ರಳಯಕೋಪಕ್ಕೆ ತಲ್ಲಣಿಸಿದ ದೇವ ದೇವತೆಗಳು, ದೇವಿಯನ್ನು ಶಾಂತಳಾಗುವಂತೆ ಪ್ರಾರ್ಥಿಸುತ್ತಾರೆ. ಸತ್ತ ಮಗನಿಗೆ ಮತ್ತೆ ಜೀವ ತುಂಬುವಂತೆ ಮಾಡುವುದಾಗಿ ಭರವಸೆ ನೀಡುತ್ತಾರೆ. ಆ ಕೂಡಲೆ ಶಿವನು ತನ್ನ ಅಪಾರವಾದ ಪ್ರಮಥ (ಗಣ) ರನ್ನು ಕರೆದು ಆಜ್ಞೆ ಹೊರಡಿಸುತ್ತಾನೆ. 'ಉತ್ತರ ದಿಕ್ಕಿಗೆ ಶಿರವಿಟ್ಟು ಮಲಗಿದ ಯಾರದ್ದೇ ಆಗಲಿ ತಲೆ ಕಡಿದು ತನ್ನಿ' ಎಂದು. ಮರುಕ್ಷಣದಲ್ಲೇ ಗಣಗಳೆಲ್ಲ ದಿಕ್ಕು ದಿಕ್ಕಿಗೆ ಹೊರಡುತ್ತಾರೆ. ಅವರಲ್ಲಿ ಒಂದು ಗುಂಪು ಭೂಲೋಕಕ್ಕೂ ಆಗಮಿಸುತ್ತದೆ. ಹಿಮಾಲಯಾ ಪರ್ವತ ಪ್ರದೇಶದ ಅರಣ್ಯದಲ್ಲಿ ಉತ್ತರ ದಿಶೆಗೆ ತಲೆಯಿಟ್ಟು ಮಲಗಿದ್ದ ಆನೆಯೊಂದನ್ನು ಕಂಡು ಒಡೆಯನ ಆಜ್ಞೆಯಂತೆ ಅದರ ತಲೆ ಕಡಿದು ತಂದು ಶಂಕರನಿಗೆ ಅರ್ಪಿಸುತ್ತಾರೆ. ಶಿವನು, ದೇವಾನು ದೇವತೆಗಳ ಸಮ್ಮುಖದಲ್ಲಿ, ವಿಧಿವತ್ತಾಗಿ ಆ ತಲೆಯನ್ನು ಸತ್ತ ಬಾಲಕನ ಮುಂಡಕ್ಕೆ ಜೋಡಿಸಿದಾಗ ರುಂಡ ಮುಂಡಗಳೆರಡೂ ಅಂದವಾಗಿ ಹೊಂದಿಕೊಳ್ಳುತ್ತವೆ. ನಂತರ ಶಿವಶಕ್ತಿಯರೀರ್ವರೂ ಅದಕ್ಕೆ ಜೀವ ತುಂಬುತ್ತಾರೆ. ಹೀಗೆ ಗಜಮುಖನಾಗಿ ಶೋಭಿಸಿದ ಆ ನವದೇವ ಪುತ್ರನಿಗೆ ದೇವತೆಗಳೆಲ್ಲ ನಾನಾ

ವರಗಳನ್ನು ದಯಪಾಲಿಸುತ್ತಾರೆ. ಶಿವನು ತನ್ನ ಪುತ್ರನನ್ನು ಗಣಗಳ ಅಧಿಪತಿಯಾಗಿ ಮಾಡುತ್ತಾನೆ. ಇದು ಕಥೆ.

ಈ ಕಥೆಯ ವಿಶ್ಲೇಷಣೆಯನ್ನು ಹೀಗೆ ಮಾಡಬಹುದು. ಪಾರ್ವತಿ, ಸ್ತ್ರೀ ಶಕ್ತಿ, ತನ್ನ ದೇಹದ ಮೃತ್ತಿಕೆಯಿಂದ ನಿರ್ಮಿತವಾದ ಬೊಂಬೆಗೆ ಜೀವ ತುಂಬುತ್ತಾಳೆ. ಇದು 'the theory of reproduction' ಅಂದರೆ ಜೀವೋತ್ಪತ್ತಿ ಸಿದ್ಧಾಂತಕ್ಕೆ ಹೊರತಾದುದು. ಏಕೆಂದರೆ ಯಾವುದೇ ಹೊಸ ಜೀವ ಸೃಷ್ಟಿ ಸ್ತ್ರೀ ಪುರುಷರ ಸಂಯೋಗದಿಂದ ಮಾತ್ರ ಸಾಧ್ಯ. ಕೇವಲ ಸ್ತ್ರೀ ಅಥವಾ ಪುರುಷ ಶಕ್ತಿ ಯಾವ ಜೀವಿಯನ್ನೂ ನಿರ್ಮಾಣ ಮಾಡಲಾರದು. ಸ್ತ್ರೀ ಶಕ್ತಿರೂಪಿಣಿಯಾದ ಪಾರ್ವತಿ ದೇವರಾದ್ದರಿಂದ ತಾನು ಸೃಷ್ಟಿಸಿದ ಮೂರ್ತಿಗೆ ಜೀವ ತುಂಬಿದಳು. ಆದರೆ ಅದು ಊರ್ಜಿತವಾಗಲಿಲ್ಲ. ಲಯಕಾರಕನಾದ ಶಿವನು ಅದು 'ಅಸತ್' ಎಂದು ಅದನ್ನು ನಾಶಗೊಳಿಸಿದನು. ಆದರೆ ಸ್ತ್ರೀ ಶಕ್ತಿಯ ಪ್ರಳಯ ಕ್ರೋಧಕ್ಕೆ ಯಾವ ಪುರುಷನೇ ಆಗಲಿ ಮಣಿಯಲೇ ಬೇಕಲ್ಲವೆ? ಆದ್ದರಿಂದಲೇ ಶಿವನು ತನ್ನಿಂದ ಹತವಾದ ಬೊಂಬೆಗೆ ಜೀವ ತುಂಬುವ ಆಶ್ವಾಸನೆ ಕೊಡುತ್ತಾನೆ. ಆದರೆ ಕಡಿದ ರುಂಡವನ್ನೇ ಸೇರಿಸಲಾಗದು. ಏಕೆಂದರೆ ಆ ಮೃತ್ತಿಕೆಯ ರುಂಡ ಪರಿಪೂರ್ಣವಲ್ಲ. ಅಪೂರ್ಣ. ಅದಕ್ಕೇ ಗಣಗಳು ತಂದ ಗಜಮುಖವನ್ನು ಅಳವಡಿಸುತ್ತಾನೆ. ಅದಕ್ಕೆ ಜೀವನವನ್ನೂ, ತೇಜಸ್ಸನ್ನೂ ನೀಡುತ್ತಾನೆ. ಈ ಪ್ರಕೃತಿ-ಪುರುಷರು ಸಾಕ್ಷಾತ್ ಪಾರ್ವತೀ-ಪರಮೇಶ್ವರರಾದ್ದರಿಂದ, ಅವರಿಂದ ಈ ರೀತಿ ನಿರ್ಮಾಣವಾದ ಮೂರ್ತಿಗೆ ದೈವತ್ವವನ್ನು ಆರೋಪಿಸಿ ಪೂಜಿಸುತ್ತಾರೆ.

ಏಕೆ ಉತ್ತರ ದಿಕ್ಕಿಗೇ ಇರಬೇಕು—ಎಂಬ ಪ್ರಶ್ನೆ ಏಳುತ್ತದೆ. ಹಿಮಾಲಯಾ ಪರ್ವತ ಭರತಖಂಡದ ಉತ್ತರ ದಿಕ್ಕಿನಲ್ಲಿದೆ. ಅದು ತಪೋಭೂಮಿ, ಪಾರ್ವತೀದೇವಿಯ ತವರು ಮನೆಯೂ ಹೌದು. ಅದಲ್ಲದೆ ಉತ್ತರವೋ ದಕ್ಷಿಣವೋ, ಒಂದು ಗುರುತು, ಒಂದು ನಿಖರತೆ ಬೇಕಲ್ಲ. ಯಾವುದೇ ಒಂದು ದಿಕ್ಕನ್ನು ಸೂಚಿಸದಿದ್ದರೆ ಅನೇಕಾನೇಕ ತಲೆಗಳು ಕಡಿಯಲ್ಪಟ್ಟು, ಪ್ರಾಣಗಳು ಅನ್ಯಾಯವಾಗಿ ನಾಶವಾಗುತ್ತಿದ್ದವು. ಒಂದು ನಿರ್ದಿಷ್ಟವಾದ ಗುರುತಿಗೇ ಮತ ಹಾಕಿ ಎಂದು ಮತದಾರರಿಗೆ ಸೂಚನೆ ಕೊಟ್ಟಂತೆ, ಅಥವಾ ವೈಜ್ಞಾನಿಕವಾಗಿ ವಿಶ್ಲೇಷಿಸಿದರೆ ಉತ್ತರ ದಿಕ್ಕಿನಲ್ಲಿ ಭೂಮಿಗೆ ಅಪಾರವಾದ ಗುರುತ್ವಾಕರ್ಷಣ ಶಕ್ತಿಯಿದೆ. ಆ ದಿಕ್ಕಿಗೆ ತಲೆಯಿಟ್ಟು ಮಲಗಿದರೆ, ಆ ಸೆಳೆತದಿಂದಾಗಿ ಮಿದುಳಿನ ಮೇಲೆ ಪರಿಣಾಮ ಉಂಟಾಗುತ್ತದೆ. ಅದಕ್ಕೇ ಈಗಲೂ ಹಿರಿಯರು 'ಉತ್ತರ ದಿಕ್ಕಿಗೆ ತಲೆಯಿಟ್ಟು ಮಲಗಬೇಡ' ಎಂದು ಎಚ್ಚರಿಕೆ ಕೊಡುವುದುಂಟು.

ಪಾರ್ವತಿ ಸ್ನಾನಕ್ಕೆ ಹೋಗುವುದರ ಜಾನಪದ ವಿಶ್ಲೇಷಣೆ ಹೀಗಿದೆ-ಶಿಶು ಜನನ ಕಾಲದಲ್ಲಿ ಮೈಯಲ್ಲಿರುವ ಮಲಿನವೆಲ್ಲ ಹೊರಬರುತ್ತದೆ. ಆ ಮಲಿನದಲ್ಲೇ ಕೆಸರಿನಲ್ಲಿ ಕಮಲ ಉದಿಸುವಂತೆ ಶಿಶು ಹುಟ್ಟುವುದು. ಅಂತೆಯೇ ಪಾರ್ವತಿಯ ಮೈಯ ಮಾಲಿನ್ಯ ಕಳೆದು, ಪುತ್ರನಿಗೆ ಜೀವ ತುಂಬಿದ ಮೇಲೆ, ಮೈ ಮನಗಳು ಶುದ್ಧವಾಗಲು ಜಗಜ್ಜನನಿ ಮಂಗಳ ಸ್ನಾನಕ್ಕೆ ಹೋಗುತ್ತಾಳೆ. ಇದು ಜಾನಪದ ದೃಷ್ಟಿ. ಅಂದರೆ, ಜನಸಾಮಾನ್ಯರಲ್ಲಿ ಸಂಭವಿಸುವ ಇಂತಹ ಕ್ರಿಯೆಗಳನ್ನೆಲ್ಲ ದೇವತೆಗಳಿಗೂ ಆರೋಪಿಸಿ ಕಾಣುವುದು ಶುದ್ಧ ಜಾನಪದ ವೈಶಿಷ್ಟ್ಯ.

## ಗಣೇಶನ ಮಂತ್ರಗಳ ವ್ಯಾಖ್ಯಾನ

'ಓಂ ಗಣಪತಯೇನಮಃ' 'ಓಂ' ಎಂಬುದು ವೈದಿಕ ಧರ್ಮದಲ್ಲಿ ಮೂಲಾಕ್ಷರ. ಪರಮಾತ್ಮನ ಸುಗುಣ-ನಿರ್ಗುಣ ರೂಪವೇ ಓಂಕಾರ. ಗಣಪತಿಯ ಮೊದಲ 'ಗ'ವು ಬೀಜಾಕ್ಷರ. ಗಣ ಎಂದರೆ ಗುಂಪು. ಅಂದರೆ ಪ್ರಜೆಗಳು (Republic). ಪ್ರಜೆಗಳಿಗೆ ತಮ್ಮನ್ನು ಆಳಲು ಒಬ್ಬ ನಾಯಕ ಬೇಕಲ್ಲವೆ? ಕೇಂದ್ರ ಸರ್ಕಾರವು ರಾಜ್ಯ ಸರ್ಕಾರದ ಪ್ರಜೆಗಳಿಗೆ ತಮಗೆ ಬೇಕಾದ ನಾಯಕನನ್ನು ಆರಿಸಬೇಕೆಂದು ಆದೇಶವಿತ್ತಾಗ, ಪ್ರಜೆಗಳು ತಮ್ಮ ಪ್ರತಿನಿಧಿಯನ್ನು ಚುನಾಯಿಸುವಂತೆ, ಶಿವನಿಂದ ಆದೇಶಿಸಲ್ಪಟ್ಟ ಗಣಗಳು ತಮ್ಮ ನಾಯಕನನ್ನು ಈ ರೀತಿ ಆರಿಸುತ್ತಾರೆ. ಅಂತೆಯೇ ಅವನು ಗಣಗಳ ಪತಿ ಆದದ್ದು.

ಗಾಣಪತ್ಯವು ಕಲಿಯುಗ ಧರ್ಮ-ಭರತ ವರ್ಷದ ಜೀವನ ಸಂಕೇತ. ಅಂದರೆ ರಾಜಾ-ಪ್ರಜಾ ಸಂಬಂಧ ಸೂಚಕ ಸ್ವರೂಪ. ವಿಘ್ನೇಶ ನಾಮದ ಪ್ರತೀಕವೆಂದರೆ ಗಣಪತಿಯ ಮೂಲದಲ್ಲೇ ವಿಘ್ನವು ಬಂದಿದೆ. ಅವನ ಶಿರವನ್ನು ಶಿವನು ಕಡೆದ. ಇದು ಗಣೇಶನಿಗೆ ಒದಗಿದ ದೊಡ್ಡ ವಿಘ್ನ. ಆದರೆ ತಾಯಿಯ ಆಜ್ಞಾಪಾಲನೆ ಮಾಡಿದ ದ್ಯೋತಕವಾಗಿ, ತಾಯಿಯ ಪ್ರೇಮ, ತಂದೆಯ ಆಶೀರ್ವಾದದಿಂದ ಮರಳಿ ಜೀವ ಪಡೆಯುತ್ತಾನೆ. ಇಂತಹ ವಿಘ್ನವನ್ನು ಎದುರಿಸಿ, ಗೆದ್ದು, ದೇವ ದೇವತೆಗಳಿಂದ ವರ ಪಡೆದು ದೇವನಾದ ಗಣೇಶ ನಿಜಕ್ಕೂ ವಿಘ್ನಗಳ ಅಧಿಪತಿಯಾಗಲು ತಕ್ಕವನು. ವಿಘ್ನೇಶ್ವರನನ್ನು ಸಾಮಾನ್ಯ ಮನುಷ್ಯರಿರಲಿ, ದೇವಾನು ದೇವತೆಗಳಾದ ಇಂದ್ರ ಮೊದಲಾದವರೇ ಅಲ್ಲದೆ ಸಾಕ್ಷಾತ್ ಪರಮಾತ್ಮನ ಅವತಾರಗಳಾದ ಶ್ರೀರಾಮ-ಶ್ರೀಕೃಷ್ಣರೂ ಪೂಜಿಸಿ ಕೃತಾರ್ಥರಾಗಿದ್ದಾರೆ. ತನ್ನನ್ನು ಭಜಿಸುವವರನ್ನು ಕಾಪಾಡುವ ಗಣಪತಿ ತನ್ನನ್ನು ಉದಾಸೀನ ಮಾಡಿದವರ ವಿನಾಶವನ್ನೂ ಮಾಡಿಯಾನು. ಜಗನ್ನಾಥದಾಸರು, ಗಣೇಶನನ್ನು ಸ್ತುತಿಸದಿದ್ದುದೇ ಕೌರವನ ನಾಶಕ್ಕೆ ಕಾರಣ ಎಂದಿದ್ದಾರೆ.

## ಮೂಷಿಕ ವಾಹನವೇಕೆ?

ಲಂಬೋದರನೂ, ಸ್ಥೂಲಕಾಯನೂ ಆದ ಗಣೇಶನ ಭಾರವನ್ನು ತಡೆಯಲು ಇಲಿಯಿಂದ ಸಾಧ್ಯವೆ? ಇಲಿ ನಾಶದ, ಲೂಟಿಯ ಸಂಕೇತ. ಕಣದಲ್ಲಿ ತುಂಬಿದ ದವಸಧಾನ್ಯಗಳನ್ನೂ,



ದಾಸ್ತಾನುಗಳನ್ನೂ ತಿಂದು ಬಹಳ ಹಾನಿಯನ್ನೂ, ವಿಪತ್ತನ್ನೂ ಉಂಟು ಮಾಡುತ್ತದೆ. ಚಪಲತೆ ಮತ್ತು ಭೋಗಗಳ ಪ್ರತೀಕವಾದ ಇಲಿ ನಿಶಾಚರಿ. ಮೋಹ ಮತ್ತು ಅಜ್ಞಾನಗಳ ರೂಪವೂ ಹೌದು. ಅದನ್ನು ದಮನ ಮಾಡುವನೋ ಎಂಬಂತೆ, ಇಲಿಯನ್ನೇ ತನ್ನ ವಾಹನವನ್ನಾಗಿ ಮಾಡಿಕೊಂಡಿದ್ದಾನೆ.

## ಗಜವದನ

ಆನೆ ಜನಪ್ರಿಯ ಪ್ರಾಣಿ. ಆಬಾಲವೃದ್ಧರಾದಿಯಾಗಿ ಸರ್ವಜನರಿಗೂ ಇಷ್ಟವಾದ ಪ್ರಾಣಿ. ಅದರ ಸ್ನೇಹ ಸೂಸುವ ಪುಟ್ಟ ಕಣ್ಣುಗಳೂ, ಉದ್ದ ಸೊಂಡಿಲು, ಅಗಲವಾದ ಕಿವಿಗಳು, ಹೊಳೆಯುವ ಬಿಳಿ ದಂತಗಳು ಎಲ್ಲರಿಗೂ ಪ್ರಿಯ. ಆನೆ the emblem of wisdom of

---

### ಉರಿ ಕಳಚಿದ್ದಾನೆ...

*ಸಂಜೆಯ ಸೂರ್ಯನನ್ನೇ*
*ಪ್ರಕೃತಿ ಪ್ರೀತಿಸುವುದೇಕೆ?*
*ಸಂಜೆ - ಕಣ್ತುಂಬಾ ಬಣ್ಣ ಬೀರು*
*ತ್ತಾನೆಂದೋ?*

*ಉರಿ ಕಳಚಿದ್ದಾನೆ*
*ಇನ್ನೇನು ಕಂತುತ್ತಾನೆ - ಎಂದೊ?*

*ಇನ- ತಾನು ಮುಳುಗಿ*
*ಕತ್ತಲೆ ಹರಡಿ*
*ಪ್ರಕೃತಿಯನ್ನು ವಿರಮಿಸಬಿಡುತ್ತಾನಲ್ಲ?*
*ಹೀಗೆಂದೋ? ಪ್ರಕೃತಿ ಮರೆಯಾಗುವ*
*ಸೂರ್ಯನನ್ನು ಮೋಹಿಸುತ್ತಾಳೆಯೋ?*

*ವಿಶಾಲವಾದ ಬಾನಿದೆ*
*ಎಷ್ಟೆಷ್ಟೋ ನಕ್ಷತ್ರಗಳಿವೆ*
*ಚಂದ್ರನೂ ಒಂಟಿಯೇ*
*ಮಗ್ಗುಲಲ್ಲೇ ಮನ ಬಿಚ್ಚಿ ಹರಿಯುವ*
*ಸಾಗರವೂ ಇದೆ.*
*ಆದರೂ ಪ್ರಕೃತಿ ಮುಳುಗುವ*
*ಸೂರ್ಯನನ್ನೇ ಧ್ಯಾನಿಸುವುದೇಕೆ?*
*ಪುನರ್ಜನ್ಮ ಇದೆ*
*ಮತ್ತೆ - ಹೊಚ್ಚ ಹೊಸಬನಾಗುತ್ತಾನೆ*
*ಬೆಳಕು - ತುಂಬುತ್ತಾನೆಂದೊ?*

—ಡಾ। ಕೆ. ಪೂರ್ಣಿಮಾ ಭಟ್,
ಬೆಂಗಳೂರು



moderation of eternity and also pity ಎಂದು the 'dictionary of symbols'ನಲ್ಲಿ ವರ್ಣಿಸಲಾಗಿದೆ. ಆನೆಯ ಮುಖವುಳ್ಳ ಗಣೇಶ ಜ್ಞಾನದ ಸ್ವರೂಪನು. ಅಪಾರ ಬುದ್ಧಿ, ವಿವೇಕಗಳನ್ನು ಅಡಗಿಸಿಕೊಳ್ಳಲು ಆನೆಯ ತಲೆಯೇ ಬೇಕು !

## ಮೋದಕಪ್ರಿಯ-ದೂರ್ವಾಪ್ರಿಯ

ಮೋದಕ ಬ್ರಹ್ಮಾಂಡಕ್ಕೆ ಪರ್ಯಾಯಪದ, ಮೋದಕ ಅಂದರೆ ಮೋದ ಅಂದರೆ ಆನಂದ. ಗಣೇಶ ನಿತ್ಯಾನಂದ ಸ್ವರೂಪನು. 'ದೂರ್ವಾ' ಅಂದರೆ ಗರಿಕೆ ಹುಲ್ಲು. ಆನೆ ಹುಲ್ಲನ್ನು ತಾನೆ



ತಿನ್ನುವುದು. ಆದ್ದರಿಂದ ಆನೆಯ ಮುಖವುಳ್ಳ ಗಣೇಶನಿಗೂ ಗರಿಕೆ ಹುಲ್ಲು ಪ್ರಿಯ ಎಂದು ಕಲ್ಪಿಸಿಕೊಂಡು, ಪತ್ರ-ಪುಷ್ಪಗಳು ಜೊತೆಗೆ ಗರಿಕೆ-ಪತ್ರೆಗಳಿಂದಲೂ ಗಣೇಶನನ್ನು ಅರ್ಚಿಸುತ್ತಾರೆ.

## ಪಾಶಾಂಕುಶಧರ

ಪಾಶವು ಮೋಹ ಮತ್ತು ತಮೋಗುಣಗಳ ಪ್ರತೀಕ. ಅಂಕುಶ ಪ್ರವೃತ್ತಿ ರೂಪದ್ದು-ರಜೋಃ ಗುಣ ಪ್ರತೀಕ. ಈ ಎರಡೂ ಗುಣಗಳನ್ನು ಅಂಕೆಯಲ್ಲಿಟ್ಟುಕೊಂಡು ಸಾತ್ವಿಕ ಸ್ವರೂಪನಾದ ಗಣಪತಿಯು ವಿರಾಜಿಸಿದ್ದಾನೆ ಎಂಬ ನಂಬಿಕೆ. ಮಾಯಾ ಪಾಶವನ್ನು ಬಿಗಿಹಿಡಿದು, ಅಹಂಕಾರ



ವನ್ನು ಅಂಕೆಯಲ್ಲಿಟ್ಟುಕೊಂಡು, ಹಾವು-ಇಲಿಗಳ ವೈರತ್ವಕ್ಕೆ ಇತಿಶ್ರೀ ಹಾಡುವಂತೆ ಅವೆರಡನ್ನೂ ಒಟ್ಟಿಗೆ ಬಳಸುವ ರೀತಿ. ಹೀಗೆ ಅರ್ಥಗರ್ಭಿತವೂ, ಪ್ರತಿಮಾ ಪೂರ್ಣವೂ ಆದ ದೇವತೆಯಾಗಿದ್ದಾನೆ, ಅಂತೆಯೇ ಶ್ರೀ ಬೇಂದ್ರೆಯವರು

ಗಣನಾಯಕ ಕವಿಗಾಯಕ ಜನಪ್ರಾಯಕ
ಸಿರಿಯೇ
ಗುಣವರ್ಧಕ, ಖಲಮರ್ದಕ, ಸುರಸ್ಪರ್ಶಕ
ದೊರೆಯೇ॥

ಎಂದು ಸ್ತುತಿಸಿದ್ದಾರೆ.

## ಲಂಬೋದರನೇಕೆ ?

ಗಣಪತಿ ಭಕ್ತಜನ ವತ್ಸಲ. ಭಕ್ತರು ಭಕ್ತಿ-ಪ್ರೀತಿಗಳಿಂದ ಕೊಟ್ಟ ಯಾವುದನ್ನೂ ನಿರಾಕರಿಸಲಾರ. ಅವರು ಅರ್ಪಿಸಿದ ನೈವೇದ್ಯವನ್ನೆಲ್ಲ ಎಳ್ಳಷ್ಟೂ ಬಿಡದೆ ತನ್ನ ಉದರದಲ್ಲಿ ತುಂಬಿಕೊಳ್ಳುವ. ಅದಕ್ಕೇ ಅವನ ಹೊಟ್ಟೆ ದೊಡ್ಡದು ಎಂಬ ಪರಿಕಲ್ಪನೆ. ಅದಲ್ಲದೆ ಅಪಾರ ಬುದ್ಧಿ ತುಂಬಿದ ತಲೆ ದಪ್ಪವಿರುವುದರಿಂದ, ದೇಹದ ತೂಕವು ತಲೆಗೆ ಹೊಂದಿಕೊಂಡು ಸಮತೋಲನವಿರಬೇಕಲ್ಲವೆ ? ಹೀಗಾಗಿ ಅವನು ಲಂಬೋದರನಾದ. ಅಂತಹ ಲಂಬೋದರಕ್ಕೆ ಉಟ್ಟ ಪೀತಾಂಬರ ನಿಲ್ಲಲು ಸೊಂಟಪಟ್ಟಿಬೇಡವೆ ? ಸಿಕ್ಕಸಿಕ್ಕಲ್ಲಿ ಹರಿದಾಡುವ, ಕಾಮದ ಸಂಕೇತವಾದ ಸರ್ಪವನ್ನೇ ಬಿಗಿದು ಕಟ್ಟಿದ. ಇದರ ಅರ್ಥ-ಅಭೀಷ್ಟ ಸಿದ್ಧಿಸಲು ನಾವು ಗಣಪತಿಗೆ ಏನೆಲ್ಲ ಅರ್ಪಿಸಿದರೂ, ಅವನು ನಮ್ಮ ಒಳ್ಳೆಯ ಕಾಮನೆಗಳನ್ನು ಮಾತ್ರ ಈಡೇರಿಸುತ್ತಾನೆ. ಕಳ್ಳರೂ, ಕೊಲೆಗಡುಕರೂ, ಲಂಚಕೋರರೂ, ಭ್ರಷ್ಟಾಚಾರಿಗಳೂ ಗಣಪತಿಗೆ ಎಷ್ಟೇ (ಕಡುಬಿನ) ಲಂಚ ಕೊಟ್ಟು ಪೂಜಿಸಿದರೂ ಅವನು ಅವರ ಇಷ್ಟಾರ್ಥ. ಸಿದ್ಧಿಸುವಂತೆ ಅನುಗ್ರಹಿಸನು...ಎಂದು.

ಗಣಪತಿ ದುಷ್ಟಶಿಕ್ಷಕ-ಶಿಷ್ಟರಕ್ಷಕ. ಇಷ್ಟ ಜನ ಇಷ್ಟಾರ್ಥ ಅಭೀಷ್ಟಕ. ಜ್ಞಾನದ ಸಂಕೇತ ವಿದ್ಯಾಧಿಪತಿ ಅವನು. ಬ್ರಹ್ಮನು ಸಿದ್ಧಿ-ಬುದ್ಧಿ ಎಂಬ ತನ್ನ ಇಬ್ಬರು ಮಾನಸ ಪುತ್ರಿಯರನ್ನು ಧಾರೆಯೆರೆದು ಕೊಟ್ಟನೆಂಬ ಪ್ರತೀತಿ ಇದೆ. ಇದು ಸಾಂಕೇತಿಕ. ಗಣೇಶ ಸಿದ್ಧಿ ಮತ್ತು ಬುದ್ಧಿಗಳ ಸ್ವಾಮಿ.

ಹೀಗೆ ಗಣೇಶನ ನಾಮರೂಪಗಳಲ್ಲಿರುವ ವೈವಿಧ್ಯ ಗಮನಾರ್ಹವಾದುದು. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ 'ಶ್ರೀ ತತ್ವ ಕಲಾನಿಧಿ' ಗ್ರಂಥದಲ್ಲಿ ಗಣಪತಿ ನಾಮಗಳ ಉಲ್ಲೇಖವಿದೆ. ಬಾಲಗಣಪತಿ, ತರುಣಗಣಪತಿ, ವೀರಗಣಪತಿ, ಶಕ್ತಿಗಣಪತಿ, ನಾಟ್ಯಗಣಪತಿ, ಸಿದ್ಧಿಗಣಪತಿ, ಉಚ್ಛಿಷ್ಟಗಣಪತಿ, ವಿಘ್ನಗಣಪತಿ, ಕ್ಷಿಪ್ರಗಣಪತಿ, ಹೇರಂಬಗಣಪತಿ, ಮಹಾಗಣಪತಿ, ವಿಜಯಗಣಪತಿ, ನೃತ್ತಗಣಪತಿ, ಊರ್ಧ್ವಗಣಪತಿ, ವರಗಣಪತಿ, ಅಕ್ಷರಗಣಪತಿ, ಪ್ರಣವಗಣಪತಿ, ಹರಿದ್ರಾಗಣಪತಿ, ಏಕದಂಡಗಣಪತಿ, ನವನೀತ ಗಣಪತಿ, ಸೃಷ್ಟಿಗಣಪತಿ, ವಿದ್ಯಾಗಣಪತಿ, ಸಿದ್ಧಿ ಗಣಪತಿ, ಉದ್ದಂಡಗಣಪತಿ, ಯೋಗಗಣಪತಿ, ಅರ್ಪಗಣಪತಿ, ವಾಶಿಷ್ಠಗಣಪತಿ–ಹೀಗೆ ಗಣಪತಿಯ ನಾಮಭೇದಗಳನ್ನು ವ್ಯಾಖ್ಯಾನ ಮಾಡಿದ್ದಾರೆ.

ಇಂತಹ ಮಹಾನ್ ಗುಣಗಳುಳ್ಳ ಗಣಪತಿ, ಯನ್ನು ಕವಿಗಳು, ಸಂತರು, ಹರಿದಾಸರು, ಭಕ್ತರು, ಪಂಡಿತರು ಮನಸಾರೆ ಸ್ತುತಿಸಿದ್ದಾರೆ. ಭಗವಂತನ ಪ್ರತ್ಯೇಕ ಅಸ್ತಿತ್ವವನ್ನು ಒಪ್ಪದ ಜೈನ ಧರ್ಮದಲ್ಲೂ ಗಣೇಶನಿಗೆ ಪ್ರಾಶಸ್ತ್ಯವಿದೆ. ಪಂಪ, ರನ್ನ, ಪೊನ್ನ, ಲಕ್ಷ್ಮೀಶ, ಪುರಂದರ ದಾಸರು, ಬೇಂದ್ರೆ, ಪುತಿನ ಇವರೆಲ್ಲ ತಮ್ಮದೇ ನಿಲುವಿನಲ್ಲಿ, ದೃಷ್ಟಿಯಲ್ಲಿ ಗಣಪತಿಯನ್ನು ಕಂಡಿದ್ದಾರೆ–ಕೊಂಡಾಡಿದ್ದಾರೆ.

.ಗಣಪತಿಯನ್ನು ಹಿಂದೂಗಳಷ್ಟೇ ಅಲ್ಲದೆ ಬೌದ್ಧರೂ, ಜೈನರೂ ಕೂಡ ಆರಾಧಿಸುತ್ತಾರೆ. ಭಾರತದಲ್ಲಷ್ಟೇ ಅಲ್ಲ. ಕಡಲಾಚೆಗೂ ವಾಮನ ರೂಪಿ ಗಣೇಶನು ತ್ರಿವಿಕ್ರಮನಾಗಿ ಆವರಿಸಿಕೊಂಡಿದ್ದಾನೆ. ಜಾವಾ, ಸುಮತ್ರಾ, ಬೋರ್ನಿಯೋ, ಬಲಿ, ಬರ್ಮಾ, ಸಿಂಗಪುರ್, ಸಿಂಹಳ, ಮಲಯ, ಚೀನಾ, ಜಪಾನ್, ಮಾರಿಷಸ್ ದೇಶಗಳಲ್ಲಿ ಗಣೇಶನ ಮೂರ್ತಿಗಳಿವೆ. ಮಂದಿರಗಳಿವೆ. ಇವನು ಜನಸಾಮಾನ್ಯರ ನೆಚ್ಚಿನ-ಮೆಚ್ಚಿನ ದೇವತೆಯಾಗಿ ಜನತಂತ್ರದ-ಗಣತಂತ್ರದ-ಐಕ್ಯತೆಯ ಮೂರ್ತಿರೂಪನಾಗಿದ್ದಾನೆ.

ಗಣಪತಿಯೇ ಸೃಷ್ಟಿ-ಸ್ಥಿತಿ-ಲಯಕಾರಕನೂ, ಪರಾಶಕ್ತಿ-ಪರಬ್ರಹ್ಮ ಸ್ವರೂಪನೂ ಎಂದು ನಂಬುವ ಗಾಣಪತ್ಯ ಧರ್ಮವೂ ಇದೆ. ಲೋಕಮಾನ್ಯ ತಿಲಕರು ಗಣೇಶ ರಾಷ್ಟ್ರೀಯತೆಯ, ಭಾವೈಕ್ಯದ ಸಂಸ್ಕೃತಿಯ ಕುರುಹು ಎಂದು ಗಣೇಶೋತ್ಸವವನ್ನು ರಾಷ್ಟ್ರಮಟ್ಟದಲ್ಲಿ ಆಚರಿಸಲು ಕರೆಕೊಟ್ಟಿದ್ದಾನೆ.

ಹೀಗೆ ನಾನಾ ಸ್ವರೂಪಗಳಲ್ಲಿ, ಸಂಕೇತಗಳಲ್ಲಿ, ವರ್ಣಗಳಲ್ಲಿ, ಭಾವಭಂಗಿಗಳಲ್ಲಿ, ಶಿಲ್ಪಗಳಲ್ಲಿ, ಸಂಗೀತದಲ್ಲಿ, ನೃತ್ಯದಲ್ಲಿ ತಾನೇ ತಾನಾಗಿ ಮೆರೆಯುವ ಗಣೇಶ ಇಂದಿಗೂ ಜನಮನಗಳಲ್ಲಿ ಸ್ಥಿರವಾಗಿ ಉಳಿದಿರುವ ದೇವತೆ. ಬೌದ್ಧಿಕ ಪ್ರತೀಕವಾದ ಗಣೇಶನೆಂದರೆ ಸಾಧಕರಿಗೂ, ವಿದ್ಯಾರ್ಥಿಗಳಿಗೂ, ಗೃಹಸ್ಥರಿಗೂ, ಮಕ್ಕಳಿಗೂ ಬಹಳ ಪ್ರೇಮ. ಅವನಿಗೆಂದೇ ಒಂದು ವ್ರತವನ್ನು ನಿಯಮಿಸಿಕೊಂಡು ಉಪಾಸಿಸುತ್ತಾರೆ. ನಾಡಿನ ಮೂಲೆ ಮೂಲೆಗಳಲ್ಲಿ ಬಗೆಬಗೆಯ ಬಣ್ಣದ, ಆಕಾರದ, ಗಾತ್ರದ ಗಣೇಶನನ್ನು ಕೂರಿಸಿ, ಪೂಜಿಸಿ ಅವನ ಸಮಕ್ಷಮದಲ್ಲಿ ಸಂಗೀತ ನೃತ್ಯ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೇರ್ಪಡಿಸಿ ನೋಡಿ, ಕೇಳಿ ಆನಂದಿಸುತ್ತಾರೆ. ಹೀಗೆ ಗಣೇಶ ಬೌದ್ಧಿಕ, ಸಾಮಾಜಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಪ್ರಜ್ಞೆಯಾಗಿ, ಪ್ರತೀಕವಾಗಿ ಇರುವ ದೇವತೆಯಾಗಿದ್ದಾನೆ. **

# ಪರಿಶಿಷ್ಟ ಜಾತಿಯ/ ಪರಿಶಿಷ್ಟ ವರ್ಗದ ಮಹಿಳೆಯರ ತರಬೇತಿ ಕಾರ್ಯಕ್ರಮ

ವರದಿ :– ಶ್ರೀಮತಿ ಗೀತಾ ವಿ ನಾಯಕ್



ಡಾ। ಬಾಬಾ ಸಾಹೇಬ ಅಂಬೇಡ್ಕರ್ ಅವರ 101 ಹುಟ್ಟಿದ ಹಬ್ಬದ ಸಲುವಾಗಿ ಕೆನರಾ ಬ್ಯಾಂಕಿನ ದಾವಣಗೆರೆಯ ವಿಭಾಗೀಯ ಕಚೇರಿ ಒಂದು ವಿಶಿಷ್ಟ ಕಾರ್ಯಕ್ರಮವನ್ನೇ ಹಮ್ಮಿಕೊಂಡಿತು. ಪರಿಶಿಷ್ಟ ಜಾತಿಯ/ಪರಿಶಿಷ್ಟ ವರ್ಗದ ಮಹಿಳೆಯರಿಗೆ ಒಂದು ವಾರದ ತರಬೇತಿ ಶಿಬಿರವನ್ನು ಏರ್ಪಡಿಸಿತ್ತು.

ಚಳ್ಳಕೆರೆಯಿಂದ 11 ಕಿ.ಮಿ. ದೂರ ದೊಡ್ಡ ಉಲ್ಲಾರ್ತಿ ಎಂಬಲ್ಲಿ ಕೆನರಾ ಬ್ಯಾಂಕು ಹಾಗೂ ಧರ್ಮಸ್ಥಳ ಮಂಜುನಾಥೇಶ್ವರ ಎಜ್ಯುಕೇಶನಲ್ ಟ್ರಸ್ಟ್‌ನವರು ಒಂದು ಸ್ವ–ಉದ್ಯೋಗ ತರಬೇತಿ ಕೇಂದ್ರವನ್ನು ನಡೆಸುತ್ತಾ ಇದ್ದಾರೆ. ಇಲ್ಲಿ 18–35ರ ವರ್ಷ ವಯಸ್ಸಿರ ಯುವ ಜನರಿಗೆ ಕೃಷಿ ಹಾಗೂ ಕೃಷಿಯೇತರ ಚಟುವಟಿಕೆಗಳಲ್ಲಿ 15ರಿಂದ 1 ತಿಂಗಳ ಮರೆಗಿನ ತರಬೇತಿಯನ್ನು ಉಚಿತವಾಗಿ ನೀಡಲಾಗುತ್ತದೆ.

ಕೆನರಾ ಬ್ಯಾಂಕಿನ ವಿಭಾಗೀಯ ಕಚೇರಿಯು ವಿಭಾಗಾಧಿಕಾರಿ ಶ್ರೀಯುತ ಬಿ.ಕೆ. ರಾವ್ ಅವರು ರಚನಾತ್ಮಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ವ್ಯಕ್ತಿ. ಇವರ ಕ್ರಿಯಾಶೀಲತೆ, ಚಿಂತನೆಯಿಂದ ಹಲವು ರೀತಿಯ ಮಹಿಳೆಯರ ಕಾರ್ಯಕ್ರಮಗಳು ದಾವಣಗೆರೆ ಹಾಗೂ ದೊಡ್ಡ ಉಲ್ಲಾರ್ತಿ ತರಬೇತಿ ಸಂಸ್ಥೆಯಲ್ಲಿ ನಡೆದಿವೆ. ಪರಿಣಾಮ ಮಹಿಳೆಯರ ಹಲವು ಕಾರ್ಯಕ್ರಮಗಳು ನಡೆದು ಹಲವರು ಆರ್ಥಿಕ ಸ್ವಾವಲಂಬಿಗಳಾಗಿದ್ದಾರೆ. ಇದೇ ಮೇ 11–ರಿಂದ 16ರ ವರೆಗೆ ಬ್ಯಾಂಕಿನ ಸ್ವ–ಉದ್ಯೋಗ ತರಬೇತಿ ಕೇಂದ್ರವಾದ ದೊಡ್ಡ ಉಲ್ಲಾರ್ತಿಯಲ್ಲಿ 30 ಜನ ಪರಿಶಿಷ್ಟ ಜಾತಿಯ/ವರ್ಗದ ಮಹಿಳೆಯರಿಗೆ ಹೈನುಗಾರಿಕಾ ತರಬೇತಿಯನ್ನು ನೀಡಲಾಯಿತು.

ಕಾರ್ಯಕ್ರಮವನ್ನು ದಾವಣಗೆರೆ ಕೆನರಾ ಬ್ಯಾಂಕಿನ ವಿಭಾಗಾಧಿಕಾರಿ ಶ್ರೀಯುತ ಬಿ.ಕೆ.ರಾವ್ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಅವರು ಬ್ಯಾಂಕು ಗ್ರಾಮೀಣ ಮಹಿಳೆಯರ ಸ್ಥಿತಿಗತಿ ಸುಧಾರಣೆ ಬಗ್ಗೆ ಹೆಚ್ಚಿನ ಶ್ರಮ ವಹಿಸುತ್ತಿದೆ ಅಂದರು.

ಮುಖ್ಯ ಅತಿಥಿಗಳಾಗಿ ಬ್ಯಾಂಕಿನ ಹಿರಿಯ ಪ್ರಬಂಧಕ ಶ್ರೀ ಕೆ.ಆರ್. ಪ್ರಭು ಅವರು ಸಾಲದ ಮರುಪಾವತಿ ಸರಿಯಾದ ರೀತಿಯಲ್ಲಿ ಆಗಬೇಕು ಅಂದರು. ವಾರ್ತಾ ಮತ್ತು ಪ್ರಚಾರ ಇಲಾಖೆ ಚಿತ್ರದುರ್ಗದ ಸಹಾಯಕ ಅಧಿಕಾರಿಗಳಾದ ಶ್ರೀಮತಿ ಸರಳ ಕುಮಾರಿಯವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಅವರು ದಲಿತರಿಗೆ ನೆರವಾಗುವ ಬ್ಯಾಂಕಿನ ಕ್ರಮ ಮೆಚ್ಚುವಂತದ್ದು ಅಂದರು.

16–5–92ರ ಮುಕ್ತಾಯ ಸಮಾರಂಭಕ್ಕೆ ಆಕಾಶವಾಣಿ ಚಿತ್ರದುರ್ಗ ಕೇಂದ್ರದ ಶ್ರೀಮತಿ ನಿರ್ಮಲಾದೇವಿಯವರು ಮುಖ್ಯ ಅತಿಥಿಗಳಾಗಿದ್ದರು ಹಾಗೂ ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. ಸಭೆಯ ಅಧ್ಯಕ್ಷತೆ ಕೆನರಾ ಬ್ಯಾಂಕಿನ ವಿಭಾಗಾಧಿಕಾರಿಗಳಾದ ಶ್ರೀ ಬಿ.ಕೆ. ರಾವ್. 15 ನಿಮಿಷಗಳ ಕಾಲ ಈ ಕಾರ್ಯಕ್ರಮವನ್ನು ಚಿತ್ರದುರ್ಗ ಆಕಾಶವಾಣಿ ಬಿತ್ತರಿಸಿತು.

ಇಲ್ಲಿ ತರಬೇತಿ ಪಡೆದ ಮಹಿಳೆಯರು ಮುಂದೆ ಸ್ವತಂತ್ರವಾಗಿ ಏನಾದರೂ ಉದ್ದಿಮೆ ನಡೆಸುವಂತೆ ಬ್ಯಾಂಕ್ ಆರ್ಥಿಕ ಸಹಾಯ ಮಾಡುತ್ತದೆ.

ಆ ಪುಸ್ತಕ ಓದಿದ್ದು ಸಾಕು. ಬನ್ರೀ ಈ ಕಡೆ.

ಒಂದ್ನಿಮಿಷ. ಗರ್ಭ ನಿರೋಧದ ಬಗ್ಗೆ ವಾತ್ಸಾಯನ ಮುನಿಗಳ ಸಲಹೆ ಏನೂ ಅಂತ ನೋಡ್ತೀನಿ.

ಅಯ್ಯೋ, ಬಿಡೀಂದ್ರೆ. ಇದಕ್ಕೆ ಏನು ಬೇಕೂ ಅನ್ನೋದು ಗೊತ್ತೆ ?

ಏನು... ಏನದು.

ಮತ್ತೇನು? ನನ್ನಂತಹ ಆಧುನಿಕ, ಜಾಣ ಹೆಂಡ್ತಿ .

ಸರಿ ಮಹಾತಾಯಿ. ಅಂದ್ಮೇಲೆ ನಿಂಗೆ ಗೊತ್ತಿರ್ಬೇಕಲ್ಲ? ನಾನು ಅಂಥಹುದನ್ನೆಲ್ಲ ಹಾಕ್ಕೋಳ್ಳೋದಕ್ಕೆ ಇಷ್ಟಾ ಪಡೋಲ್ಲ.

# "ಕಾಮ ಸೂತ್ರ ಯಾರಿಗೆ ಬೇಕು ಟುಡೇ ನನ್ನಬಳಿ ಇರುವಾಗ !"

ಅದೇನೂ ನೀವು ಹಾಕ್ಕೋ ಬೇಕಾಗಿಲ್ಲಾಂದೆ!

ಅಂದ್ರೆ, ನೀನು ಮಾತ್ರೆ ಗೀತ್ರೆ ತಗೋತಿದ್ದೀಯಾ?

ಇಲ್ಲ

ಲೂಪ್?

ಛೆ, ಛೆ. ಎಂದಿಗೂ ಸಾಧ್ಯವಿಲ್ಲ. ಇಲ್ನೋಡಿ, ಇವನ್ನೆಲ್ಲ ನನ್ಗೇ ಬಿಟ್ಬಿಡಿ. ಆಯ್ತ?

ತವರು ಮನೆಗೆ ಹೋಗಿ ದೊಡ್ಡ ರಿಕಾಣಿ ಊರೋ ಹಂಚಿಕೇನಾದ್ರೂ ಇದ್ಯೆ ರಾಣಿ ಸಾಹೇಬ್ರಿಗೆ?

ಅದ್ಕೆ ಜಾಣತನ, ಆಧುನಿಕತೆ ಅಂತಾರೆಯೆ? ಅಂಥದ್ದೇನೂ ಇಲ್ಲ.



ಊ್ಞ... ಅದೇನೂ ತುಂಟತನದ ನಗು ಸುಳೀತಾ ಇದೆ.

ಕಾರಣ ಊಹಿಸಿ, ನೋಡೋಣ.

ಇರು ಕೊಂಚ. ವಾತ್ಸಾಯನ ಏನಂತಾನೆ ನೋಡ್ತೀನಿ.

ಸರಿ ಹೋಯ್ತು . ಅಲ್ರೀ, ನೀವು ಟುಡೇ ವಿಷ್ಯ ಕೇಳಿಲ್ವಾ?

ಟುಡೇ, ಅಂದ್ರೆ ಇಂದಿನ ಸ್ತ್ರೀಯರ ಅತ್ಯಂತ ವೈಯಕ್ತಿಕ ಗರ್ಭನಿರೋಧಕಾನೆ ?

ಹೌದು. ಪರ್ವಾಗಿಲ್ಲ, ರಾಯರ ತಿಳಿವಳಿಕೆ ಚೆನ್ನಾಗಿದೆ.

ಸರಿ. ತಮಾಷೆ ಇರ್ಲಿ... ನೀನು ಅದನ್ನ ಬಳಸೋ ವಿಚಾರ ಮಾಡ್ತಿದ್ದಿ ಏನು?

ವಿಚಾರವೇನು ಬಂತು? ಅಲ್ರೀ, ಯಜಮಾನ್ರೆ! ನಮ್ಮ ಹನಿಮೂನ್ ಹೊತ್ಗೆ ನನ್ಗೆ ಸುರಕ್ಷಿತತೆ ಕೊಟ್ಟಿದ್ದು ಯಾವ್ದೂಂತ ತಿಳ್ಕೊಂಡ್ರಿ ?

ಹೌದಾ? ನನ್ಗಂತೂ ಚೂರೂ ಗೊತ್ತಾಗ್ಲಿಲ್ಲ!

ನಿಮ್ಗೆ ಗೊತ್ತಾಗೊ ಅಗತ್ಯ ಏನೂ ಇಲ್ಲ, ನಾನೂ, ನೀವೂ ಸುಖವಾಗಿದ್ರೆ ಆಯ್ತಪ್ಪ, ಅಲ್ಲಿಗೆ ವಿಷ್ಯ ಮುಗೀತು.

ಸರಿ. ಈಗ್ಲಾದ್ರೂ ತಿಳೀತು ತಾನೆ, ವಾತ್ಸಾಯನ ಹೇಳಿದ್ದು ನೂರಕ್ಕೆ ನೂರರಷ್ಟು ಸತ್ಯ ಅಂತ?

ಏನದು ?

ಅದೇ, ನೀವು, ಅಂದ್ರೆ ಹೆಂಗಸ್ರು ರಹಸ್ಯವನ್ನ ನಿಮ್ಮ ಬಳಿ ಇಟ್ಕೊಳ್ಳಲಾರಿರಿ.

ಸುಮ್ನಿರೀಂದ್ರೆ! ಆ ಪುಸ್ತಕ ಮುಚ್ಚಿಡಿ.




ಸಂತಾನ ನಿಯಂತ್ರಣದ ಕುರಿತಾದ ಕಿರುಪುಸ್ತಿಕೆಯ ಉಚಿತ ಪ್ರತಿಗಾಗಿ, ನಿಮ್ಮ ವಿಳಾಸವುಳ್ಳ, ಅಂಚೆಚೀಟಿ ಹತ್ತಿಸಿದ ಲಕೋಟೆಯನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ:
ಬ್ಲಿಸ್ ಕೆಮಿಕಲ್ಸ್ &
ಫಾರ್ಮೆಸ್ಯುಟಿಕಲ್ಸ್
ಇಂಡಿಯಾ ಲಿಮಿಟೆಡ್,
ಸ್ಕೈ ಪಾಕ್ ಹೌಸ್
ಅನೆಕ್ಸ್, ಮರೋಳ್,
ಅಂಧೇರಿ (ಪೂ),
ಮುಂಬಯಿ 400 059.

**ಟುಡೇ** ನಾರಿಯ ತನ್ನ ಸ್ವಂತದ ಗರ್ಭ ನಿರೋಧಕ.

Avenues BT 4.92

ಗಣೇಶ ಚತುರ್ಥಿ ಪ್ರಯುಕ್ತ

# ಕಾರಣಿಕದ ಪಡುಬಿದ್ರಿ ಗಣಪತಿ

ಜನತೆಯ ಅಜ್ಞಾನ ಅಂಧಕಾರವನ್ನು ಪರಿಹರಿಸಿ ಅವರನ್ನು ಸನ್ಮಾರ್ಗದತ್ತ ಕೊಂಡೊಯ್ಯುವಲ್ಲಿ ಧಾರ್ಮಿಕ ದೇಗುಲಗಳ ಸ್ಥಾನ ಮಹತ್ವಪೂರ್ಣವಾದುದು. ಮನಸ್ಸು ಚಿತ್ತಚಾಂಚಲ್ಯದಿಂದ ಸ್ಥಿಮಿತ ಕಳೆದು ಕೊಂಡಾಗ ಮಾನಸಿಕ ಸಂತೃಪ್ತಿ; ನೆಮ್ಮದಿಯ ವಾತಾವರಣ ನಿರ್ಮಾಣಗೊಳ್ಳುವುದು ಪವಿತ್ರ ದೇವಾಲಯಗಳ ಪರಿಶುದ್ಧ ವಾತಾವರಣದಲ್ಲಿ . ತನ್ನ ಅದ್ಭುತ ಮಹಿಮಾತಿಶಯಗಳಿಂದ ಭಕ್ತ ಜನಸ್ತೋಮವನ್ನು ಆಕರ್ಷಿಸುತ್ತಿರುವ ಹತ್ತು ಹಲವು ಧಾರ್ಮಿಕ ಕ್ಷೇತ್ರಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಉಡುಪಿ ತಾಲೂಕಿನ ಪಡುಬಿದ್ರಿ ಮಹಾಲಿಂಗೇಶ್ವರ ದೇವಾಲಯವು ಒಂದು.

ರಾಷ್ಟ್ರೀಯ ಹೆದ್ದಾರಿ ನಂ. 17ರಲ್ಲಿ ಉಡುಪಿ– ಮಂಗಳೂರು ಮಧ್ಯೆ ಪಡುಬಿದ್ರಿ ಬಸ್ ನಿಲ್ದಾಣದಿಂದ ದೇವಾಲಯ ಒಂದು ಫರ್ಲಾಂಗು ದೂರವಿದೆ. ಪಡುಬಿದ್ರಿಯ ಗಣಪತಿ ಆಸುಪಾಸಿನ ಭಕ್ತಾದಿಗಳಿಗೆಲ್ಲಾ ವರ ಪ್ರಸಾದ ನೀಡುವ ಸಿದ್ಧಿ ವಿನಾಯಕ: ವಿಘ್ನ ನಿವಾರಕ ಕೂಡಾ. ಅಂತೆಯೇ ಆತ ಭಕ್ತರ ನಂಬುಗೆಯ ಮಹಾದೇವನೆನಿಸಿದ್ದಾನೆ. ಮಹಾಲಿಂಗೇಶ್ವರ ಮೂಲ

ಲೇ : ಶ್ರೀಮತಿ ರತ್ನ ಎಸ್. ತಂತ್ರಿ
ಚಿತ್ರ : ಶ್ರೀನಿವಾಸ ತಂತ್ರಿ

ದೇವರಾದರೂ ಕಾರಣಿಕದ ಸಾನ್ನಿಧ್ಯ ಮಹಾಗಣಪತಿ ಯದ್ದು. ಮಹಾಲಿಂಗೇಶ್ವರ ಮೂಲಬಿಂಬವು ಭೃಗು ಮಹರ್ಷಿಗಳಿಂದ ಸ್ಥಾಪಿತಗೊಂಡಿರಬೇಕೆಂದು ಅಭಿ ಪ್ರಾಯಪಡಲಾಗಿದೆ. ದೇವರ ಉತ್ಸವಮೂರ್ತಿ ಸಮಭಂಗಿಯಲ್ಲಿ ಸುಮಾರು ಸಹಸ್ರ ವರ್ಷಗಳಷ್ಟು ಪ್ರಾಚೀನ ಲೋಹ ಮೂರ್ತಿಯಾಗಿದ್ದರೆ ಮೂಲ ಗಣಪತಿ ವಿಗ್ರಹ ಕ್ರಿ.ಶ. 11ನೇ ಶತಮಾನದ್ದೆಂದು ಖ್ಯಾತ ಇತಿಹಾಸ ಸಂಶೋಧಕ ಡಾ। ಪಿ. ಗುರುರಾಜ ಭಟ್ ಅಭಿಪ್ರಾಯ. ಪಟ್ಟಿದ್ದಾರೆ.

ಪಡುಬಿದ್ರಿ ಗಣಪತಿಯ ಬಗೆಗೆ ಹಲವಾರು ಐತಿಹ್ಯಗಳು ಬಳಕೆಯಲ್ಲಿವೆ. ಹಿಂದೆ ಬಪ್ಪನಾಡು ದುರ್ಗಾಪರಮೇಶ್ವರಿ ದೇವಾಲಯದಲ್ಲಿ ಅಂತಹುದೇ ಗಣಪತಿ ಬಿಂಬ ಪ್ರತಿಷ್ಠಾಪಿಸಿ ಪಡುಬಿದ್ರಿ ಗಣಪತಿಯ ಶಕ್ತಿ ಸಾನ್ನಿಧ್ಯವನ್ನು ಆವಾಹಿಸಲು ಪ್ರಯತ್ನಿಸಿ ಅದರಂತೆ ತೆಂಗಿನಕಾಯಿಯಲ್ಲಿ ಪಡುಬಿದ್ರಿ ಗಣಪ ನನ್ನು ಆವಾಹಿಸಿ ಕೊಂಡೊಯ್ಯುತ್ತಿದ್ದಾಗ ಆವಾಹಿತ ತೆಂಗಿನಕಾಯಿ ನೀರುಪಾಲಾಯಿತಂತೆ. ಇದರಿಂದ ಭೀತರಾದ ಜನತೆ ದುರ್ಗಾದೇವಾಲಯದ ಗಣಪತಿ ಯನ್ನು ಬಂಧನದಲ್ಲಿರುವಂತೆಯೇ ಪ್ರತಿಷ್ಠಾಪಿಸಿ ದರಂತೆ.

ಸುಮಾರು ಎರಡು ಎರಡೂವರೆ ಅಡಿ ಎತ್ತರದ ಕರಿಶಿಲೆಯ ಗಣಪತಿ ವಿಗ್ರಹ ಕುಳಿತ ಭಂಗಿಯಲ್ಲಿದ್ದು ಚತುರ್ಭುಜಧಾರಿಯಾಗಿ ನಂಬಿದವರಿಗೆ ಸದಾ ಅಭಯ ಪ್ರಧಾನನೆನಿಸಿದ್ದಾನೆ. ಪಂಚಕಜ್ಜಾಯ ಆತನಿಗೆ ಬಲುಪ್ರಿಯ ಹರಕೆ. ಶುಭಕಾರ್ಯಗಳು ನಿರ್ವಿಘ್ನದಿಂದ ಸಾಂಗವಾಗಿ ನೆರವೇರಲು ಆತನಿಗೆ ಕಜ್ಜಾಯದ ಹರಕೆ ತೀರಿಸಬೇಕು. ಮದುವೆ, ಮುಂಜಿ ಶುಭಕಾರ್ಯಗಳಿಗೆ ಮಳೆಯ ಭೀತಿಯಿದ್ದರೆ ಪಡುಬಿದ್ರಿ ಗಣಪತಿಗೆ ಕಜ್ಜಾಯ ಹರಕೆ ಹೇಳಿಕೊಂಡರೆ ಸಮಾರಂಭ ಸುಸೂತ್ರ. ಗಣಹೋಮ; ಕಡುಬು; ಪೊಟ್ಟಪ್ಪ (ಅಕ್ಕಿಯಿಂದ ತಯಾರಿಸಿದ ಅಪ್ಪ) ಆತನ ಬಲುಪ್ರಿಯ ಸೇವೆ. ಬ್ರಿಟಿಷ್ ದೊರೆ ಗಣಪತಿಯ ಪೊಟ್ಟಪ್ಪ ಸೇವೆಗಾಗಿ


ಮಹಾ ರಥೋತ್ಸವ



ಪಡುಬಿದ್ರಿ ಗಣಪತಿ ಹೈಸ್ಕೂಲ್


ಪಡುಬಿದ್ರಿ ಮಹಾಲಿಂಗೇಶ್ವರ ಮಹಾಗಣಪತಿ ದೇವಾಲಯ

ಜಮೀನು ಉಂಬಳಿಯಾಗಿ ಬಿಟ್ಟುಕೊಟ್ಟಿದ್ದನಂತೆ. ಗಣೇಶ ಚತುರ್ಥಿ; ವಾರ್ಷಿಕೋತ್ಸವ, ಚತುರ್ಥಿ ದಿನಗಳಂದು ಆತನಿಗೆ ವಿಶೇಷ ಹರಕೆ, ಸೇವೆ ಸಲ್ಲುತ್ತದೆ. ಮಾಗಣೆಯಲ್ಲಿ ಯಾವುದೇ ಶುಭ ಸಮಾರಂಭ ನಡೆಯುವುದಿದ್ದರೆ ಮೊದಲ ಪ್ರಾರ್ಥನೆ ಪಡುಬಿದ್ರಿ ಗಣಪತಿಗೆ ಸಲ್ಲಬೇಕು. ಗಣಪತಿಗೆ ರಂಗಪೂಜೆ ಸೇವೆಯೂ ಸಲ್ಲುತ್ತದೆ.

ಬೆಳ್ಳಿ ಕವಚಧಾರಿ ಗಣಪತಿ ಗುಡಿಯ ಮುಖದ್ವಾರಕ್ಕೆ ಬೆಳ್ಳಿ ಹೊದಿಸಲಾಗಿದ್ದು ಈಚೆಗೆ ಕಳ್ಳತನ ಪ್ರಯತ್ನವೊಂದು ನಡೆದಿರುವುದವನ್ನಿಲ್ಲಿ ಸ್ಮರಿಸಬಹುದು. ದೇವಾಲಯ ಬಹಳಷ್ಟು ಅಭಿವೃದ್ಧಿ ಕಾರ್ಯಗಳಿಂದ ಶೋಭಿಸುತ್ತದೆ. ಅದಮಾರು ಮಠ ಆಶ್ರಯದಲ್ಲಿದ್ದ ದೇವಾಲಯ ಆಡಳಿತ ಮಂಡಳಿ ಹಾಗೂ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೊಳಪಟ್ಟಿದೆ. ಸುವ್ಯವಸ್ಥಿತ ಕಲ್ಯಾಣ ಮಂಟಪ; ಅಚ್ಚುಕಟ್ಟಾದ ಕಲ್ಲುಹಾಸಿನ ಪ್ರಾಂಗಣ; ಶಿಲ್ಪಶೈಲಿಯ ಗರ್ಭಗುಡಿ; ಸರೋವರ; ಜ್ಞಾನಕೇಂದ್ರ– ಮುಂತಾದ ಅಭಿವೃದ್ಧಿ ಕಾರ್ಯಗಳಿಂದ ದೇವಾಲಯ ಭಕ್ತರ ಮನಸ್ಸನ್ನು ಪ್ರಪುಲ್ಲಿತಗೊಳಿಸುತ್ತದೆ. ●




# ಬಾರ್ಸಿಲೋನಾ ಬಾತ್ಮಿಗಳು

ವಿಶ್ವದ ಕ್ರೀಡಾಪಟುಗಳೆಲ್ಲ ಒಂದುಗೂಡಿ ಬಾರ್ಸಿಲೋನಾ ಕ್ರೀಡಾಂಗಣದಲ್ಲಿ ವಿವಿಧ ಸ್ಪರ್ಧೆಗಳಲ್ಲಿ ಭಾಗವಹಿಸಿ ಸೆಣಸಿದರು. ಸೋತರು, ಗೆದ್ದರು. ಪ್ರತಿಯೊಂದು ದೇಶವೂ ಮಿಶ್ರ ಫಲಾನುಭವಿಯಾಯಿತು. ಆದರೆ ಭಾರತ ಪ್ರತಿಯೊಂದರಲ್ಲೂ ತನ್ನ ಪ್ರತ್ಯೇಕತೆ ಕಾಯ್ದುಕೊಂಡಿತು. ಪರಾಭವವೇ ಭಾರತದ ಏಕೈಕ ಅನುಭವವಾಯಿತು. ಗೆಲುವಿನ ಮೂಲವಾದ "ಸೋಲು" ಭಾರತದ ಪಾಲಾಯಿತು.

ಪ್ರಜೆಗಳ ಸ್ವಾತಂತ್ರ್ಯವನ್ನು ಸರಕಾರವೇ ನಿರ್ಣಯಿಸುವ ವ್ಯವಸ್ಥೆ ಹೊಂದಿದ ಸೋವಿಯತ್ ಒಕ್ಕೂಟ ಇಂದು ಛಿದ್ರವಾಗಿ ಸ್ವತಂತ್ರ ರಾಷ್ಟ್ರಗಳ ಏಕೀಕೃತ ತಂಡವಾಗಿ ಪರಿಣಮಿಸಿದೆ. ಆದರೆ ಅಂದಿನಂತೆ ಇಂದೂ ಕೂಡ ಕ್ರೀಡೆಯಲ್ಲಿ ಇತರರಿಗೆ ಎಷ್ಟು ಪದಕಗಳನ್ನು ಬಿಟ್ಟುಕೊಡಬಹುದೆಂಬ ತೀರ್ಮಾನವನ್ನು ಅಲ್ಲಿನ ಕ್ರೀಡಾಪಟುಗಳು ತಮ್ಮ ಕೈಯಲ್ಲೇ ಇಟ್ಟುಕೊಂಡಂತಿದೆ. ಈ ಮಾಜಿ ಸಮಾಜವಾದಿಗಳು ಒಟ್ಟು 45 ಚಿನ್ನದ ಪದಕಗಳನ್ನು ಗೆದ್ದು ಪಕ್ಕಾ ಕ್ಯಾಪಿಟಲಿಸ್ಟ್ ಬುದ್ಧಿ ಮೆರೆದರು. ವಾಣಿಜ್ಯ ಸಂಸ್ಕೃತಿಯ ಅಗ್ರ ಪ್ರತಿಪಾದಕ, ಪ್ರಸ್ತುತ ವಿಶ್ವದ ಏಕೈಕ ಸೂಪರ್ ಪವರ್ ಆಗಿ ಮೆರೆಯುತ್ತಿರುವ ಅಮೆರಿಕ 37 ಚಿನ್ನದ ಪದಕಗಳನ್ನು ಗೆದ್ದು ದ್ವಿತೀಯ ಸ್ಥಾನದಲ್ಲಿ ನಿಂತಿತು. ವಿಶ್ವ ಸಮರದಲ್ಲಿ ಮಿತ್ರರಾಷ್ಟ್ರಗಳಿಂದ ಬಗ್ಗು ಬಡಿಯಲ್ಪಟ್ಟ ಜರ್ಮನಿ, ಪ್ರಸ್ತುತ ಒಲಿಂಪಿಕ್ ಸಮರದಲ್ಲಿ ಛಲ ಬಿಡದೆ ಸೆಣಸಿ 33 ಚಿನ್ನದ ಪದಕಗಳನ್ನು ತನ್ನದಾಗಿಸಿ ಮೂರನೆಯ ಸ್ಥಾನದಲ್ಲಿ ನಿಂತು ತನ್ನ ಚೈತನ್ಯವಿನ್ನೂ ಕುಸಿದಿಲ್ಲ ಎಂಬುದನ್ನು ರುಜುವಾತು ಪಡಿಸಿತು. ಮಹಾಯಾತ್ರೆ (ಗ್ರೇಟ್ ಮಾರ್ಚ್)ಗೆ ಎಡೆ ನೀಡಿ ತನ್ನ ಚರಿತ್ರೆಯನ್ನೇ ಬದಲಾಯಿಸಿಕೊಂಡ ಚೀನ, ಒಲಿಂಪಿಕ್ ಸ್ಪರ್ಧೆಯಲ್ಲಿ ಹೊಸ ಚರಿತ್ರೆ ನಿರ್ಮಿಸಲು ಮುನ್ನಡೆಯುವ ದೃಢ ನಿರ್ಧಾರದ ಸೂಚನೆಯೆಂಬಂತೆ 16 ಚಿನ್ನಗಳನ್ನು ಗೆದ್ದು ನಾಲ್ಕನೆಯ ಸ್ಥಾನ ತನ್ನದಾಗಿಸಿಕೊಂಡಿತು.



ಒಲಿಂಪಿಕ್ ಹೆಪ್ಟಾಥ್ಲಾನ್ ರಾಣಿ ಜಾಕಿ ಜಾಯ್ನರ್ ಕರ್ಸಿ

ಬದಲಾದ ವಿಶ್ವ ರಾಜಕೀಯ ವ್ಯವಸ್ಥೆಯಲ್ಲಿ ಅನಾಥ ಪ್ರಜ್ಞೆಯಿಂದ ಬಳಲುತ್ತಿರುವ ಕ್ಯೂಬ 14 ಚಿನ್ನದ ಪದಕಗಳನ್ನು ತನ್ನದಾಗಿಸಿಕೊಂಡಿತು. ಚಿನ್ನ, ಬೆಳ್ಳಿಗಳಲ್ಲದಿದ್ದರೂ ಕಂಚಿನ ಪದಕ ಪಡೆದು ತಾವು ನಗಣ್ಯರಲ್ಲವೆಂದು, ಒಲಿಂಪಿಕ್ ಚರಿತ್ರೆಯಲ್ಲಿ ತಮ್ಮನ್ನು ಗುರುತಿಸಿಕೊಂಡ, ಕಂಡು–ಕೇಳರಿಯದ ದೇಶಗಳೂ ಇವೆ. ಆದರೆ ವಿಜ್ಞಾನದ ತಾಯಿಯಾದ ಗಣಿತಕ್ಕೆ "0"ವನ್ನು ದೇಣಿಗೆಯಾಗಿ ನೀಡಿದ ಭಾರತ, ತನ್ನ ಆವಿಷ್ಕಾರದ ಮೇಲಿನ ವ್ಯಾಮೋಹವನ್ನು ಈ ಒಲಿಂಪಿಕ್ಸ್‌ನಲ್ಲಿ ಯಶಸ್ವಿಯಾಗಿ ಮೆರೆಯಿತು.

ಬಾರ್ಸಿಲೋನಾ ಒಲಿಂಪಿಕ್ಸ್ ಹಲವು ಪವಾಡಗಳಿಗೂ ಕಾರಣವಾಗಿದೆ. ಕೇವಲ ಒಂದು ವರ್ಷದ ಹಿಂದೆ ಸ್ವತಂತ್ರವಾಗಿ ಒಂದು ಹೆಜ್ಜೆಯಿಡಲೂ ಸಾಧ್ಯವಿಲ್ಲದ, ಗ್ರೇವ್ಸ್ ರೋಗಕ್ಕೆ ತುತ್ತಾಗಿ ನರಳಿದ ಅಮೆರಿಕದ 25 ವರ್ಷ ವಯಸ್ಸಿನ ವಿದ್ಯಾರ್ಥಿನಿ ಗೇಲ್ ಡೇವರ್ಸ್ ಈ ಒಲಿಂಪಿಕ್‌ನಲ್ಲಿ ಪ್ರಪಂಚದ ಅತಿವೇಗದ ಓಟದ ರಾಣಿಯಾಗಿ ಮೆರೆದಳು.

ಸೋಲ್ ಒಲಿಂಪಿಕ್‌ನಲ್ಲಿ ಈಕೆ ಭಾಗವಹಿಸಿದ್ದಳಾದರೂ ಸೆಮಿಫೈನಲ್ ತಲುಪಲಾಗಿರಲಿಲ್ಲ. ಆಗಾಗ ಕಾಡುವ ತಲೆಶೂಲೆ ಹಾಗೂ ಅಸ್ಪಷ್ಟ ಕಾಯಿಲೆಯಿಂದ ಕೆಲದಿನ ಗಾಢನಿದ್ರೆ, ಕೆಲದಿನ ಪೂರ್ತಿ ಜಾಗರಣೆ ಹೀಗೆ ಗೇಲ್ ನರಳಲಾರಂಭಿಸಿದರು. ಬಹುಕಾಲದ ನಂತರ ಅದು ಗಳಗಂಡ (ಗಾಯ್ಟರ್) ಎಂದು ವೈದ್ಯರು ಪತ್ತೆಹಚ್ಚಿದರು. ಚಿಕಿತ್ಸೆ ಆರಂಭವಾಯಿತು. ಕ್ರೀಡೆಗೆ ಕೊನೆಯ ನಮಸ್ಕಾರ ಹಾಕಲೂ ಗೇಲ್ ನಿರ್ಧರಿಸಿದಳು. ಆದರೆ ಆಕೆಯ ಕೋಚ್ ಬಾಬ್ ಕರ್ಸಿ ಆಕೆಯನ್ನು ಹುರಿದುಂಬಿಸಿದ. ಇದರಿಂದಾಗಿ 1991ರ ಫೆಬ್ರವರಿಯಲ್ಲಿ ಪುನಃ ತರಬೇತಿ ಪಡೆಯಲಾರಂಭಿಸಿದಳು. ಚಿಕಿತ್ಸೆ ಹಾಗೂ ತರಬೇತಿಗಳು ಜೊತೆಯಾಗಿ ಸಾಗಿದುವು. ಆದರೆ ವಿಕಿರಣ ಚಿಕಿತ್ಸೆಯಿಂದಾಗಿ ದೇಹದಂಡನೆ ಅಸಾಧ್ಯವಾಗಿತ್ತು. ಓಡುತ್ತಿದ್ದಾಗ ಕಾಲಿನಿಂದ ರಕ್ತ ಒಸರುತ್ತಿತ್ತು. ಕಾಲುಚೀಲ ಕಳಚುವಾಗ ಚರ್ಮ ಕಿತ್ತು ಬರುತ್ತಿತ್ತು. ಹೀಗೆ ಮುಂದುವರಿದರೆ ಕಾಲೇ ಕಿತ್ತಸೆಯಬೇಕಾದೀತೆಂದು ವೈದ್ಯರಿಂದ ಎಚ್ಚರಿಕೆ. ಹೆಜ್ಜೆಯೂರಲು ಸಂಕಟ ಪಡಬೇಕಾದಾಗ ಪುನಃ ಗೃಹವಾಸ. ತಂದೆಯೇ ಊರುಗೋಲಾದ. ಆದರೆ ಏಪ್ರಿಲ್ ಹೊತ್ತಿಗೆ ಆರೋಗ್ಯ ಸುಧಾರಿಸಿತು. ಗೇಲ್ ಜಾಗಿಂಗ್ ಹೊರಟಳು. ಮೇನಲ್ಲಿ ಆರೋಗ್ಯ ಇನ್ನೂ ಸುಧಾರಿಸಿತು. ಹರ್ಡಲ್ಸ್ ಜಿಗಿದೋಡಲಾರಂಭಿಸಿದಳು. ಇಲ್ಲಿಗೆ ಓಡಬಲ್ಲೆ ಎಂಬ ಆತ್ಮವಿಶ್ವಾಸ ಹೆಚ್ಚಾಯಿತು. ಅಲ್ಲಿಂದಾಕೆ ಓಡಲಾರಂಭಿಸಿದಳು... ಓಡಿಯೇ ಓಡಿದಳು. ಚಿನ್ನ ದೊರೆಯುವವರೆಗೂ ಆಕೆ ಓಡಿದಳು. ಆತ್ಮಸ್ಥೈರ್ಯ, ಛಲ ಹಾಗೂ ಸತತ ಸಾಧನೆ ಅಸಾಧ್ಯವಾದುದನ್ನು ಸಾಧಿಸುತ್ತದೆಂಬುದಕ್ಕೆ ಗೇಲ್ ಡೇವರ್ಸ್ ಜ್ವಲಂತ ಉದಾಹರಣೆ.



ನೂರು ಮೀಟರ್ ಓಟದಲ್ಲಿ ಚಿನ್ನ ಗೆದ್ದ ಸ್ಪ್ರಿಂಟ್ ರಾಣಿ ಗೇಲ್ ಡೇವರ್ಸ್

ಲಿನ್‌ಫೋರ್ಡ್ ಕ್ರಿಸ್ಟಿಯದು ಮತ್ತೊಂದು ಕಥೆ. ಹದಿನೈದು ವರ್ಷಗಳ ಕಾಲ ಸತತ ಸೋಲುಂಡ ಕ್ರೀಡಾಪಟು ಈತ. ಆದರೂ ಧೃತಿಗೆಡದ ವ್ಯಕ್ತಿ. ಪ್ರತಿಬಾರಿ ಸೋಲಿನಲ್ಲೂ ಹೊಸ ಅನುಭವವನ್ನು ಕಂಡುಕೊಂಡ ಕ್ರಿಸ್ಟಿ ಈ ಬಾರಿ ಜಗತ್ತೇ ನಿಬ್ಬೆರಗಾಗುವಂತೆ ಓಡಿದ. ಇಲ್ಲಿನ ವರೆಗಿನ ತನ್ನ ಅನುಭವವನ್ನು ಕಾಲಿಗಿಳಿಸಿ ಹುರಿಗೊಳಿಸಿದ ಕ್ರಿಸ್ಟಿ ಮನೋವೇಗವನ್ನು ದೇಹಕ್ಕೆ ವರ್ಗಾಯಿಸಿದ. ಬುದ್ಧಿ–ಭಾವಗಳೊಂದಿಗೆ ದೇಹದ ದೈತ್ಯಬಲ ಸೇರಿಸಿ ಗುರಿಯತ್ತಲೇ ನೋಟ ನೆಟ್ಟು ಓಡಿದ. ಗುರಿಯ ಹೊರತು ಆತನಿಗೆ ಏನೂ ಕಾಣಲಿಲ್ಲ. ಗುರಿ ಮುಟ್ಟಿ ಆಗಬೇಕಾದದ್ದು ಆದಾಗಲೇ ಉಳಿದಿದ್ದೆಲ್ಲ ಆತನ ಅರಿವಿಗೆ ಬಂದಿದ್ದು. 9.86 ಸೆಕೆಂಡುಗಳಲ್ಲಿ 100 ಮೀಟರ್ ದೂರ ಕ್ರಮಿಸಿದ ಕ್ರಿಸ್ಟಿ ಚಿನ್ನ ಗೆಲ್ಲುವುದರೊಂದಿಗೆ ವೇಗದ ಓಟಕ್ಕೇ ವೇಗವನ್ನಿತ್ತ ಪರಾಕ್ರಮಿ ಎಂಬ ಪ್ರಶಂಸೆಗೂ ಪಾತ್ರನಾದ.

30 ವರ್ಷದ ಜಾಕಿ ಜಾಯ್ನರ್ ಕರ್ಸಿ ಮಹಿಳೆಯರ ಒಲಿಂಪಿಕ್ ಹೆಪ್ಟಾಥ್ಲಾನ್ ಪ್ರಶಸ್ತಿಯನ್ನು ಸತತವಾಗಿ ಎರಡನೆಯ ಬಾರಿ ಉಳಿಸಿಕೊಂಡು ವಿಶ್ವದ ಆಲ್‌ರೌಂಡ್ ಮಹಿಳಾ ಅಥ್ಲೀಟ್ ಎಂಬ ಕೀರ್ತಿಗೆ ಪಾತ್ರರಾದರು. 704 ಪಾಯಿಂಟ್ ಗಳಿಸಿದ ಜಾಯ್ನರ್ ಹೆಪ್ಟಾಥ್ಲಾನ್ ಸ್ಪರ್ಧೆಯಲ್ಲಿ ಆರನೆಯ ಅತಿ ಹೆಚ್ಚಿನ ಪಾಯಿಂಟ್ ಗಳಿಸಿದ ಅಥ್ಲೀಟ್ ಆಗಿದ್ದಾರೆ. ವಿಶೇಷವೆಂದರೆ ಕಳೆದ ಬಾರಿ ಅತಿಹೆಚ್ಚಿನ ಪಾಯಿಂಟ್‌ಗಳ ದಾಖಲೆಯೂ ಆಕೆಯ ಹೆಸರಿನಲ್ಲಿತ್ತು.



ಚೀನದ 'ಚಿನ್ನದ ಮೀನು' ಝುವಾಂಗ್ ಯಾಂಗ್‌ಗೆ ಅಭಿನಂದಿಸುತ್ತಿರುವ ಇನ್ನೋರ್ವ ಈಜುಗಾರ್ತಿ ಲೀ ಜಿಂಗ್‌ಯಿ

ಸ್ವತಂತ್ರ ರಾಷ್ಟ್ರಗಳ ಐಕೀಕೃತ ತಂಡದ (ಮಾಜಿ ಸೋವಿಯತ್) ಅಂಗನೆಯರ ಅಂಗ ಕಸರತ್ತು (ಜಿಮ್ನಾಸ್ಟಿಕ್) ರೋಮಾಂಚಕಾರಿ ಮಾತ್ರವಲ್ಲ ಅವರು ಚಿನ್ನವನ್ನು ತಮ್ಮದಾಗಿಸಿಕೊಂಡರು. ಈ ವಿಷಯದಲ್ಲಿ ರಷ್ಯದ ಪುರುಷರೂ ಕಡಿಮೆಯಿಲ್ಲ, ವಿತಾಲಿ ಚೆಬೆರ್ಬೋ ಸಾಧನೆ ಅಪಾರ. ಪುರುಷರ ವಿಭಾಗದ ವೈಯುಕ್ತಿಕ ಜಿಮ್ನಾಸ್ಟಿಕ್‌ನ 4 ಫೈನಲ್ಸ್‌ಗಳಲ್ಲಿ 4 ಚಿನ್ನದ ಪದಕಗಳನ್ನು, ನಂತರದ ನೇರ ಸ್ಪರ್ಧೆಯಲ್ಲಿ 2 ಚಿನ್ನದ ಪದಕಗಳನ್ನೂ ಗೆದ್ದ ಒಲಿಂಪಿಕ್ಸ್‌ನ "ಬಂಗಾರದ ಮನುಷ್ಯ''ನೆಂಬ ಕೀರ್ತಿಗೆ ಪಾತ್ರನಾದ. ಈ ಹಿಂದೆ ನಾಲ್ವರು ರಷ್ಯದ ಜಿಮ್ನಾಸ್ಟಿಕ್ ಪಟುಗಳು ನಾಲ್ಕು ಚಿನ್ನದ ಪದಕಗಳನ್ನು ಗೆದ್ದಿದ್ದರೆಂಬುದನ್ನು ಇಲ್ಲಿ ಸ್ಮರಿಸಬಹುದು. ಅವರೆಲ್ಲರನ್ನು ಮೀರಿಸಿ ಆರು ಪದಕಗಳನ್ನು ಗೆದ್ದ "ಬಂಗಾರದ ಮನುಷ್ಯ''ನ (ವಿತಾಲಿ ಚೆಬೆರ್ಬೋ) ಹೆಸರು ಸ್ವರ್ಣಾಕ್ಷರಗಳಲ್ಲಿ ಬರೆಯು ವಂತಾಯಿತು.

ಡೈವ್ ಹೊಡೆಯುವಲ್ಲೂ, ಈಜುವಲ್ಲೂ ಚೀನ ತನ್ನ ವೈಶಿಷ್ಟ್ಯವನ್ನೂ ಮೆರೆಯಿತು. 19 ವರ್ಷದ ಚೀನದ ಯಾಂಗ್ ಜುವಾಂಗ್ ಒಲಿಂಪಿಕ್ಸ್‌ನ ಚಿನ್ನದ ಮೀನು ಎನಿಸಿಕೊಂಡಳು.

400 ಮೀಟರ್ ಫ್ರೀಸ್ಟೈಲ್ ಈಜಿನಲ್ಲಿ, ನಿಕೋಲೆ ಹೈಸ್ಲೆಟ್, ಡಾರಾ ಟಾರೆಸ್, ಏಜೆಂಲ್ ಮಾರ್ಟಿನೋ ಹಾಗೂ ಏಂಜೆಲ್ ಥಾಮ್ಸನ್ ಅವರನ್ನೊಳಗೊಂಡ ಅಮೆರಿಕದ ಮಹಿಳಾ ತಂಡವು 39.46 ಸೆಕೆಂಡುಗಳಲ್ಲಿ ಗುರಿ ತಲಪಿ ಚಿನ್ನ ಗೆದ್ದು ದಾಖಲೆ ಮಾಡಿದರು.

ಹಂಗರಿಯ ಕ್ರಿಸ್ಟಿನಾ ಎಗಿಸೇಗಿ 100 ಮೀಟರ್ ಬ್ಯಾಕ್‌ಸ್ಟ್ರೋಕ್ ಸ್ಪರ್ಧೆಯಲ್ಲಿ 1 ನಿಮಿಷ 0.68 ಸೆಕೆಂಡುಗಳಲ್ಲಿ ಗುರಿ ತಲುಪಿ ಚಿನ್ನ ಗೆದ್ದು ಇನ್ನೊಂದು ಒಲಿಂಪಿಕ್ ದಾಖಲೆಯನ್ನು ನಿರ್ಮಿ



ರೋಮಾಂಚಕಾರಿ ಅಂಗಕಸರತ್ತು ಮೆರೆದ ಅಂಗನೆ ಐಕೀಕೃತ ರಾಷ್ಟ್ರಗಳ ತಂಡದ ತಾತ್ಯಾನಾ ಗುಟ್ಸು.

ಸಿದ್ದಾರೆ.

ಈಜು ಸ್ಪರ್ಧೆಯಲ್ಲಿ ಆತಿಥೇಯ ದೇಶವಾದ ಸ್ಪೈನ್‌ನ ಮಾರ್ಟಿನ್ ಜುಬೆರೋ 1 ನಿಮಿಷ 58.47 ಸೆಕೆಂಡುಗಳಲ್ಲಿ 200 ಮೀಟರ್ ಬ್ಯಾಕ್ ಸ್ಟ್ರೋಕ್‌ನಲ್ಲಿ ಈಜಿ ಚಿನ್ನ ಗೆದ್ದರು.

ಕ್ರೀಡೆಯಲ್ಲಿ ಉದ್ದೀಪನ ಔಷಧ ಪ್ರಮುಖ ಪಾತ್ರಧಾರಿಯಾಗಿ ಮೆರೆಯಿತು. ಸೋಲ್ ಒಲಿಂಪಿಕ್ಸ್‌ನಲ್ಲಿ ಉದ್ದೀಪನ ಔಷಧಿ ಸೇವನೆಯಿಂದ ಗೆದ್ದ ಪದಕವನ್ನು ಕಳೆದುಕೊಂಡ ಬೆನ್‌ಜಾನ್ಸನ್ ಈ ಬಾರಿ ಪರಿಶುದ್ಧನಾಗಿ ಓಡಿ ಸೋತು ತನ್ನ ಗೆಲುವಿಗೆ ಮದ್ದೇ ಕಾರಣವೆಂದು ರುಜುವಾತು ಮಾಡಿದರೆ, ಚೀನ



ಚಿನ್ನಕ್ಕಾಗಿ ಓಟ – ಎಲೆನಾ ರೊಮಾನೋವ್ (554 ಬಲದಿಂದ ಎರಡನೆಯವರು) ಮಹಿಳೆಯರ 3,000 ಮೀಟರ್ ಓಟದಲ್ಲಿ ಚಿನ್ನಗೆದ್ದ ಬಾಲೆ

ಮತ್ತು ಸಿ.ಐ.ಎಸ್.ನ ಇಬ್ಬರು ಮಹಿಳಾ ಕ್ರೀಡಾಪಟುಗಳು ಉದ್ದೀಪನ ಔಷಧದ ಆಪಾದನೆಗೆ ಗುರಿಯಾಗಿ ತಮಗೂ, ಕ್ರೀಡೆಗೂ ದೇಶಕ್ಕೂ ಕಳಂಕ ತಂದಿರುವರು. 'ಸ್ಟಿರಾಯ್ಡ್' ಸೇವನೆಯ ವಿಷಯ ಈ ಒಲಿಂಪಿಕ್ಸ್‌ನಲ್ಲಿ ವಿಶೇಷ ಚರ್ಚಿತವಾಯಿತು. ಒಟ್ಟು 5 ಜನ ಈ ಆಪಾದನೆಗೆ ಗುರಿಯಾಗಿ ಬಹಿಷ್ಕೃತರಾಗಿದ್ದಾರೆ. ಈ ಬಾರಿಯ ಪರಿಸ್ಥಿತಿ ಎಲ್ಲಿಯವರೆಗೆ ಹೋಯಿತೆಂದರೆ ಸೋತವರು ಗೆದ್ದವರ ಗೆಲುವನ್ನು ಶಂಕಿಸುವಂತಾಯಿತು. ಕೆಲವರು ಗೊಣಗಾಡಿದರೆ ಮತ್ತೆ ಕೆಲವರು ಜೋರಾಗಿ ಹೇಳಿದ್ದಾರೆ. ಮುಂದಿನ ದಿನಗಳಲ್ಲಿ ಚಾಪೆ ಕೆಳಗೆ ತೂರುವ ತಂತ್ರಗಳನ್ನು ಅಥ್ಲೀಟ್‌ಗಳು ಮೈಗೂಡಿಸಿಕೊಂಡರೆ ಆಶ್ಚರ್ಯವಿಲ್ಲ. ಒಲಿಂಪಿಕ್ಸ್‌ನಲ್ಲಿ ಭಾಗವಹಿಸುವುದರಲ್ಲೂ, ಪದಕಗಳನ್ನು ಪಡೆಯುವುದರಲ್ಲೂ ಮಹಿಳಾ ಕ್ರೀಡಾಪಟುಗಳು ತೋರಿದ ಉತ್ಸಾಹ ಪ್ರಶಂಸನೀಯ. ಆದರೆ ಉದ್ದೀಪನ ಔಷಧ ಸೇವನೆಯಲ್ಲೂ ಮಹಿಳೆಯರು ತೋರುತ್ತಿರುವ ಆಸಕ್ತಿ ಕಳವಳಕಾರಿಯಾಗಿದೆ.

ಒಲಿಂಪಿಕ್ ಟೆನಿಸಿನಲ್ಲಿ ಸೋತವರ ಹಳಹಳಿಕೆ ಬೇರೊಂದು ವಿಧ. 'ಇದೆಂಥ ದರಿದ್ರ ಕೋರ್ಟ್. ಇಲ್ಲಿ ಆಡಿದರೆ ಸೋಲೇ ಗತಿ' ಎಂದು ಒಬ್ಬರೆಂದರೆ, 'ಹಾಳು ಹವೆ–ಧಗೆ ಎಲ್ಲ ಕೆಡಿಸಿತು. ವ್ಯವಸ್ಥಾಪಕರಿಗೆ ಏನಾದರೂ ಬುದ್ಧಿ ಇದೆಯೇ? ಆಗಸ್ಟ್ ತಿಂಗಳಲ್ಲಿ ವಿಶ್ವ ಕ್ರೀಡಾಕೂಟ ನಡೆಸಬಹುದೇ?'' ಮತ್ತೊಬ್ಬರ ಗೊಣಗಾಟ. "ಒಲಿಂಪಿಕ್ ಟೆನಿಸ್‌ನಲ್ಲಿ ಗೆದ್ದರೆ ದೊರೆಯುವುದೇನು? ಅಬ್ಬಬ್ಬಾ ಎಂದರೆ ಒಂದು ಚಿನ್ನದ ಪದಕ. ಅದಕ್ಕೆ ಇಷ್ಟೊಂದು ಹೆಣಗಾಡ ಬೇಕೇ?'' ಎಟುಕದ ದ್ರಾಕ್ಷಿ ಹುಳಿ ಎಂದ ನರಿಯ ಬುದ್ಧಿ. "ಒಲಿಂಪಿಕ್ ಟೆನಿಸ್‌ಗೆ ಅಷ್ಟೊಂದು ಮಹತ್ವ ಎಲ್ಲಿದೆ? ಅದನ್ನು ಗ್ರ್ಯಾನ್ ಸ್ಲಾಮ್‌ಗೆ ಹೋಲಿಸಬಹುದೇ?'' ಸೋತ ವಿಶ್ವ ಟೆನಿಸ್‌ನ ತೃತೀಯ ಶ್ರೇಯಾಂಕದ ಆಟಗಾರ ಪೀಟರ್ ಸಾಂಪ್ರಾಸ್‌ನ ಸ್ವಯಂ ಸಾಂತ್ವನ.

ಇಲ್ಲಿ ಪ್ರತಿಭಟನೆಗಳೂ ನಡೆದುವು. ಜಪಾನ್ ವಿರುದ್ಧ ಗೆದ್ದಿದ್ದನ್ನೂ ಅಂತಾರಾಷ್ಟ್ರೀಯ ವಾಲಿಬಾಲ್ ಸಂಸ್ಥೆ ತಿರಸ್ಕರಿಸಿ ಜಪಾನ್‌ಗೆ ಪಂದ್ಯವನ್ನು ನೀಡಿದ್ದನ್ನು ಪ್ರತಿಭಟಿಸಿದ ಅಮೆರಿಕದ ವಾಲಿಬಾಲ್ ಆಟಗಾರರು ನುಣ್ಣಗೆ ಮಿಂಚುವ ಬೋಡು ತಲೆಯೊಂದಿಗೆ ವಾಲಿಬಾಲ್ ಆಡಿ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಲೈಟ್ ಹೆವಿವೈಟ್ (82.5 ಕೆ.ಜಿ.) ವಿಭಾಗದಲ್ಲಿ ಕಂಚು ಗೆದ್ದ ರಷ್ಯದ ವೇಟ್‌ಲಿಫ್ಟರ್ ಇಬ್ರಾಜಿಮ್ ಸೆಮದೋವ್ ತಾನು ಈ ಪ್ರಶಸ್ತಿಯನ್ನು ಸ್ವೀಕರಿಸಲಾರೆ ಎಂದು ಹೇಳಿ ತಿರಸ್ಕರಿಸಿ ಹೊರ ನಡೆದುದರ ಪರಿಣಾಮವಾಗಿ ಒಲಿಂಪಿಕ್ಸ್‌ನ ಆಡಳಿತ ಮಂಡಳಿ ಆತನನ್ನು ಆಜೀವ ಪರ್ಯಂತ ಪಂದ್ಯದಲ್ಲಿ ಭಾಗವಹಿಸಲು ನಿಷೇಧಿಸುವ ಕಠಿಣ ಕ್ರಮ ಕೈಗೊಂಡಿತು.

ಇನ್ನು ಭಾರತದ ವಿಷಯ. ಮಧ್ಯಮ ದೂರದ ಅಗ್ರಮಾನ್ಯ ಓಟಗಾರ್ತಿ ಶೈನಿ ವಿಲ್ಸನ್ ಈ ಒಲಿಂಪಿಕ್ಸ್‌ನಲ್ಲಿ ಚಿನ್ನ ಗೆದ್ದರೆ 3 ಲಕ್ಷ, ಬೆಳ್ಳಿ ಗೆದ್ದರೆ 2 ಲಕ್ಷ, ಕಂಚು ಗೆದ್ದರೆ 1 ಲಕ್ಷ ಬಹುಮಾನ ನೀಡುವುದಾಗಿ ಒಂದು ಖಾಸಗಿ ಸಂಸ್ಥೆ ಘೋಷಿಸಿತ್ತು. ಆದರೆ ಪಂದ್ಯದಲ್ಲಿ ಶೈನಾಗದ ಶೈನಿ ಆ ಸಂಸ್ಥೆಗೆ ಹಣ ಉಳಿತಾಯ ಮಾಡಿದರು.

ಹಾಕಿ ಪಂದ್ಯಕ್ಕೂ ಇದೇ ರೀತಿ ಚಿನ್ನ ಗೆದ್ದರೆ 10 ಲಕ್ಷರೂ. ಬಹುಮಾನ ಘೋಷಿಸಲಾಗಿತ್ತು. ಅಕಸ್ಮಾತ್ ಸೋತರೂ, ರನ್ನರ್ ಅಪ್ ಆಗಿ ಬಂದರೆ 5 ಲಕ್ಷ ರೂಪಾಯಿಗಳು ಗ್ಯಾರಂಟಿಯಾಗಿತ್ತು. ಹಾಗೆಯೇ ಭಾರತೀಯ ಹಾಕಿ ಆಟಗಾರರು ಹಾಕುವ ಪ್ರತಿಯೊಂದು ಗೋಲಿಗೂ 5 ಸಾವಿರ ಪುರಸ್ಕಾರದ ಪ್ರಕಟಣೆಯೂ ಆಗಿತ್ತು. ಅದರಲ್ಲಿ ಅತ್ಯುತ್ತಮ ಆಟಗಾರರಿಗೆ 10ರಿಂದ 15 ಸಾವಿರ ಬಹುಮಾನ ಸಾರಲಾಗಿತ್ತು. ಹಾಕಿ ಫಲಿತಾಂಶ ಏನೆಂದು ಪುನಃ ಹೇಳಬೇಕಾಗಿಲ್ಲ. ಈ ಬಹುಮಾನವನ್ನು ಘೋಷಿಸಿದ ಕೇಡಿಯಾ ಗ್ರೂಪ್‌ನ ಹಣಕ್ಕೆ ಯಾವ ಕೇಡೂ ಆಗಲಿಲ್ಲ.

ಮಲ್ಲಯುದ್ಧದಲ್ಲಿ ಸತೀಶ್ ವರ್ಮಾ ಸ್ವಲ್ಪ ಆಸೆ ತೋರಿಸಿ ನಂತರ ಭಾರತೀಯರನ್ನು ನಿರಾಶೆಗೆ ತಳ್ಳಿದರು. ನಮ್ಮ ಪುರಾಣ ನಾಯಕನಾದ ರಾಮನ "ರಾಮಬಾಣ'' ಗುರಿಗೆ ಹೆಸರಾದದ್ದು. ಆದರೆ ಈ ಒಲಿಂಪಿಕ್ಸ್ ಬಿಲ್ಲಿನ ಸ್ಪರ್ಧೆಯಲ್ಲಿ ಭರವಸೆಯಿಂದ ಪಾಲ್ಗೊಂಡ ಲಿಂಬಾರಾಮ ಗುರಿ ತಪ್ಪಿದ ರಾಮನೆಂಬ



ಮದ್ದಿನ ಸುಳಿಯಲ್ಲಿ ಕ್ಯಾಟ್ರಿನ್ ಕ್ರಬ್ಬೆ.

ಅಪಖ್ಯಾತಿಗೆ ಪಾತ್ರನಾದ. ಉದ್ದೀಪನ ಔಷಧ ಸೇವಿಸದ ಪ್ರಾಮಾಣಿಕರು ಎಂಬ ಒಂದು ವಿಷಯ ಬಿಟ್ಟರೆ, ಒಲಿಂಪಿಕ್ ಸ್ಪರ್ಧೆಗೆ ಅತ್ಯಗತ್ಯವಾದ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದ ಯಾವೊಂದು ಕುರುಹೂ ತೋರದೆ, ಸ್ಪರ್ಧೆಯಲ್ಲಿ ಯಾವುದೇ ರೀತಿಯ ಮಹತ್ವಾಕಾಂಕ್ಷೆ ಮೆರೆಯದ ಭಾರತದ ಆಟಗಾರರು "ಹೋದರು ಸ್ಪರ್ಧಿಸಿದರು ಸೋತರು'' ಎಂಬಂತೆ ಬರಿಗೈಯಲ್ಲಿ ಹಿಂದಿರುಗಿದರು. ಭಾರತೀಯ ಕ್ರೀಡಾಪಟುಗಳಿಗಂತೂ ಇದು ಆತ್ಮಶೋಧನೆಯ ವಿಷಯ. ಈ ಒಲಿಂಪಿಕ್ಸ್ ಸ್ಪರ್ಧೆ ನಮಗೊಂದು ಪಾಠ. ಸಂತೆ ಬಂದಾಗ ಮೂರು ಮೊಳ ನೇಯುವುದನ್ನು ಬಿಟ್ಟು, ಮುಂದೆ ಇಂತಹ ಸೋಲುಗಳನ್ನು ಸಂಧಿಸದಂತೆ ಈಗಿನಿಂದ ಅಭ್ಯಾಸ ಅಗತ್ಯ.

# ವಂದನಲ್ಲೂರು ಶೈಲಿಯ ನೃತ್ಯ ಸಂಜಾತೆ



ವಂದನಲ್ಲೂರು ಶೈಲಿಯ ಭರತ ನಾಟ್ಯ ಕಲಾವಿದೆ ವಸುಂಧರ ದೊರೆಸ್ವಾಮಿ ಅವರಿಗೆ 92–93ನೇ ಸಾಲಿನ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಿದೆ. ಮೈಸೂರಿನ ಸರಸ್ವತಿಪುರಂನಲ್ಲಿ ವಸುಂಧರಾ ಪರ್‌ಫಾರ್ಮಿಂಗ್ ಆರ್ಟ್ ಸೆಂಟರ್ ಎಂಬ ಹೆಸರಿನಿಂದ ನೃತ್ಯ ಶಾಲೆಯನ್ನು ತೆರೆದು ಬೆಂಗಳೂರಿನಲ್ಲಿಯೂ ಸಹಾ ತಮ್ಮ ಶಾಖೆಯನ್ನು ತೆರೆದು ನೂರಕ್ಕೂ ಹೆಚ್ಚು ಶಿಷ್ಯ ವೃಂದವನ್ನು ಪಡೆದಿರುವ ಇವರು ತಮ್ಮ ಶಿಷ್ಯ ಪರಂಪರೆಯನ್ನು ವೃದ್ಧಿಸಲು ಮೈಸೂರು ನಗರದಲ್ಲಿಯೂ, ಶಿವಮೊಗ್ಗ ದಲ್ಲಿಯೂ ತಮ್ಮ ಸಂಸ್ಥೆಯ ಶಾಖೆಯನ್ನು ವಿಸ್ತರಿಸುವ ಯೋಜನೆ ಹೊಂದಿದ್ದಾರೆ. ಭರತ ನಾಟ್ಯ ಮತ್ತು ಯೋಗಾಭ್ಯಾಸದಲ್ಲಿ ಡಾಕ್ಟರೇಟ್ ಪಡೆದು ಭಾರತದ ಪ್ರಮುಖ ನೃತ್ಯೋತ್ಸವಗಳಲ್ಲೆಲ್ಲಾ ನೃತ್ಯ ಪ್ರದರ್ಶನ ನೀಡಿ ಅನೇಕ ಬಿರುದು ಪ್ರಶಸ್ತಿಗಳನ್ನು ಪಡೆದಿರುವ ವಸುಂಧರಾರವರನ್ನು ಭೇಟಿ ಮಾಡಿದಾಗ ಅವರು ತಮ್ಮ ಶಿಷ್ಯರನ್ನು ಇದೀಗ ನಡೆಯುತ್ತಿರುವ ನೃತ್ಯ ಪರೀಕ್ಷೆಗೆ ಸನ್ನದ್ಧರನ್ನಾಗಿ ಮಾಡಿ ಕಳುಹಿಸುವು ದರಲ್ಲಿದ್ದರು.

ಸುಧಾ ಹರೀಶ್ :– ನಿಮ್ಮ ಜನ್ಮಸ್ಥಳ ಯಾವುದು? ಯಾವ ವಯಸ್ಸಿನಲ್ಲಿ ನೀವು ನೃತ್ಯ ಶಿಕ್ಷಣವನ್ನು ಪ್ರಾರಂಭಿಸಿದಿರಿ?

ವಸುಂಧರಾ :– ನನ್ನ ಜನ್ಮಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ಜೈನ ಕಾಶಿ ಎಂದು ಕರೆಯಲ್ಪಡುವ, ಮೂಡಬಿದರೆ ಎಂಬ ಚಿಕ್ಕ ಹಳ್ಳಿ. ನಾನು ನನ್ನ ನಾಲ್ಕನೆಯ ವಯಸ್ಸಿನಲ್ಲಿಯೇ ಕಥಕ್ಕಳಿಯ ನೃತ್ಯ ಶಿಕ್ಷಣವನ್ನು ಆರಂಭಿಸಿದೆ. ಅನಂತರ ನನ್ನ ನೃತ್ಯದಲ್ಲಿನ ಆಸಕ್ತಿಯನ್ನು ಕಂಡು ನನ್ನ ತಂದೆ ದಿವಂಗತ ನಾಗರಾಜ್, ತಾಯಿ ವರದಾದೇವಿಯವರು ನನ್ನನ್ನು ನಮ್ಮ ಹಳ್ಳಿಯಲ್ಲಿಯೇ ಇದ್ದ ನೃತ್ಯ ಶಾಲೆಗೆ ಸೇರಿಸಿದರು.

ಸುಧಾ ಹರೀಶ್ :– ನೀವು ಬಹು ಸಣ್ಣ ವಯಸ್ಸಿನಲ್ಲಿಯೇ ನೃತ್ಯ ಕಾರ್ಯಕ್ರಮಗಳನ್ನು ನೀಡುತ್ತಿದ್ದಿರೆಂದು ಕೇಳಿದೆ.

ವಸುಂಧರಾ :– ಹೌದು. ನಾನು ನನ್ನ ಆರನೆಯ ವಯಸ್ಸಿನಲ್ಲಿ ಮಂಗಳೂರಿನಲ್ಲಿ ದಸರಾ ಮಹೋತ್ಸವದ ಅಂಗವಾಗಿ ನಡೆದ ನೃತ್ಯ ಸ್ಪರ್ಧೆಯಲ್ಲಿ ಬಂಗಾರದ ಪದಕವನ್ನು ಪಡೆದೆ.

ಸುಧಾ ಹರೀಶ್ :– ನಿಮ್ಮ ನೃತ್ಯ ಶಿಕ್ಷಣದ ಗುರುಗಳು ಯಾರು?

ವಸುಂಧರಾ :– ದಿವಂಗತ ಅಭಿನಯ ಶಿರೋಮಣಿ ರಾಜರತ್ನಂ ಪಿಳ್ಳೆಯವರೇ ನನ್ನ ಗುರುಗಳು.

ಸುಧಾಹರೀಶ್ :– ನೃತ್ಯ ಶಿಕ್ಷಣದ ಜೊತೆಗೇ ನೀವು ನಿಮ್ಮ ವಿದ್ಯಾಭ್ಯಾಸದ ಕಡೆಗೂ ಗಮನ ಹರಿಸಿದಿರಾ?

ವಸುಂಧರಾ :– ಹೌದು. ನಾನು ಕಾಲೇಜಿನಲ್ಲಿ ಐಚ್ಛಿಕ ವಿಷಯವನ್ನಾಗಿ ಗಣಿತ ಮತ್ತು ವಿಜ್ಞಾನವನ್ನು ಆರಿಸಿಕೊಂಡು ವಿದ್ಯಾಭ್ಯಾಸ ಮುಂದುವರೆಸಿದೆ. ಅದರ ಜೊತೆಗೂ ನೃತ್ಯ ಶಿಕ್ಷಣಕ್ಕೂ ಹೆಚ್ಚು ಗಮನ ಹರಿಸಿದೆ. ಆದುದರಿಂದಲೇ ಏನೋ ನನಗೆ ವಿದ್ವತ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಗಿಟ್ಟಿಸಲು ಅನುಕೂಲವಾಯಿತು. ಮತ್ತು ನನ್ನ ನೃತ್ಯದ ಸತತ ಸಾಧನೆಯಿಂದ ಇಂಟರ್ ಯೂನಿವರ್ಸಿಟಿ ನೃತ್ಯ ಸ್ಪರ್ಧೆಯಲ್ಲಿ ಮೂರು ವರ್ಷ ನನಗೆ ಸತತವಾಗಿ ಪ್ರಥಮ ಸ್ಥಾನ ದೊರೆಯಿತು.

ಸುಧಾ ಹರೀಶ್ :– ನೀವು ಮೈಸೂರಿನಲ್ಲಿ ಯಾವಾಗ ನಿಮ್ಮ ನೃತ್ಯ ಶಾಲೆಯನ್ನು ಪ್ರಾರಂಭಿಸಿದಿರಿ?

ವಸುಂಧರಾ :– 1972 ನೇ ಇಸವಿಯಲ್ಲಿ ನನ್ನ ವಿವಾಹ ಹೆಸರಾಂತ ಫ್ರೀಲ್ಯಾನ್ಸ್ ಪತ್ರಕರ್ತರಾದ ಹೆಚ್.ಎಸ್. ದೊರೆಸ್ವಾಮಿಯವರೊಡನೆ ನೆರವೇರಿತು. ವಿವಾಹದ ನಂತರ ನಾನು ಮೈಸೂರಿನಲ್ಲಿ ಬಂದು ನೆಲೆಸಿದೆ. 1987ನೇ ಇಸವಿಯಲ್ಲಿ 'ವಸುಂಧರಾ ಫರ್‌ಫಾರ್ಮಿಂಗ್ ಆರ್ಟ್ ಸೆಂಟರ್ ನೃತ್ಯ ಶಿಕ್ಷಣ ಸಂಸ್ಥೆ ತೆರೆದೆ. ಈಗ ಬೆಂಗಳೂರಿನ ಸದಾಶಿವ ನಗರ ದಲ್ಲಿ ಒಂದು ಶಾಖೆಯನ್ನು ತೆರೆದಿದ್ದೇನೆ.

ಸುಧಾ ಹರೀಶ್ :– ನೀವು ನೃತ್ಯ ತರಬೇತಿಯ ಜೊತೆಗೆ ಯೋಗಾಭ್ಯಾಸದ ತರಗತಿಯನ್ನು ನಡೆಸು ವಿರೆಂದು ಕೇಳಿದ್ದೇನೆ. ನೃತ್ಯ ಯೋಗಾಭ್ಯಾಸ ಎರಡೂ ಬೇರೆ ಮುಖವಲ್ಲವೇ?

ವಸುಂಧರಾ :– ನೃತ್ಯ ಯೋಗಾಭ್ಯಾಸ ಎರಡೂ ಬೇರೆ ಮುಖಗಳಾದರೂ ಒಂದೇ ನಾಣ್ಯದ ಎರಡೂ ಮುಖಗಳಿದ್ದಂತೆ. ನೃತ್ಯ ಸಂಗೀತದ ಹಿನ್ನೆಲೆಯಲ್ಲಿ ಹಾಡಿನ ಅರ್ಥವನ್ನು ಭಾವಕ್ಕೆ ಸರಿಯಾಗಿ ಹಾವಭಾವ, ಹಸ್ತ ಮುದ್ರೆಗಳಿಂದ ಅಭಿನಯಿಸುವ ಕಲೆ. ಯೋಗಾಭ್ಯಾಸದಿಂದ ನೃತ್ಯ ಕಲಾವಿದರಿಗೆ ನೃತ್ಯಕ್ಕೆ ತಕ್ಕ ದೇಹ ಮಾಟ, ಏಕಾಗ್ರತೆ , ಆತ್ಮಸ್ಥೈರ್ಯದ ಶಕ್ತಿಯನ್ನು ನೀಡುತ್ತದೆ.



ಸುಧಾ ಹರೀಶ್ :– ನೀವು ನೀಡುತ್ತಿರುವ ನೃತ್ಯ ಶಿಕ್ಷಣದ ಬಗ್ಗೆ ವಿವರಿಸುತ್ತೀರಾ?

ವಸುಂಧರಾ :– ನಾನು ನನ್ನ ಶಿಷ್ಯರಿಗೆ ಗುರುಕುಲ ಪದ್ಧತಿಯ ಶಿಕ್ಷಣವನ್ನು ನೀಡುತ್ತಿದ್ದೇನೆ. ಇದರಿಂದ ಗುರು ಶಿಷ್ಯರ ಬಾಂಧವ್ಯ ತಾಯಿ ಮಕ್ಕಳ ಬಾಂಧವ್ಯ ವನ್ನು ರೂಪಿಸುತ್ತದೆ. ಈ ರೀತಿಯ ಶಿಕ್ಷಣವನ್ನು ಅನುಸರಿಸಿದಾಗ – ಮಕ್ಕಳು ನಿರ್ಭಯರಾಗಿ ಹೆಚ್ಚು ಆಸಕ್ತಿಯಿಂದ ವಿದ್ಯೆ ಕಲಿಯುತ್ತಾರೆಂದು ನನ್ನ ಅನಿಸಿಕೆ.



ಸುಧಾ ಹರೀಶ್ :– ನೀವು ಸಂಗೀತ ನೃತ್ಯ ಅಕಾಡೆಮಿ ಯಲ್ಲಿ ಸದಸ್ಯರಾಗಿ ಎಷ್ಟು ವರ್ಷ ಸೇವೆ ಸಲ್ಲಿಸಿದ್ದೀರಿ. ಸರ್ಕಾರದ ಇನ್ನು ಯಾವ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದೀರಿ?

ವಸುಂಧರಾ :– ನಾನು ಸಂಗೀತ ನೃತ್ಯ ಅಕಾಡೆಮಿ ಯಲ್ಲಿ 1978ರಿಂದ 84ರವರೆಗೆ ಸದಸ್ಯೆಯಾಗಿ ಸೇವೆ ಸಲ್ಲಿಸಿದ್ದೇನೆ. ಮತ್ತು ಕರ್ನಾಟಕ ಸರ್ಕಾರವು ಏರ್ಪಡಿಸುವ ಶಾಸ್ತ್ರೀಯ ನೃತ್ಯ ಪರೀಕ್ಷೆಯ ಮುಖ್ಯ ಪರೀಕ್ಷಾಧಿಕಾರಿಯಾಗಿಯೂ ಸೇವೆ ಸಲ್ಲಿಸಿದ್ದೇನೆ.

ಸುಧಾಹರೀಶ್ :– ನಿಮಗೆ ದೊರೆತಿರುವ ಬಿರುದು ಪ್ರಶಸ್ತಿಗಳ ಬಗ್ಗೆ ಹೆಚ್ಚು ವಿವರಿಸುತ್ತೀರಾ?

ವಸುಂಧರಾ :– ನನಗೆ ನಾಟ್ಯ ರಾಣಿ ಶಾಂತಲ (ಬೆಂಗಳೂರು) ಸಿಂಗಾರಮಣಿ (ಮುಂಬಯಿ) ನಾಟ್ಯ ಸರಸ್ವತಿ (ಚಿಕ್ಕಮಗಳೂರು) ಅಭಿನಯ ಶಿರೋಮಣಿ (ಹೈದರಾಬಾದ್) ನೃತ್ಯ ಸುಂದರಿ (ಮೈಸೂರು) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (ಮೂಡಬಿದರೆ) ದರ್ಶನ ಪ್ರಶಸ್ತಿ (ಕೇರಳ) ತ್ಯಾಗರಾಜ ಬ್ರಹ್ಮ ಗಾನ ಸಭಾ ಪ್ರಶಸ್ತಿ (ಮದರಾಸು) ನಾಟ್ಯರತ್ನ (ಪಾರ್ಥಸಾರಥಿ – ಇಂಟರ್ ನ್ಯಾಷನಲ್ ಕಲ್ಚರಲ್ ಅಕಾಡೆಮಿ) ಪ್ರಶಸ್ತಿ ಗಳು ದೊರೆತಿವೆ.

ಸುಧಾಹರೀಶ್ :– ನೀವು ಭಾರತದಾದ್ಯಂತ ನೃತ್ಯ ಪ್ರದರ್ಶನ ನೀಡಿ ಸೆಮಿನಾರ್‌ಗಳಲ್ಲಿ ಭಾಗವಹಿಸಿದ್ದೀರೆಂದು ಕೇಳಿದ್ದೇನೆ. ಅದರ ಬಗ್ಗೆ ವಿವರಿಸುತ್ತೀರಾ?

ವಸುಂಧರಾ :– ನಾನು ಭಾರತದಲ್ಲಿ ಕರ್ನಾಟಕ, ಮದ್ರಾಸ್, ಮುಂಬಯಿ, ಹೈದರಾಬಾದ್, ನವದೆಹಲಿ, ಎಲ್ಲಾ ಮುಖ್ಯ ನೃತ್ಯೋತ್ಸವಗಳಲ್ಲೂ ಭಾಗವಹಿಸಿದ್ದೇನೆ. ಮತ್ತು ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯಲ್ಲಿ ನವರಸದ ಬಗ್ಗೆ ಲೆಕ್ಚರ್ ಡೆಮಾನ್‌ಸ್ಟ್ರೇಷನ್, ದೆಹಲಿಯಲ್ಲಿ ಕೋರಿಯಾಗ್ರಫಿ ಇನ್ ಗ್ರೂಪ್ ಡ್ಯಾನ್ಸ್ ಬಗ್ಗೆ, ಮುಂಬಯಿಯಲ್ಲಿ ಟೆಕ್‌ನಿಕ್ಸ್ ಇನ್ ಭರತ ನಾಟ್ಯದ ಬಗ್ಗೆ ಉಪನ್ಯಾಸಗಳನ್ನು ನೀಡಿದ್ದೇನೆ. ಸದ್ಯದಲ್ಲಿ ದೆಹಲಿಯಲ್ಲಿ ನಡೆಯುವ ಯೋಗ ಮತ್ತು ಭರತ ನಾಟ್ಯದ ಬಗ್ಗೆ ಕಮ್ಮಟವನ್ನು ನಡೆಸಲು ನನ್ನನ್ನು ಆಹ್ವಾನಿಸಿದ್ದಾರೆ.

ಸುಧಾ ಹರೀಶ್ :– ನಿಮ್ಮ ಸಂಸ್ಥೆಯವರು ನಡೆಸುವ ನಟರಾಜೋತ್ಸವ, ಪಲ್ಲವೋತ್ಸವ, ಪಾರಂಗೋತ್ಸವ ಬಗ್ಗೆ ವಿವರ ನೀಡುವಿರಾ?

ವಸುಂಧರಾ :– ಪಲ್ಲವೋತ್ಸವ ಮತ್ತು ನಟರಾಜೋತ್ಸವದಲ್ಲಿ ಯುವ ಕಲಾವಿದರಿಗೆ ಅವಕಾಶ ನೀಡುತ್ತೇನೆ ಮತ್ತು ಪಾರಂಗೋತ್ಸವದಲ್ಲಿ ಪ್ರಖ್ಯಾತ ಹಿರಿಯ ಕಲಾವಿದರನ್ನು ಆಹ್ವಾನಿಸಿ ಪುರಸ್ಕರಿಸುತ್ತೇವೆ.

ಸುಧಾ ಹರೀಶ್ :– ನೃತ್ಯ ಯೋಗಾಭ್ಯಾಸವಲ್ಲದೆ ನಿಮ್ಮ ಇನ್ನಿತರ ಹವ್ಯಾಸಗಳೇನು?

ವಸುಂಧರಾ :– ಸಂಗೀತ, ಮತ್ತು ನನ್ನ ಏಕೈಕ ಪುತ್ರಿ ಶೃತಿ ಮತ್ತು ನನ್ನ ಪತಿ ದೊರೆಸ್ವಾಮಿಯವರೊಡನೆ ಒಡನಾಟ.

ನೃತ್ಯವನ್ನು ನಿತ್ಯವಾಗಿಸುವ ಗುರಿಯಿಂದ ಸಾಧನೆ ಸಫಲತೆಯ ಸಂಭ್ರಮವಾಗಿಸುವ ವಸುಂಧರಾರವರ ಪರಿಶ್ರಮ ಉತ್ತುಂಗಕ್ಕೇರಲಿ ಎಂದು ಹಾರೈಸಿ ಅವರನ್ನು ಅಭಿನಂದಿಸೋಣ.

– ಸುಧಾ ಹರೀಶ್

ತನ್ನ ವಾರ್ಡಿನ ಬಾಗಿಲ ಬಳಿಯೇ ನಿಂತುಕೊಂಡು ನಗುತ್ತಾ ಮಾತನಾಡುತ್ತಾ ಗುಂಪು, ಗುಂಪಾಗಿ ಸೆಮಿನಾರ್ ಹಾಲ್‌ಗೆ, ಪಾರ್ಟಿಯಲ್ಲಿ ಭಾಗವಹಿಸಲು ಹೋಗುತ್ತಿದ್ದ ವೈದ್ಯರುಗಳು, ಹಿರಿಯ ನರ್ಸುಗಳು, ಪ್ರಮುಖ ಸಿಬ್ಬಂದಿ ವರ್ಗದವರನ್ನು ಆಸೆಯ ಕಣ್ಣುಗಳಿಂದ ನೋಡುತ್ತಾ ನಿಂತಿದ್ದ ಸಾಧನಾಳ ಕಣ್ಣುಗಳಲ್ಲಿ, ನಿರಾಶೆಯಿಂದ ನೀರಿನ ಅಲೆಗಳು, ನಿಧಾನವಾಗಿ ತುಂಬತೊಡಗಿದ್ದವು.

''ಎಂಥಾ ಮೋಸ! ಮೂರು ವರ್ಷಗಳು ಇಲ್ಲಿಂದ ದೂರ ಹೋಗುತ್ತಿರುವ ವಿಷಯ ತನಗೆ ಹೇಳಬಾರದಿತ್ತೆ? ಆ ಸ್ನೇಹ, ಪ್ರೀತಿ, ಕಕ್ಕುಲತೆಯೆಲ್ಲಾ ಸುಳ್ಳೇ? ಊಹುಂ... ತನಗೆ ಹೇಳಬೇಕೆಂದೇ ಈ ದಿನ ತನ್ನನ್ನು ಸಂಧಿಸುತ್ತೇನೆಂದು ಹೇಳಿರಬೇಕು. ಇಷ್ಟಕ್ಕೇ ತಾನು ನಿರಾಶಿತಳಾಗಿ... ''ಮೋಸಗಾರ'' ಎಂದುಕೊಂಡೆನೆ? ಎಂದಾದರೂ ಅವರು ಪ್ರೀತಿಯ ನಾಟಕವಾಡಿ, ನಂಬಿಸಿದ್ದರೆ? ಊಹುಂ ಥತ್! ಭಾವುಕಳಾಗಿ ತೀರಾ ಕೆಳಮಟ್ಟಕ್ಕಿಳಿದ ಅವಳಂತೆ ತನ್ನ ಸ್ನೇಹ ಬೇಡವಾದರೇನಂತೆ? ತಾನೊಬ್ಬಳೇ ತಾನೇ ಸ್ನೇಹ...ಆತ್ಮೀಯತೆ ಅಂತ ಭಾವನೆಗಳ ಮೂಟೆ ಕಟ್ಟಿಕೊಂಡು ಎದೆಯ ಮೇಲಿಟ್ಟುಕೊಂಡಿರುವುದು? ಏನೇ ಆದರೂ ಸಹಿಸಿಕೊಳ್ಳಲೇ ಬೇಕು...''

ಸಾಧನಾಳ ತಲೆಯಲ್ಲಿ ಏನೇನೋ ಭಾವನೆಗಳ ತುಮುಲ ನಡೆದಿತ್ತು.

''ಸಿಸ್ಟರ್... ರೀ ಸಿಸ್ಟರ್...ಇ.ಸಿ.ಜಿ.ಗೆ ಸೆಟ್ ಮಾಡ್ಬೇಕು....'' ಒಳಗಡೆಯಿಂದ ಬಂದ ದನಿಗೆ.. ಬೆಚ್ಚಿದವಳಂತೆ ವಾಸ್ತವಕ್ಕೆ ಬಂದು...ಕರೆ ಬಂದತ್ತ ಓಡಿದಳು.

''ಕನಸು ಕಾಣ್ತಾ ಇದ್ದೀರಾ? ಎಷ್ಟು ಸಾರಿ ಕರೆದೆ ಗೊತ್ತೆ....'' ಡ್ಯೂಟಿ ಡಾಕ್ಟರ್ ಆಕ್ಷೇಪಣೆಯ ಸ್ವರದಿಂದ ಮಾತನಾಡಿದ. ತನ್ನ ತಪ್ಪಿನ ಅರಿವಿದ್ದುದರಿಂದ ಸಾಧನಾ ಮಾತನಾಡಿ ಸಮರ್ಥಿಸಿಕೊಳ್ಳಲು ಹೋಗದೆ, ''ಕ್ಷಮಿಸಿ...ಡಾಕ್ಟರ್...'' ಎಂದಿಷ್ಟೇ ಹೇಳಿ... ಹೊಸದಾಗಿ ಬಂದಿದ್ದ ರೋಗಿಯತ್ತ ಗಮನ ಹರಿಸಿದಳು. ಕೈಗಳು ಯಾಂತ್ರಿಕವಾಗಿ ಕೆಲಸ ಮಾಡುತ್ತಿದ್ದರೂ, ಅವಳ ಮನಸ್ಸೆಲ್ಲಾ ಮೇಲಿನ ರೂಮಿನಲ್ಲಿ ನಡೆಯುತ್ತಿದ್ದ ಪಾರ್ಟಿ ಬಳಿ ಹೋಗಿತ್ತು. ಸ್ವಲ್ಪವೂ ಸದ್ದಾಗಲೀ [illegible] ತಾನಿದ್ದ ವಾರ್ಡಿಗೆ ಕೇಳಿಸ [illegible] ಮ್ಲಾನವಾಗಿತ್ತು.

[illegible]




ಬಿಡ್ತೀನಿ... ಮೇಲಿನ ಫ್ಲೋರಲ್ಲಿ ತಾನೇ ಇರೋದು? ...ಬರ್ಲಾ?...'' ಮಾತನಾಡುತ್ತಲೇ ಹೊರಗೆ ಹೋದ ಅವನತ್ತ ನೋಡಿದ. ಸಾಧನಾ ರೋಗಿಗೆ ಇಂಜೆಕ್ಷನ್ ಕೊಡಲು ರೂಮಿನತ್ತ ನಡೆದಳು.

ಅಷ್ಟರಲ್ಲಿ ಫೋನು ಕಿರುಗುಟ್ಟಿತು. ಇಂಜೆಕ್ಷನ್ ರೋಗಿಗೆ ನೀಡಿದ ಸಾಧನಾ ಕೈತೊಳೆಯುವುದನ್ನು ಅರ್ಧದಲ್ಲಿಯೇ ಬಿಟ್ಟು ಓಡಿ ಬಂದು ಫೋನನ್ನು ಎತ್ತಿ

''ಹಲೋ...'' ಎಂದಳು.

''ನಾನು...ಡಾಕ್ಟರ್...ರಮೇಶ್...''- ಸ್ವರ ಕೇಳಿದ ಕೂಡಲೇ ಸಾಧನಾಳ ಎದೆ ಬಿರಿದು ಬಂದಂತಾಯಿತು.

''ಈಗ ಪಾರ್ಟಿ ನಡೀತಾ...ಇದೆ... ಸಾಯಂಕಾಲ ಬರ್ತೀನಿ. ಸಿಕ್ತೀಯಾ? ''

''ಹೂಂ...''

''ಎಲ್ಲಿಂತಾ ಕೇಳಲೇ ಇಲ್ಲ?''

''ಆಂ?''

''ಅಲ್ಲೇ ವಾರ್ಡಿನಲ್ಲಿರು... ಸಂಜೆ ಬರ್ತೀನಿ...''

''ಹೂಂ...''- ಅತ್ತ ಫೋನನ್ನು ಕೆಳಗಿಟ್ಟ ಶಬ್ದ

# 6

**ಇಲ್ಲಿಯವರೆಗೆ....**

ರಮೇಶ್ ಹಾಗೂ ಸಾಧನಾ ನಡುವೆ ಪ್ರೇಮ ಅವ್ಯಕ್ತವಾಗಿತ್ತು. ತನ್ನ ಹೃದ್ರೋಗದಿಂದಾಗಿ ಸಾಧನಾಳ ಬದುಕು ಹಾಳಾಗಬಾರದೆಂದು ರಮೇಶ್ ಭಾವನೆಗಳಿಗೆ ಪುಟ ನೀಡಿರಲಿಲ್ಲ. ಆದರೂ ರಮೇಶ್ ಒಮ್ಮೆ ಹತೋಟಿ ತಪ್ಪಿದ. ಆದರೆ ಸಾಧನಾಗೆ ಇದು ಆಪ್ಯಾಯಮಾನವಾಗಿತ್ತು. ಈ ಕುರಿತು ಆಕೆ ತನ್ನ ಗೆಳತಿಯರಲ್ಲಿ ಹೆಮ್ಮೆಯಿಂದ ಹೇಳಿದಳು. ಆದರೆ ಮರುದಿನ ರಮೇಶ್ ಕ್ಯಾನ್ಸರ್ ಕಾಯಿಲೆಯ ಕುರಿತು ಹೆಚ್ಚಿನ ಶಿಕ್ಷಣ ಪಡೆಯಲು ಮುಂಬಯಿಗೆ ಹೋಗುವ ಸುದ್ದಿ ತಿಳಿದಾಗ ತೀವ್ರ ನಿರಾಶಳಾದಳು.

— ಇನ್ನು ಮೇಲೆ

ಕೇಳಿ ಬಂದರೂ, ರಿಸೀವರನ್ನು ಕೆಳಗಿಡದೇ ಹಿಡಿದುಕೊಂಡೇ ನಿಂತಿದ್ದಳು... ಬೀಸಿ ಬಂದ ತಂಪು ಗಾಳಿಗೆ ಎದೆ ತುಂಬಿ ಬಂದಂತಾಗಿತ್ತು. ನಿರಾಶೆಯ ಮೋಡಗಳು ಯಾವಾಗಲೋ ಗಾಳಿಗೆ ಚದುರಿ ಹೋಗಿದ್ದವು.

ಮುಂದಿನ ಕ್ಷಣಗಳಲ್ಲಿ ಸಂಜೆಯಾಗುವುದನ್ನು ಕಾಯುವುದೇ ಅವಳ ಪಾಲಿನ ಮಹತ್ವದ ಕೆಲಸವಾಗಿತ್ತು. ರೋಗಿಗಳೂ ಜಾಸ್ತಿ ಇಲ್ಲವಾದುದರಿಂದ ಅವಳಿಗೆ ಯಾವ ಅಡೆತಡೆಗಳೂ ಇಲ್ಲದಂತೆ ಆಗಿತ್ತು.

ಮಧ್ಯಾಹ್ನ ಊಟ ಮಾಡಲು ಮೋನಾಳಿಂದ ಫೋನು ಬಂದರೂ ಹೋಗದೇ ಉಳಿದ ಸಾಧನಾಳಿಗೆ ಹಸಿವು...ನೀರಡಿಕೆಗಳೆಲ್ಲಾ ಮಾಯವಾದಂತೆ ಆಗಿತ್ತು.

ಸಂಜೆ...

ವಾರ್ಡಿನೊಳಗೆ ನೇರವಾಗಿ ಬಂದ ರಮೇಶ್,

''ಸಾಧನಾ..''- ಎಂದು ಮೆಲುವಾಗಿ ಕರೆದ. ಹೃದ್ರೋಗದ ರೋಗಿಗಳಿರುವ ವಾರ್ಡ್ ಆಗಿದ್ದುದರಿಂದ ದನಿ ಏರಿಸಿ ಮಾತನಾಡಬಾರದಿತ್ತು.

ನವಿಲಿನಂತೆ ನಡೆದು ಬಂದು ಎದುರಿಗೆ ನಿಂತು ಅವಳತ್ತ ನೋಡಿದ. ಮುಖ ದಣಿದಂತೆ ಕಂಡರೂ, ಆ ಕಣ್ಣುಗಳಲ್ಲಿ ಅದೆಂಥಾ ಹೊಳಪು! ಎಂತಹಾ ಆಕರ್ಷಣೆ!

''ಡ್ಯೂಟಿ ಡಾಕ್ಟರ್ ಇಲ್ವಾ?'' -ರಮೇಶ್ ಕೇಳಿದ.

''ಊಹುಂ. ಕಾಫಿಗೆಂದು ಹೋಗಿದ್ದಾರೆ...'' ಎಂದಿನಂತೆ ಬಿಳಿಕೋಟು ಧರಿಸಿರದೇ, ಕಡು ನೀಲಿ ವರ್ಣದ ಸೂಟಿನಲ್ಲಿ ಅತ್ಯಂತ ಆಕರ್ಷಕ, ಮೋಹಕವಾಗಿ ಕಾಣುತ್ತಿದ್ದ, ತನ್ನೆದುರು ನೀಳವಾಗಿ ಮೇರು ಪರ್ವತದಂತೆ ನಿಂತಿದ್ದ, ತನ್ನ ಆರಾಧ್ಯಮೂರ್ತಿಯ ಹೃದಯದಲ್ಲೇಕೆ... ಶೂನ್ಯತೆಯ ದುರ್ಬಲ ಕೋಣೆಗಳು?

ಕ್ಷಣದಲ್ಲಿ ಮಿಂಚಿ ಮಾಯವಾದ ಅನೇಕ ಭಾವನೆಗಳಲ್ಲಿ ಶಾಶ್ವತವಾಗಿ ಕರುಣೆ, ನೋವು ಉಳಿಯಿತು.

''ಕೂತ್ಕೊಳ್ಳಿ... ಸರ್...''- ಮೃದುವಾಗಿ ಹೇಳಿದಳು.

"ನಾನೇನು ರೋಗಿ ತರಹಾ ಕಾಣ್ತಾ ಇದ್ದೀನಾ?..."

- ಹಾಸ್ಯ ಮಾಡುವವನಂತೆ ನಗುತ್ತಾ ಕೇಳಿದರೂ ಸೂಕ್ಷ್ಮವಾದ ನೋವಿನ ಗೆರೆ ಅವನ ಕಣ್ಣುಗಳಲ್ಲಿ ಕಂಡಿತು.

"ಯಾರು...ಸರ್...ಹಾಗೇಳ್ತಾರೆ?.."

"ಇಲ್ಲಿ ಜಾಸ್ತಿ ಮಾತನಾಡೋದು ಬೇಡಾ... ಹೊರಗೆ ಹೋಗೋಣ..." -ಎಂದ ರಮೇಶ್.

"ವಾರ್ಡಿನಲ್ಲಿ ಯಾರೂ ಇಲ್ಲ..."

"ನಾನೇನು ಪಾರ್ಕಿಗೆ ಕರೀತಾ ಇಲ್ವೇ ಹುಡುಗಿ... ಈ ವಾರ್ಡಿನಿಂದಾಚೆಯಲ್ಲಿ ನಿಂತ್ಕೊಳ್ಳೋಣವೆಂದೆ..."

ಸಾಧನಾಳ ಮುಖ ಕೆಂಪೇರಿತು. [illegible]

[illegible]



ಸಾಧನಾಳಿದ್ದ ವಾರ್ಡಿನ ರೋಗಿಯ ಕಡೆಯವರೂ ಜಾಸ್ತಿಯಿರದ ಕಾರಣ ಪ್ರಶಾಂತವಾಗಿತ್ತು.

ಕಾಲುಹಾಗೆ ಕಾಲಿಡುತ್ತಿದ್ದ ಹಾಗೆಯೇ ಏನನ್ನೋ ಯೋಚಿಸಿದ ರಮೇಶ್.

"ಸಾಧನಾ...ನೀನಿನ್ನೂ ಇಲ್ಲೇ ಎಷ್ಟು ಹೊತ್ತಿನ ತನಕ ಇರ್ತೀಯಾ?" - ಹಿಂತಿರುಗಿ ನಿಂತು ಕೇಳಿದ.

"ರಾತ್ರಿ ಡ್ಯೂಟಿಯವರು ಬಂದು ರಿಲೀವ್ ಮಾಡುವವರೆಗೂ ಇರ್ಬೇಕು...ಅಂದರೆ ಏಳೂವರೆ ಎಂಟು ಘಂಟೆಯಾಗಬಹುದು" -ಎಂದಳು ಅವಳ ಮುಖದಲ್ಲಿ ಮೂಡಿದ ಆಶ್ಚರ್ಯದ ಗೆರೆಗಳನ್ನು ನೋಡಿದ ರಮೇಶ್,

"ನೀನಿಲ್ಲೇ ಇರು...ನಾನು ಫೋನು ಮಾಡ್ತೀನಿ..."- ಎಂದು ಮೆಲುವಾಗಿ ನಕ್ಕು ಹೊರಟ ಅವನತ್ತ ದಿಗ್ಭ್ರಾಂತಳಾಗಿ ನೋಡಿದಳು. ಅವನನ್ನು ಹಿಂತಿರುಗಿ ಕರೆಯಲು ತವಕಿಸಿದ ನಾಲಿಗೆಯನ್ನು, ನಡೆಯಲು ಹೊರಟ ಕಾಲುಗಳನ್ನು ಬಲವಂತವಾಗಿ ತಡೆ ಹಿಡಿದಳು.

'ಸಂಜೆ ಬರ್ತೀನಿ..ಮಾತನಾಡ್ಬೇಕು' ಎಂದವನು ಹೇಳಿದ ಸಮಯಕ್ಕೆ ಬಂದಿದ್ದ...ವಾರ್ಡಿನಲ್ಲಿ ಯಾರ ಅಡ್ಡಿ ಆತಂಕವು ಇರದಿದ್ದರೂ ಹೆಚ್ಚು ಮಾತನಾಡದೆ ಆಶ್ಚರ್ಯದ ಮಡುವಿನಲ್ಲಿ ಕೆಡವಿ ಹೋದ ಅವನ ವರ್ತನೆಯನ್ನು ಅರ್ಥ ಮಾಡಿಕೊಳ್ಳಲು ಹೆಣಗುವವಳಂತೆ ಮುಖ ಮಾಡಿಕೊಂಡು, ಪುನಃ ತನ್ನ ರೂಮಿಗೆ ಬರುತ್ತಿದ್ದ ಹಾಗೆಯೇ ಫೋನು "ಟ್ರಿನ್ ಟ್ರಿನ್" ಎಂದಿತು.

ತುಡಿಯುತ್ತಿದ್ದ ಹೃದಯದೊಂದಿಗೆ ಫೋನನ್ನು ಕೈಗೆತ್ತಿಕೊಂಡಳು.

"ಹಲೋ..."

"ಡಾಕ್ಟರ್ ರಮೇಶ್..."

"ಯಾಕೆ ಹಾಗೆ ಹೊರಟೇ ಹೋಗಿ ಬಿಟ್ರಿ?"

"ನೋಡ್ಬೇಕು ಅನ್ನಿಸಿತು. ಬಂದು ನೋಡಿದೆ. ಈಗ ಮಾತನಾಡಿಸ್ಬೇಕೂಂತ ಅನ್ನಿಸಿತು.. ಮಾತನಾಡ್ತಾ ಇದ್ದೇನೆ..."

ಸಾಧನಾಳಿಗೆ ಸಿಟ್ಟು ಬಂದಿತು.

"ನೀವು ಡಾಕ್ಟರುಗಳು. ಹೇಗೆ ಬೇಕಾದ್ರೂ ಮಾಡಬಹುದೂಂತಾನಾ".

"ಓಹ್ಹೊಹ್ಹೊ....ಸಿಟ್ಟು ಬಂತಾ?" ಅತ್ತ ಕಡೆಯಿಂದ ನಗುವಿನ ಮಾತು ಕೇಳಿ ಬಂದಿತು.

"....."

"ಈಗ ನಮಗೆ ಸಮಾಧಾನವಾಯ್ತು.. ಯಾಕೆ ಗೊತ್ತಾ, ನಮಗ ಬರೀ ಕರುಣೆ, ಅನುಕಂಪವನ್ನು ಅನುಭವಿಸಿ, ಅನುಭವಿಸಿ ಜಿಗುಪ್ಸೆ ಹಿಡಿದು ಹೋಗಿತ್ತು... ಸಿಟ್ಟು ಮಾಡಿಕೊಳ್ಳುವವರೂ ಇದ್ದಾರೆಂತ್ರ ಖುಷಿ ಕೊಡುವ ವಿಷಯ.."

"ನೀವು ಅರ್ಥವೇ ಆಗೋಲ್ಲ ಸರ್..."

"ಅದಕ್ಕೆ ಫೋನು ಮಾಡಿದ್ದು..." - ಎಂದು ಒಂದು ಕ್ಷಣ ನಿಲ್ಲಿಸಿದವನು,

"ನಿನ್ನೆ ನಡೆದ ನನ್ನ ವರ್ತನೆ. ಘಟನೆಯ ಬಗೆ ನಾಚಿಕೆ ಎನ್ನಿಸಿದೆ...ಕ್ಷಮಿಸಿದೆಯಾ?" ಕೇಳಿದ.

"......"

"ಸಾಧನಾ"

"ಹೂಂ..."

"ಮಾತನಾಡು..."

"ಏನೆಂದು ಮಾತನಾಡಲಿ? ನನಗೆ ನಾಚಿಕೆಯೆನ್ನಿಸಲಿಲ್ಲ... ಅಪಮಾನವೆನ್ನಿಸಲೇ ಇಲ್ಲ..."

"ನೀನು ತಪ್ಪು ಭಾವಿಸಿಕೊಂಡಿದ್ದೀಯಾ..."

"ನೋ...ಸರ್...ನೀವೇ ತಪ್ಪು ತಿಳಿದಿದ್ದೀರಿ. ಪ್ರೀತಿ ಸ್ನೇಹ ವ್ಯಕ್ತಪಡಿಸಲು ಅಂತಸ್ತಿನ ಅಂತರವಿದೆಯಾ? ನಮಗೆ ಬೇಕಾದ ವ್ಯಕ್ತಿಯನ್ನು ನಮ್ಮ ದೇಹ ಗುರುತಿಸುತ್ತಿದೆಯಂತೆ..."

"ತುಂಬಾ ಓದ್ತೀಯಾಂತ ಕಾಣುತ್ತೆ... ನಾನೊಬ್ಬ ಜವಾಬ್ದಾರಿಯುತ ಸರ್ಜನ್ ಆಗಿ.

## ಒಲುಮೆ

ನನ್ನೊಲವೇ,
ನೀನಂದು ನೀಳ ಕೇಶರಾಶಿಯ
ಕಪ್ಪು ಕಂಗಳ
ಬಳುಕುವ ನಡುವಿನ ಸುಂದರಿ
ವರುಷಗಳು ಸಂದು
ನೀನೀಗ ಮೋಟು ಕೂದಲ
ಮಂದ ದೃಷ್ಟಿಯ
ಗಜ ಗಮನೆಯಾದರೂ-
ನನ್ನ ಹೃದಯ ಮಂದಿರದ
ಚಿರಂತನ ಮೂರುತಿ - ನೀನು

## ಘಟ್ಟಗಳು

ಬೆಳಗು ಹರಿವುದು
ಬಾಲ್ಯದಲ್ಲಿ-
ತುಂಟಾಟದ ಆಮೋದ,
ಝಳಝಳ ಬಿಸಿಲು-
ಯೌವನ - ಕಾಮನ
ವಾಸಸ್ಥಾನ;
ಮುದಿತನವೇ ಮುಚ್ಚಂಜೆ
ಹದವರಿತ ನಡೆ-ನುಡಿ;
ಸಾವೇ ಸೂರ್ಯಾಸ್ತಮಾನ
ದುರ್ಭರ ಬದುಕಿನ
ಬಿಡುಗಡೆ...

— ಗಾಯತ್ರಿ ಎಂ. ಭಟ್

ಇನ್ನೂ ಈಗ ಕಾಲೇಜಿಗೆ ಸೇರಿದ ಹರೆಯದ ಯುವಕನಂತೆ ಮಾತನಾಡಬೇಕಿತ್ತೆ?"

"ಮುದುಕರಂತೂ ಖಂಡಿತಾ ಅಲ್ಲವಲ್ಲ...."

"ನಿನ್ನೆ ನಡೆದ ನನ್ನ ಹುಡುಗು ವರ್ತನೆಯ ಬಗ್ಗೆ ತಪ್ಪು ತಿಳಿಯಬೇಡಾ... ನಾನೂ..ಮನುಷ್ಯ ತಾನೇ? ಎಷ್ಟೋ ವರ್ಷಗಳಿಂದ ಹೆಪ್ಪುಗಟ್ಟಿದಂತಿದ್ದ ಭಾವನೆಗಳು ಕರಗ ತೊಡಗಿವೆ ಅನ್ನಿಸ್ತಾಯಿದೆ. ಒಳ್ಳೆಯದಕ್ಕೋ ಕೆಟ್ಟದಕ್ಕೋ ಗೊತ್ತಿಲ್ಲ...."

"ಸಾ! ಕೆಟ್ಟದ್ದನ್ನು ಮಾತನಾಡಬೇಡಿ. ಕೆಟ್ಟದ್ದು ಏನೂ ನಡೆದಿಲ್ಲ... ಮುಂದೆ ನೂ ಆಗೋಲ್ಲ... ನಾನಿರ್ತೀನಲ್ಲ..."

"ಅಂದರೆ?"

"ಅಂದರೆ... ನಾನು...ಯಾವಾಗಲೂ ನಿಮ್ಮ ಜೊತೆ ಇರಲು ಬಯಸುತ್ತೇನೆ.. ಹಾಗೆಯೇ ಇರುತ್ತೇನೆ ಕೂಡಾ...."

"ಮದ್ವೆಯ ಬಗ್ಗೆ ಕನಸು ಕಾಣ್ತಾ ಇದ್ದೀಯಾ? ಹೇಗೆ?"

"ಊಹೂಂ...ಖಂಡಿತಾ ಇಲ್ಲ..ನಂಗೆ ನಿಮ್ಮ ಬಳಿಯೇ ಇರ್ಬೇಕೂಂತ ಅನ್ನಿಸುತ್ತೆ...ಅಷ್ಟೇ...."

"ತಲೆ ಕೆಟ್ಟಿದೆಯಾ ಹುಡುಗಿ? ಒಳ್ಳೆಯ ಹುಡುಗನನ್ನು ನೋಡಿ ಮದ್ವೆ ಮಾಡಿಕೊಳ್ಳೋದು ಬಿಟ್ಟು, ಏನೇನೋ ಕಲ್ಪಿಸಿಕೊಂಡು ಮಾತಾಡ್ತಾ ಇದ್ದೀಯಲ್ಲ?"

"ನೀವು ಹೇಳಿದ ಹಾಗೆ ಯಾರನ್ನಾದ್ರೂ ಮದ್ವೆಯಾದ್ರೆ ಖಂಡಿತಾ ತಲೆ ಕೆಡುತ್ತೆ ಅಷ್ಟೇ...ನಾನು ಹೆಣ್ಣಾಗಿಯೇ ಮದುವೆ, ಸಮಾಜಾಂತ ಯೋಚಿಸಿಲ್ಲ.. ನೀವ್ಯಾಕೆ ಯೋಚಿಸ್ಬೇಕು"

"ನಾನು ದೊಡ್ಡವನು... ನಿನ್ನ ಹಾಗೆ ಬೇಜವಾಬ್ದಾರಿಯಲ್ಲ... ಈಗಾಗಲೇ ಪಿಸು ಮಾತಿನ ಹೊಗೆ ಅಲ್ಲಲ್ಲಿ ಪ್ರಾರಂಭವಾಗಿರೋದು ನಂಗೆ ತಿಳಿದಿದೆ. ನನ್ನ ಬಗ್ಗೆ ನನಗೆ ಯೋಚನೆಯಿಲ್ಲ...ನೀನಿನ್ನೂ ಏನೂ ಅರಿಯದ ಮುಗ್ಧೆ. ಸುಂದರ ಬದುಕು ನಿನ್ನ ಮುಂದಿದೆ... ಕೇವಲ ಕ್ಷಣಿಕ ಸುಖಕ್ಕಾಗಿ ಅದನ್ನು ಕೆಡವಿ ಕೆಡಿಸಲೇ?"

"ಕೆಡಿಸೋದು ಅಂದ್ರೆ?".

"ಮ್... ಮ್...-" — ರಮೇಶನಿಗೆ ತಡವರಿಸುವಂತಾಯಿತು. ಬಾಣ ಬಿಟ್ಟಂತೆ ನೇರವಾಗಿ, ದಿಟ್ಟವಾಗಿ ಕೇಳುವ ಈ ಹೆಣ್ಣಿಗೆ ಹೇಗೆ ಸಮಜಾಯಿಷಿ ನೀಡುವುದು?

"ಹೇಳಿ... ಸರ್... ಸಿನಿಮಾದಲ್ಲಿ ತೋರಿಸ್ತಾರಲ್ಲಾ ಆ ರೀತೀನಾ? ಸರ್?" - ಕಿಲಕಿಲನೆ ನಗುತ್ತಾ ಕೇಳಿದಳು. ಏನೇನೋ ಮಾತನಾಡಿ ಬುದ್ಧಿ ಹೇಳಿ, ಹೋಗಲು ಬಂದಿದ್ದ ರಮೇಶ್, ಈಗ ತಾನೇ ಮಾತು ಕೇಳಿಸಿಕೊಳ್ಳುತ್ತಾ ಕುಳಿತುಕೊಳ್ಳಬೇಕಾಗಿತ್ತು.

"ಎಲ್ಲಿಂದ ಮಾತಾಡ್ತಾ ಇದ್ದೀರಿ... ಸರ್..."

"ನನ್ನ ಛೇಂಬರಿನಿಂದ..."

"ಅಲ್ಲಿಗೇ ಬರಲೇ?"

"ಕಾಲು ಮುರಿತೀನಿ ಹುಡುಗಿ.. ಜೀವನಾಂದ್ರೆ ಹುಡುಗಾಟ ಅಂದ್ಕೊಂಡಿದ್ದೀಯ? ನಾನು ಹೇಳ್ತಾ ಇರೋ ವಿಷಯದ ಬಗ್ಗೆ ಗಂಭೀರವಾಗಿ ಯೋಚಿಸು.. ಪ್ರೀತಿ ಪ್ರೇಮಾಂತ ಭ್ರಮೆಗೊಳಗಾಗಬೇಡ... ನಿನ್ನ ಗುರಿ ನೀನು ಸಾಧಿಸಿಕೋ... ದುರ್ಬಲ ಗಳಿಗೆಯಲ್ಲಾದ ಸಣ್ಣ ತಪ್ಪು ಮರೆತುಬಿಡು... ನಿನ್ನೊಂದಿಗೆ ಫ್ಲರ್ಟ್ ಮಾಡೋ ಅಪೇಕ್ಷೆ ನನಗಿಲ್ಲ.. ನಾನು ಬೊಂಬಾಯಿಗೆ ಹೋಗ್ತಾಯಿದ್ದೀನಿ... ತಿರುಗಿ ಬರ್ತೀನೋ ಇಲ್ವೋ.. ದೇವರಿಗೇ ಗೊತ್ತು.. ಪೊಟರೆ ಬಿದ್ದ ಮರಕ್ಕೆ ಬಳ್ಳಿಯಂತೆ ಹಬ್ಬುವಾಸೆ ಒಳ್ಳೆಯದಲ್ಲ ಸಾಧನಾ..."

"ಸರ್... ಏನೇನೋ ಮಾತಾಡ್ಬೇಡಿ... ನಿಮ್ಗೇನೂ ಆಗೋಲ್ಲ.. ಪುನಃ ಬಂದೇ ಬರ್ತೀರಿ. ಆ ನಂಬಿಕೆ ನನಗಿದೆ. ಪೊಟರೆಯೊಳಗೆ ಕ್ರಿಮಿ

ಕೀಟಗಳು ವಾಸ ಮಾಡದಂತೆ, ತಡೆಯಲು ಬಳ್ಳಿ ಹಬ್ಬಲು ಬಯಸಿ, ಎಲೆಗಳಿಂದ ಪೊಟರೆಯನ್ನು ಮುಚ್ಚಿ ರಕ್ಷಣೆ ನೀಡಲು ಬಯಸುವುದು ತಪ್ಪೇ ಸರ್?''

''.......''

''ನಾನು ಆಶಾವಾದಿ ಸರ್.. ನಾನು ಯಾವಾಗಲೂ ಒಳ್ಳೆಯದರ ಬಗ್ಗೆಯೇ ಚಿಂತಿಸುತ್ತೇನೆ... ಅದರಂತೆ ನಡೆಯುತ್ತೇನೆ... ಬದುಕು ನನಗೆ ಸಾಕಷ್ಟು ಅನುಭವ ನೀಡಿದೆ..."

"ಕಾಗದದ ದೋಣಿಯಲ್ಲಿ ಯಾನ ಮಾಡುವದು ಕ್ಷೇಮಕರವಲ್ಲ.''

''ನೀವು ಬೊಂಬಾಯಿಗೆ ಯಾವಾಗ ಹೋಗ್ತಿರಿ?'' -ಸಾಧನಾ ಮಾತಿನ ಜಾಡನ್ನು ಬದಲಿಸಿದಳು.

''ನಾಳಿನ ಫ್ಲೈಟ್‌ಗೆ ಹೋಗ್ತಾಯಿದ್ದೀನಿ...''

''ಇಷ್ಟು ಬೇಗ?...''

''ಹೌದು. 'ಟಾಟಾ ಮೆಮೋರಿಯಲ್' ಆಸ್ಪತ್ರೆಯಲ್ಲಿ ಸೀನಿಯರ್ ರೆಸಿಡೆನ್ಸಿಯಾಗಿ ಮೂರು ವರ್ಷಗಳಿದ್ದು ಬರ್ಬೇಕು. ಇದು ನನ್ನ ಬಹಳ ದಿನಗಳ ಪ್ರಯತ್ನ...''

''ಇದರಿಂದ ಆರೋಗ್ಯಕ್ಕೆ ಹಾನಿ ಇಲ್ಲ ತಾನೇ?''

''ಈಗ ತಾನೇ ನೀನು ಭವಿಷ್ಯ ಹೇಳಿದೆ... ನಂಗೆ ಏನೂ ಆಗೋಲ್ಲಾಂತ...'' - ನಗುತ್ತಾ ಹೇಳಿದ. ಅವನ ಸ್ವರದಲ್ಲಿ ನಿರಾಶೆ, ವಿಷಾದ, ಅಪಸ್ವರವನ್ನು ಗುರುತಿಸಿದವಳಂತೆ,

''ಹೌದು ಸರ್... ಖಂಡಿತಾ ಏನೂ ಆಗೋಲ್ಲ... ನೀವು ಯಾರಿಗೂ ಕೇಡು ಬಯಸಿದವರಲ್ಲ...''

''ಒಬ್ಬರಿಗೆ ಕೇಡು ಮಾಡಿದ್ದೇನಲ್ಲ.. ಸಾಲದೆ?''

''ಊಹೂಂ... ಸಾಲದು... ಇನ್ನೂ ಬೇಕು...''

''ಷೇಮ್‌ಲೆಸ್ ಗರ್ಲ್...''

ಸಾಧನಾ ಕಿಲಕಿಲನೆ ನಕ್ಕಳು. ರಮೇಶನ ಹೃದಯ ಅವಳ ಮುಗ್ಧತೆಯನ್ನು ಕಂಡು ಮೌನ ವಾಗಿ ರೋದಿಸಿತು.

''ಸರ್... ಬೊಂಬಾಯಿಗೆ ಹೋದ್ಮೇಲೆ ನನ್ನ ಮರೆತು ಬಿಡಬೇಡಿ... ಇಲ್ಲಿಗೆ ಬಂದಾಗಲೆಲ್ಲ ನನ್ನ ಭೇಟಿಯಾಗದೇ ಹೋಗಬೇಡಿ... ನಿಮಗಾಗಿ, ನಿಮ್ಮ ಸ್ನೇಹಕ್ಕಾಗಿ ಪ್ರಾಮಾಣಿಕವಾಗಿ ಒಂದು ಜೀವ ತುಡಿಯುತ್ತಾ ಕಾಯುತ್ತಾ ಇರುತ್ತೆ ಅನ್ನೋದನ್ನ ಮರೀಬೇಡಿ...''

''ಹೂಂ..'' - ಎಂದು ನಿಟ್ಟುಸಿರಿನೊಡನೆ ಫೋನನ್ನು ಕೆಳಗಿಟ್ಟ ರಮೇಶನಿಗೆ, ತಾನು ಏನನ್ನೋ ಮಾತನಾಡಿ ಸಾಧನಾಳಿಗೆ ಬುದ್ಧಿ ಹೇಳಿ ಹೋಗಬೇಕೆಂದುಕೊಂಡುದುದೆಲ್ಲಾ ತಲೆಕೆಳ ಗಾಯಿತು. ತರ್ಕಬದ್ಧವಾಗಿ, ಮುಗ್ಧವಾಗಿ ಮಾತನಾಡುವ ಅವಳ ಬಳಿ, ಏನೆಂದು ಹೇಳ ಬೇಕಿತ್ತು? ಸೂಚ್ಯವಾಗಿ ಎಲ್ಲವನ್ನೂ ಹೇಳಿ ಯಾಗಿತ್ತು. ತನ್ನನ್ನು ಮರೆಯುವುದೇ ಸೂಕ್ತವೆಂದು ಸೂಚಿಸಿಯಾಗಿತ್ತು... ಆದರೆ ತನ್ನಿಂದ ಮರೆಯಲು ಸಾಧ್ಯವೇ? ಸಮಯ ಮತ್ತು ದೂರ ವ್ಯಕ್ತಿಗಳನ್ನು ಮರೆಯುವಂತೆ ಮಾಡುತ್ತದೆಯಂತೆ!

ಮೂರು ವರ್ಷಗಳಲ್ಲಿ, ನನಗಿಂತ ಹೆಚ್ಚಿನವ ನೆಂದು ಕಂಡವನು ಸಿಕ್ಕರೆ, ಮರೆತು ಬಿಡಬಹುದು. ಕಾಲ, ಸಂದರ್ಭ ಹೇಳುವುದಕ್ಕಾಗುವುದಿಲ್ಲ... ಎಂದೆಲ್ಲಾ ಯೋಚಿಸಿದ ರಮೇಶ. ಬೊಂಬಾಯಿಗೆ ಹೋದ ಮೇಲೂ ಸಾಧನಾಳ ಸ್ನೇಹವನ್ನು ಮುಂದು ವರಿಸಲು ಅವನ ಮನ ಕಾತುರಿಸಿದರೂ ಹಠ ದಿಂದೆಂಬಂತೆ, ತನ್ನ ಕೆಲಸದಲ್ಲಿ ಮಗ್ನನಾಗಿಬಿಟ್ಟ. ಸಾಧನಾಳಿಂದ ಬರುತ್ತಿದ್ದ ಕಾಗದದಲ್ಲಿ.. ನಿರ್ಮಲ ಸ್ನೇಹದ ತುಂತುರುಗಳನ್ನು.. ಪ್ರೀತಿಯಿಂದ ತನ್ಮಯತೆಯಿಂದ ಅನುಭವಿಸುತ್ತಿದ್ದ. ಆಗಾಗ ಉತ್ತರಿಸುತ್ತಿದ್ದ. ಊರಿಗೆ ಬಂದಾಗ, ಭೇಟಿ ಮಾಡದಿದ್ದರೂ ಫೋನಿನ ಮೂಲಕ ಮಾತನಾಡಿಸಿ, ಹೋಗುತ್ತಿದ್ದ ರಮೇಶ್ ಇದ್ದಕ್ಕಿದ್ದ ಹಾಗೆ ನಿಶ್ಚಲನಾಗಿಬಿಟ್ಟಿದ್ದ... ಸಾಧನಾಳ ಕಾಗದ ಗಳಿಗೊಂದಕ್ಕೂ ಉತ್ತರಿಸದೆ ಮೌನವಾಗಿದ್ದು ಬಿಟ್ಟಿದ್ದ. ಮನಸ್ಸು ತಡೆಯದೆ... ಅವನಲ್ಲಿಗೇ ಹೋಗಿ, ಮಾತನಾಡಿ, ನೋಡಿಕೊಂಡು ಬರ ಬೇಕೆಂದಿದ್ದ ಸಾಧನಾಳಿಗೆ, ಸಮಾಧಾನ ತಂದಿದ್ದು... ಅವನ ಆಗಮನದ ಸುದ್ದಿ!



ವಿರೋಧಿಗಳ ಫೋನನ್ನು ಕದ್ದು ಕೇಳಲು ಅನುಕೂಲವಾಗುವಂತೆ ನಿನ್ನಂಥಾ ವಿಶಾಲ ಕಿವಿ ನನಗೂ ದಯಪಾಲಿಸು ದೇವಾ!

ಸಂಭ್ರಮದಿಂದ ಚಿಕ್ಕ ಮಗುವಿನಂತೆ, ಸಂತಸ ಪಟ್ಟಳು.... ಏನನ್ನೋ ಕೇಳಲು... ಏನನ್ನೋ ಹೇಳಲು ತವಕದಿಂದ ಕಾದು ನಿಂತಳು.

ಅವಳ ಬದುಕಿನ, ಆರಾಧ್ಯಮೂರ್ತಿ ರಮೇಶ ಬಂದ... ಆದರೆ ಹೊಸಬನಾಗಿ ಬಂದಿದ್ದ! ಮಾತ ನಾಡಿಸಲು, ನೋಡಲು ತವಕಿಸಿದ ಸಾಧನಾಳಿಗೆ ವಾರಗಳಾದರೂ ಸಾಧ್ಯವಾಗಿರಲಿಲ್ಲ. ಫೋನಿನಲ್ಲಿ ಮಾತನಾಡಲು ಪ್ರಯತ್ನಿಸಿದಾಗಲೆಲ್ಲಾ ಕತ್ತರಿಸು ತ್ತಿದ್ದ. ಅನಿರೀಕ್ಷಿತವಾಗಿ ವಾರ್ಡಿನಲ್ಲಿ ರೌಂಡ್ಸಿನಲ್ಲಿ ಬ್ಯಾಗ ಪ್ರತ್ಯಕ್ಷನಾಗಿದ್ದ. ಆದರೆ ಅವನ ಚರ್ಯೆ ಪೂರ್ತಿ ಬದಲಾಗಿತ್ತು... ಸಾಧನಾಳ ಮುಖ ಪರಿಚಯ ವಿಲ್ಲದವನಂತೆ, ನೇರವಾಗಿ ರೌಂಡ್ಸ್ ಮುಗಿಸಿ ನಡೆದಿದ್ದ.

* * * * *

ನಗು ಬರುತ್ತಿದ್ದ ಭಾವನೆಗಳಿಗೆ, ಯೋಚನೆ ಗಳಿಗೆ ದಣಿದ ಸಾಧನಾ ಏನನ್ನೋ ನಿರ್ಧರಿಸಿದವ ಳಂತೆ. ಎದ್ದು ನಿಂತಳು... ತನ್ನ ಯೋಚನೆ... ನಿರ್ಧಾರಕ್ಕೆ ಹೆದರಿ ಮನಸು ಒಮ್ಮೆ ಕಂಪಿಸಿತಾದರೂ, ನಿರ್ಧಾರವನ್ನು ಬದಲಾಯಿ ಸಲು ಮನಸ್ಸು ಮಾಡದ ಸಾಧನಾ ಪ್ಯಾಕಿಂಗನ್ನು ಮುಗಿಸಿ ಮನೆ ಸೇರಿದಳು. ಬೆಳಗಾಗುವುದನ್ನು ಕಾಯುತ್ತಾ ಕುಳಿತಳು...

ಮಾರನೆಯ ದಿನ ಬೆಳಗ್ಗೆಯೇ ಸಾಧನಾ ಪುಟ್ಟ ಬಂಗಲೆಯ ಮುಂದೆ ನಿಂತಿದ್ದಳು. ಬೆಳಗಿನ ಚಳಿ ಬೀಸಿ ಬಂದು ದೇಹವನ್ನು ನಡುಗಿಸಿತು... ಸಣ್ಣ ಕಲ್ಲುಗೋಡೆಯ ಕಾಂಪೌಂಡ್ ಮಧ್ಯೆ ಅಂದವಾಗಿ ನಿಂತ ಮನೆ... ಮನೆಯ ಸುತ್ತಲೂ ಬೆಳೆದಿದ್ದ ಹಸಿರು ತುಂಬಿದ ಗಿಡಗಳು... ನೀಳವಾಗಿ ನಿಂತ ಕ್ರಿಸ್‌ಮಸ್ ಮರಗಳು.. ಅಲ್ಲಲ್ಲಿ ಕಾಯಿಗಳಿಂದ ತುಂಬಿ ಬೀಗುತ್ತಾ ನಿಂತಿದ್ದ ತೆಂಗಿನ ಮರಗಳು... ವಿವಿಧ ಬಣ್ಣದ ಹೂಗಳ ಸಾಲುಗಳು... ಮನೆಯ ಸೌಂದರ್ಯವನ್ನು ಇನ್ನೂ ಹೆಚ್ಚಿಸಿದ್ದವು... ಹೊರಗಡೆ ಗೇಟಿನ ಮುಂದೆ ದೊಡ್ಡದಾಗಿ ಬರೆದಿದ್ದ ನಾಮಫಲಕ ನೋಡಿದಳು. ರಮೇಶ ನನ್ನು ಕಂಡವಳಂತೆಯೇ ಆ ಚಳಿಯಲ್ಲೂ ಅವಳ ಮುಖ ಬಿಸಿಯಾದಂತಾಯಿತು. ಬೀಗ ಹಾಕಿರ ದಿದ್ದ ಗೇಟನ್ನು ನಿಧಾನವಾಗಿ ತೆರೆದು ಒಳಗೆ ಕಾಲಿಟ್ಟಳು. ಕಟ್ಟಿ ಹಾಕಿದ್ದ ದೊಡ್ಡ ಆಲ್ಸೇಷಿಯನ್ ಕಪ್ಪು ನಾಯಿಯೊಂದು ಸಾಧನಾಳನ್ನು ಕಂಡು 'ಗುರ್ರ್' ಎಂದಿತು. ಹೆದರಿದ ಸಾಧನಾ, ಹಿಂಜರಿದು ಹಿಂದಕ್ಕೇ ಹೆಜ್ಜೆ ಹಾಕಿದಳು. ಈಗ ನಾಯಿ ಜೋರಾಗಿ ಬೊಗಳತೊಡಗಿತು. ಸರಪಳಿ ಯನ್ನು ಕಿತ್ತು ಹಾರಿಬರುವ ಯತ್ನವನ್ನು ಮಾಡ ತೊಡಗಿದ ನಾಯಿಯನ್ನು ಕಂಡ ಸಾಧನಾಳಿಗೆ ಭಯದಿಂದ ಚೀರುವಂತಾಯಿತು. ಅಷ್ಟರಲ್ಲಿಯೇ ಬಂದ ಯುವಕನೊಬ್ಬ, ''ಯಾರು ಬೇಕಾ ಗಿತ್ತು?...'' -ಎಂದು ಕೇಳಿದ. ಅವನನ್ನು ಮನೆ ಗೆಲಸದವನಿರಬೇಕೆಂದು ತರ್ಕಿಸಿದ ಸಾಧನಾ,

''ಡಾಕ್ಟರ್ ಇದ್ದಾರಾ?'' - ಎಂದು ಕೇಳಿದಳು. ಅವಳಿಗೇ ಕೇಳಿಸುವಂತೆ ಅವಳೆದೆ ಹೊಡೆದು ಕೊಳ್ಳುತ್ತಿತ್ತು, ನೂಲಿನ ಸೀರೆಯುಟ್ಟು ಆತಂಕ, ಕಾತುರದಿಂದ ನಿಂತಿದ್ದ ಸಾಧನಾಳತ್ತ ಒಮ್ಮೆ ಸ್ಥೂಲವಾಗಿ ನೋಡಿದ ಆತ,

''ಒಳಗ್ಹೋಗಿ.. ಕೇಳಿ...'' - ಎಂದು ಮುಂದೆ ಹೆಜ್ಜೆಯಿಡಲು ಅನುಮತಿಯಿತ್ತು, ಗದರಿಸುತ್ತಾ ಬೊಗಳುತ್ತಿದ್ದ ನಾಯಿಯ ಬಳಿ ನಡೆದ.

ಸಾಧನಾ ತೆರೆದ ಬಾಗಿಲಿನ ಮನೆಯ ವರಾಂಡ ವನ್ನು ಪ್ರವೇಶಿಸಿದಳು. ಒಳಗೆ ಮೆಲುವಾದ ರೇಡಿಯೋ ಸಂಗೀತ... ಕೆಲಸದವರ ಮಾತು... ಪಾತ್ರೆಗಳ ಶಬ್ದ ಕೇಳಿ ಬರುತ್ತಿತ್ತು.

'ಈಗ... ತನ್ನ ಪ್ರಾಣಪದಕವಾಗಿದ್ದವನನ್ನು ಮೂರು ವರ್ಷಗಳ ನಂತರ ಹತ್ತಿರದಿಂದ ನೋಡು ತ್ತೇನೆ... ಎಲ್ಲವನ್ನೂ ಹೇಳುತ್ತೇನೆ... ತನ್ನ ಪ್ರೀತಿಯೂ ವಿರಹದ, ನೋವನ್ನು ವಿವರಿಸುತ್ತೇನೆ.. ಪಶ್ಚಾತ್ತಾಪದಿಂದ ಅವರ ಕಣ್ಣುಗಳಲ್ಲಿ ಪ್ರೀತಿಯುಕ್ಕಿ ಬರುತ್ತದೆ... ಹಾಗೆಯೇ ಆರೇಳು ತಿಂಗಳುಗಳಿಂದ ಯಾಕೆ ತನ್ನ ಕಾಗದಕ್ಕೆ ಉತ್ತರ ಬರೆದಿಲ್ಲವೆಂದು ಕೇಳುತ್ತೇನೆ... ಎಲ್ಲವನ್ನೂ ಹೇಳಿ ತನ್ನನ್ನು ಒಪ್ಪಿಸುತ್ತಾ, ನಗಿಸುವ ಅವರನ್ನು 'ಅವರನ್ನು ತನ್ನ ... ಕ್ಷಮಿಸಿ' ಎಂದು ...

ತಾಕುವಂತೆ ಅಪ್ಪಿಕೊಳ್ಳುತ್ತೇನೆ.. ಓಹ್! ಆ ಅಪ್ಪುಗೆಯ ಆನಂದದಲ್ಲಿಯೇ ತನ್ನ ಉಸಿರು ನಿಂತು ಹೋದರೆ..? ಎಷ್ಟು ಸುಖ!

''ಯಾರು ? ಯಾರು ಬೇಕಾಗಿತ್ತು...'' ಒಳಗಿನಿಂದ ಬಂದಾಕೆ ಕೇಳುತ್ತಾ ಬಾಗಿಲ ಬಳಿ ನಿಂತಳು... ವಾಸ್ತವಕ್ಕೆ ಬಂದವಳಂತೆ ಸಾಧನಾ,

''ಡಾಕ್ಟರ್ ಇದ್ದಾರಾ?...'' - ಎಂದು ಕೇಳಿದಳು.

''ಅವರಿಲ್ಲ... ಮೇಲಾಗಿ... ಪೇಶಂಟ್ಸ್‌ಗಳನ್ನು ಮನೇಲಿ ನೋಡೋಲ್ಲ...'' -ಎಂದಳು ಆಕೆ.

''ಎಲ್ಲಿಗೆ ಹೋಗಿದ್ದಾರೆ?'' - ತನಗಾಗುತ್ತಿದ್ದ ನಿರಾಶೆಯನ್ನು ಪ್ರಯತ್ನಪೂರ್ವಕವಾಗಿ ತಡೆದು ಹಿಡಿಯುತ್ತಾ ಕೇಳಿದಳು.

''ಎಮರ್ಜನ್ಸಿ... ಕಾಲ್ ಬಂತೂಂತ... ಹೋದ್ರು... ಎಲ್ಲಿಗೇಂತಾ ಗೊತ್ತಿಲ್ಲ... ನೀವ್ಯಾರು?'' - ಎಂದು ಕುತೂಹಲದಿಂದ ಹೇಳಿದ ತರುಣಿಯತ್ತ ನೋಡಿದಳು... ತೆಳು, ನೀಳಕಾಯದ ಬಿಳಿ ಬಣ್ಣದ, ಕೋಲು ಮುಖದ ಹೆಣ್ಣು... ಪೇಲವವಾಗಿ ಕಾಣುತ್ತಿದ್ದಳು... ಮೈತುಂಬಾ ವಿವಿಧ ಆಭರಣಗಳನ್ನು ಹೇರಿಕೊಂಡು ನಿಂತಿದ್ದರೂ, ಬಿಸಿಲು ಕಾಣದೆ ಬಿಳಿಚಿಕೊಂಡ ಎಲೆಯಂತೆ, ಯಾವುದೋ ರೋಗದಿಂದ ಬಳಲುತ್ತಿರುವವಳಂತೆ ಕಂಡಳು.

''ಆಂ.. ಹೂಂ... ನಾನು... ಸಾಧನಾ...''- ತಡವರಿಸಿದಳು.

''ಏನಾಗ್ಬೇಕಿತ್ತು?''— ಎಂದು ಕೇಳಿದಳು. ಸಾಧನಾ ಸ್ವರವನ್ನು ಮೃದು ಮಾಡುತ್ತಾ, ''ನೀವು ನೀವು... ಅವರ ತಂಗೀನಾ?...'' - ಎಂದು ಕೇಳಿದಳು.

''ಪ್ಲಾಟ್! ನಾನ್ಸೆನ್ಸ್.. ನಾನು ಅವರ ಹೆಂಡತಿ... ತಂಗಿಯಲ್ಲ... ಅದಿರಲಿ... ನೀವ್ಯಾರು? ಯಾಕೆ ಬಂದಿರಿ?'' ಆಕೆಯ ಅಸಹನೆ ತುಂಬಿದ ಮುಖ... [illegible] [illegible]... ಆಡಿದ ಮಾತುಗಳಿಂದ ಸಾಧನಾಳಿಗೆ ಮೇಲಿನಿಂದ ಯಾರೋ ಜೋರಾಗಿ ತುಳಿದಂತಾಗಿ... ತಲೆ ಸುತ್ತಿ ಬಂದಂತಾಯಿತು... ಹಾಗೆಯೇ ಸಾವರಿಸಿಕೊಂಡು ನಿಂತಳು... ಇನ್ನು ಮುಂದೆ ಮಾತನಾಡುವುದರಲ್ಲಿ ಯಾವ ಅರ್ಥವೂ ಕಾಣಲಿಲ್ಲ. ಆದರೂ ಸೌಜನ್ಯಕ್ಕಾಗಿಯೆಂಬಂತೆ ಪ್ರಯತ್ನಪೂರ್ವಕವಾಗಿ ಮಾತನಾಡಿದಳು.

''ಕ್ಷಮಿಸಿ... ನಂಗೆ.. ನಂಗೆ ಗೊತ್ತಿರಲಿಲ್ಲ... ಅವರೂ ಹೇಳಿರಲಿಲ್ಲ...''

''ನಿಮಗ್ಹೇಳದೆ ಮದ್ವೆಯಾಗಬಾರದಿತ್ತೆ?...'' - ವ್ಯಂಗ್ಯ.

ತನ್ನ ದೇಹವನ್ನು ನಿಯಂತ್ರಿಸಿಕೊಳುವ ಪ್ರಯತ್ನದಲ್ಲಿದ್ದ ಸಾಧನಾ,

''ಹಾಗೆಲ್ಲಾ ಹೇಳ್ಬೇಡಿ.. ನಂಗೆ ಗೊತ್ತಿರಲಿಲ್ಲ...'' - ಎಂದಳು.

''ಏನಾಗ್ಬೇಕಿತ್ತೂಂತ [illegible] ಇಲ್ಲ? ಯಾರು [illegible] ಹೇಳಬೇಕು?''

[illegible] ಏನು [illegible]ದಿದೆ? [illegible] [illegible] ಚಳಿಗಾಳಿಯಲ್ಲೇ.. [illegible] [illegible]

ಭ್ರಮೆಯ[illegible]ವಳಂತೆ ಆಸ್ಪತ್ರೆಗೆ [illegible] ಸಾಧನಾಳಿಗೆ ತನ್ನ ಚೇತನವೆಲ್ಲಾ ಸೋರಿ ಹೋಗು




ತ್ತಿರುವಂತೆ ಭಾಸವಾಯಿತು. ತನ್ನ ಬಳಿ ಏನನ್ನೋ ಕೇಳಲು ಬಂದ, ಮೋನಾಳ ತೋಳನ್ನು ಬಿಗಿಯಾಗಿ ಹಿಡಿದು,

''ಮೋನಾ... ನೀವುಗಳೆಲ್ಲರೂ ಹೇಳಿದ್ದೇ ಸತ್ಯವಾಯಿತು... ನಾನು ಮೋಸ ಹೋಗ್ಬಿಟ್ಟೆ...''- ನಡುಗುವ ಸ್ವರದಲ್ಲಿ ಹೇಳಿದಳು.

''ಏನು? ಏನಾಯ್ತೆ?'' -ಮೋನಾ ಗಾಬರಿಯಿಂದ ಕೇಳಿದಳು. ಹಿಂಜಿದ ಹತ್ತಿಯಂತೆ ಬಿಳಿಚಿಕೊಂಡ ಮುಖ ಹೊತ್ತು, ತತ್ತರಿಸುತ್ತಾ, ಹನಿದುಂಬಿದ ಶೂನ್ಯ ತುಂಬಿದ ಕಣ್ಣುಗಳೊಂದಿಗೆ ನಿಂತಿದ್ದ ಸಾಧನಾಳ ಹೊಸ ಪರಿಯನ್ನು ಕಂಡು ಮೋನಾಳಿಗೆ ನಿಜಕ್ಕೂ ಗಾಬರಿಯಾಯಿತು.

''ಕೂತ್ಕೊಳ್ಳೇ... ಮೊದ್ಲು... ಹಣೆ ಮೇಲಿನ ಬೆವರು ಒರೆಸಿಕೋ...''. - ಸಾಧನಾಳನ್ನು ಬಲವಂತವಾಗಿ ಕೂಡಿಸಿದಳು.

ಸಾಧನಾ [illegible] ಕುಳಿತಳು.

''[illegible] [illegible] ಏನಾಯ್ತೂಂತ...''

''ಡಾಕ್ಟರ್ ರಮೇಶ್ ಮದ್ವೆಯಾಗಿದ್ದಾರೆ...''

''ಎಲ್ಲರಿಗೂ ಗೊತ್ತಿತ್ತು... ಇದರಲ್ಲಿ [illegible]ಸಿದೆ?''

[illegible]

ಹಾಗಾದ್ರೆ ನಂಗ್ಯಾಕೆ ನೀವ್ಯಾರು ತಿಳಿಸಲಿಲ್ಲ...'' - ಉದ್ವೇಗದಿಂದ ಎದ್ದು ನಿಂತಳು.

''ಮೊದ್ಲು ಕೂತ್ಕೊಳ್ಳೇ... ನೀನೇನು ಅವರನ್ನು ಮದ್ವೆಯಾಗೋ ಇಚ್ಛೆ ಇಟ್ಟುಕೊಂಡಿರಲಿಲ್ಲವಲ್ಲ? ಎಲ್ಲರಿಗೂ ತಿಳಿದ ಹಾಗೇ... ನಿನಗೂ ತಿಳಿದಿರಬೇಕೂಂತ ಅಂದ್ಕೊಂಡಿದ್ದೆ...''

ಸಾಧನಾ ಕುಸಿದು ಕುಳಿತು, ಎರಡೂ ಕೈಗಳಲ್ಲಿ ಮುಖವನ್ನು ಮುಚ್ಚಿಕೊಂಡು ಬಿಕ್ಕಿ ಅಳತೊಡಗಿದಳು.

''ನೀನಂದಿದ್ದು ನಿಜಾ ಕಣೆ... ನಂಗೆ ಮದ್ವೆಯಾಗಿ ಅವರೊಂದಿಗೆ ಸಂಸಾರ ಸುಖ ಅನುಭವಿಸುವ ಆಸೆ ಇರಲಿಲ್ಲ... ಈಗಲೂ ಇಲ್ಲ... ಮದ್ವೆಯಾಗದೇ ಉಳಿಯುವ ನಿರ್ಧಾರ ನನ್ನ ಹಾಗೇ ಅವರಿಗೂ ಇದ್ದುದರಿಂದ, ವೃತ್ತಿಯಲ್ಲೇ... ಅವರೊಂದಿಗೆ ಸಹಭಾಗಿಯಾಗಿ... ಅವರ, ಸಾಮೀಪ್ಯದ, ಸ್ನೇಹದ, ಪ್ರೀತಿಯ ಸುಖವನ್ನು ಪಡೆಯುವ ಕನಸು ಕಾಣುತ್ತಿದ್ದೆ... ಆದರೆ.. ಎಲ್ಲವೂ ಛಿದ್ರ [illegible]... ರಮೇಶ್ ಈ ರೀತಿ ಮಾಡಬಾರದಿತ್ತು...'' - ಎಂದು ಅಳುವಿನ ನಡುವೆ [illegible] [illegible]

— (ನರೇಷ)

# ನಿಬಂಧನೆಗಳು

ಮಹಿಳೆಯರ ಸ್ಮರಣ ಶಕ್ತಿಗೆ ಹೊಸ ಹರಿತವನ್ನೊದಗಿಸಿ, ಸೀಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರು ಪರಿಚಯ ನೀಡುವ **ವನಿತಾ ಪದಸಂಪದ** ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ **ವನಿತಾ ಪದಸಂಪದ** ಚೌಕದಲ್ಲಿ ಭರ್ತಿ ಮಾಡಿ 1992ರ ಸೆಪ್ಟೆಂಬರ್ 25 ನೇ ದಿನಾಂಕದೊಳಗೆ "ವನಿತಾ ಪದಸಂಪದ, ಚಂದಮಾಮ ಬಿಲ್ಡಿಂಗ್ಸ್, ಮದರಾಸು–600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ **ವನಿತಾ ಪದಸಂಪದ** ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರವನ್ನು 1992ರ ನವೆಂಬರ್ 'ವನಿತಾ' ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಸರಿಯಾದ ಉತ್ತರ ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

# ವನಿತಾ ಪದ ಸಂಪದ

ರೂ. 250 ಬಹುಮಾನ!

**49**

### ಎಡದಿಂದ ಬಲಕ್ಕೆ

1. ಗೌರಿ ಹಬ್ಬಕ್ಕೆ ಬಾಗಿ ಕೊಡಬೇಕಾದದ್ದು (3)
3. ಶರ್ಮ ಬಾಣ ಬಿಟ್ಟು ವಿರಳವಾಗಿದ್ದಾನೆ (3)
5. ಜನ ನಿರ್ಮಿಸಿದ ದೇವಸ್ಥಾನ (3)
7. ಸಂತರನ್ನೂ ಬೆರಗು ಮಾಡುವ ಕಾಲ (3)
8. ರಂಗನಾಥ ಎಬ್ಬಿಸಿದ ಅಲೆ (3)
9. ಮೂರು ವಿಧದ ಭೂಮಿ (3)
10. ಅನುನಯವನ್ನು ವೀಕ್ಷಿಸಿದ ಅಕ್ಷಿ (3)
12. ಯಜಮಾನರು ಮಾಡಿದ ಯಜ್ಞ (3)
16. ಸಂಧ್ಯಾಕಾಲ ಬರುತ್ತಿದ್ದಂತೆ ಮೂಡಿದ ಮಬ್ಬು (5)
17. ವಿವಾಹ ನಡೆಯುವ ಸ್ಥಳ (5)
19. ಗುಟುರು ಹಾಕದ ತಲೆತಗ್ಗಿಸಿದ ಪ್ರಾಣಿ (3)
21. ಈ ಪ್ರಕೃತಿ ತಾಣವನ್ನು ಜನ ಅಡವಿಟ್ಟರು (3)
23. ಮಾರಿದ ವಸ್ತುವಿನಿಂದಾದ ಮತ್ತು (3)
25. ವಿನೋಬಾ ಭಾವೆಯವರ ಮಂತ್ರ (3)
26. ಈ ರಾಷ್ಟ್ರಕ್ಕೆ ಸಂಬಂಧಿಸಿದ್ದಲ್ಲ (3)
28. ಪ್ರಯಾಣ ನಿಷಿದ್ಧವಾದ ದಿನ (3)
29. ನರಕಾಧಿಪತಿ ನೀಡಿದ ಜೋಡಿ (3)
30. ಹಾಸ್ಯ ಮಾಡದಂತಹ ಗುಟ್ಟು (3)

### ಮೇಲಿನಿಂದ ಕೆಳಕ್ಕೆ

1. ಬೆಳಗುವ ಜೀವನ (2)
2. ಇನ್ನೇನು ಬರಲಿರುವ ಒಂಬತ್ತು ಇರುಳಿನ ಹಬ್ಬ (4)
3. ನೂರು ವರ್ಷಗಳ ಅಳತೆ (4)
4. ಚುನಾವಣೆಯಲ್ಲಿನ ಪ್ರಮುಖ ಅಂಶ (4)
5. ಕೋತಿ ಅದೃಶ್ಯ ಮಾಡಿದ್ದು ಒಂದೇ ಕ್ಷಣದಲ್ಲಿ (4)
6. ಬೆಲೆ ಬಾಳುವ ಮಣಿ (2)
9. ಬೇಡ ಅನ್ನುವಂತಿಲ್ಲ. ಬೇಕು ಅನ್ನುವಂತಿಲ್ಲ– ಅಂತಹ ಉಭಯ ನೋವು (5)
11. ದೇವತೆಗಳಲ್ಲಿ ಒಂದು ಪಂಗಡ (2)
13. ಆಕಾಶದಲ್ಲಿನ ತಾರಾ ವಿಶ್ವ (5)
14. ಪ್ರಶ್ನೆಗೆ ಕೊಟ್ಟದ್ದು – ದಕ್ಷಿಣದ ವಿರುದ್ಧವಿದೆ (3)
15. ಅರವತ್ತು ಸಂವತ್ಸರಗಳಲ್ಲಿ ಒಂದಾಗಿ ಬಂದ ನಗಾರಿ (3)
18. ಬ್ರಹ್ಮನ ಜೊತೆಗೆ ಬಂದ ಕೋಳಿಮೊಟ್ಟೆ (2)
20. ಶಿವ ಕಾಯುವ ಜಾಗ (4)
21. ಅನುಕರಣೆಯಂತಹ ನಟನೆ (4)
22. ಒದ್ದಾಡುವಾಗ ಆದ ಪರಿಸ್ಥಿತಿ (4)
23. ದಾರಿಯಲ್ಲಿ ಕಂಡ ತಲೆಯ ತಿಂಗಳು (4)
24. ಜ್ಞಾನಿಗಿರುವ ತಿಳುವಳಿಕೆ (2)
27. ಚಿಕ್ಕ ಗಿಡ (2)

– ಮಲ್ಲಿಕಾ ಪ್ರಹ್ಲಾದ್

| | | | | | | | | | | |
|---|---|---|---|---|---|---|---|---|---|---|
| 1 | | 2 | | 3 | | 4 | | 5 | | 6 |
| | | 7 | | | | 8 | | | | |
| | | | | | | | | | | |
| 9 | | | | 10 | 11 | | | 12 | | 13 |
| | | | 14 | | | | 15 | | | |
| 16 | | | | | | 17 | | | | |
| | | | | | 18 | | | | | |
| 19 | | 20 | | 21 | | 22 | | 23 | | |
| | | | | | | | | | | |
| 24 | | 25 | | | | 26 | | | | 27 |
| 28 | | | | 29 | | | | 30 | | |

ವನಿತಾ ಪದಸಂಪದ — 49

ಹೆಸರು ..................................................

ವಿಳಾಸ..................................................

..................................................

..................................................

# ಪ್ರಮೋಷನ್



— ಎಂ. ಎಸ್. ಮಂಜುಳಾ

ನಂದಿತಾಳ ಮನೋವೇಗಕ್ಕಿಂತ ತೀವ್ರಗತಿಯಲ್ಲಿ ಅವಳ ಬೆರಳುಗಳು ಟೈಪ್‌ರೈಟರ್‌ನ ಮೇಲೆ ನರ್ತಿಸುತ್ತ ಅಂದವಾಗಿ ಮಿನಿಟ್ಸ್ ತಯಾರಾಗುತ್ತಿತ್ತು. ಇನ್ನರ್ಧ ಘಂಟೆಯೊಳಗೆ ಮುಗಿಸಿದರೇನೇ ಬಾಸ್ ಸಿ ಎಂ ಡಿ ಯ ಹತ್ತಿರ ಹೋಗಲು ಸಾಧ್ಯವಾಗುವುದು. ಸಿ. ಎಂ. ಡಿ. ಬೇರೆ, ಮಧ್ಯಾಹ್ನ ಡೆಲ್ಲಿ ಫ್ಲೈಟ್‌ನಲ್ಲಿ ಹೊರಡುತ್ತಿದ್ದಾರೆ.

ನಂದಿತಾ ಪ್ರತಿಷ್ಠಿತ ಸಾರ್ವಜನಿಕ ವಲಯದ ಕಾರ್ಖಾನೆಯೊಂದರಲ್ಲಿ ಡೆಪ್ಯೂಟಿ ಜನರಲ್ ಮ್ಯಾನೇಜರ್‌ನ ಪಿ. ಎ. ಆಗಿದ್ದಳು. ಕೆಲಸವನ್ನು ಜವಾಬ್ದಾರಿಯಿಂದ. ಮೈಗಳ್ಳತನವಿಲ್ಲದೇ ಆಕೆ ಮಾಡುತ್ತಿರುವ ಕಾರಣ ಅಂಥ ಸಿಡುಕ ಡಿ. ಜಿ. ಎಂ. ಕೂಡಾ ಬಾಯ್ತುಂಬ ಆಕೆಯನ್ನು ಹೊಗಳಿ. ತೃಪ್ತಿ. ನಂಬಿಕೆಗಳಿಂದ ಕೆಲವೊಮ್ಮೆ ಓದದೇ ಸಿಗ್ನೇಚರ್ ಮಾಡುತ್ತಿದ್ದರು. ಹಿರಿ ವಯಸ್ಸಿನ ಆತ. ಅವಳನ್ನು ಮಗಳಂತೆ ನಡೆಸಿಕೊಳ್ಳುತ್ತಿದ್ದರು.

ಆಗಷ್ಟೇ ಅಡಿಷನಲ್ ಜನರಲ್ ಮ್ಯಾನೇಜರ್ ಹತ್ತಿರ ಡಿಸ್‌ಕಷನ್‌ಗೆ ಕೆಲವು ಪೇಪರ್ಸ್ ತೆಗೆದುಕೊಂಡು ಹೋಗಿದ್ದರು. ಹಾಗಾಗಿ ನಂದಿತಾಗೆ ಫೋನ್ ಕನೆಕ್ಟ್ ಮಾಡುವ, ಫೈಲ್ಸ್ ಅರೇಂಜ್ ಮಾಡಿ ಕೊಡುವ ಕೆಲವು ಕೆಲಸಗಳಿಗೆ ಬಿಡುವು ಸಿಕ್ಕಿ ನಿರಾತಂಕವಾಗಿ ಟೈಪ್ ಮಾಡಲು ಸಾಧ್ಯವಾಯಿತು. ಅದೇ ಸಮಯಕ್ಕೆ ಇಂಟರ್‌ನಲ್ ಫೋನು ರಿಂಗುಣಿಸಿತು. ಆಕೆ ರಿಸೀವರ್ ಎತ್ತಿಕೊಂಡಂತೆ ರಿಸೆಪ್ಶನಿಸ್ಟ್ "ಮೇಡಂ, ವಿಜಿಟರ್ ಇದ್ದಾರೆ. ಮಿ. ನಿರಂಜನ್ ಅಂತೆ, ಮೇಲೆ ಕಳಿಸಲಾ ?" ಎಂದು ಕೇಳಿದಾಗ ನಂದಿತಾ ಕ್ಷಣಕಾಲ ಚಕಿತಳಾದಳು. ಚೇತರಿಸಿಕೊಂಡು "ಆಯಿತು. ಕಳಿಸಿ ಮಿ. ಚಂದ್ರು" ಎಂದು ಹೇಳಿ ಟೈಪಿಂಗ್ ನಿಲ್ಲಿಸಿ ಬೆನ್ನನ್ನು ಕುರ್ಚಿಗೆ ಅಂಟುವಂತೆ ಒರಗಿಸಿದಳು. ಕೊಂಚ ರಿಲ್ಯಾಕ್ಸ್ ಆಯಿತು. ಕೈಗಳನ್ನು ಉದ್ದವಾಗಿ ಟೈಪ್‌ರೈಟರ್ ಮೇಲೆ ಚಾಚಿದಳು.

ಹೌದು. ಈ ಚಿತ್ರಳ ಅಣ್ಣ ಇಲ್ಲಿಗೇಕೆ ಬಂದ ? ಹಿಂದೆ ಮಾಡುತ್ತಿದ್ದ ಫಿಲಿಪ್ಸ್ ಕಂಪೆನಿಯಲ್ಲಿ ಕೆಲಸ ಬಿಟ್ಟು ಇದೇ ಕಂಪೆನಿಯ ಕಾಂಪ್ಲೆಕ್ಸಿನಲ್ಲಿ ಎಂಜಿನಿಯರ್ ಆಗಿದ್ದಾನೆ ಎಂದು ಒಂದು ಸಲ ಮಲ್ಲೇಶ್ವರದಲ್ಲಿ ಸಿಕ್ಕಿದ ಚಿತ್ರಾ ಹೇಳಿದ ನೆನಪು. ಆದರೆ ವೃತ್ತಿ ಜೀವನ ಇಲ್ಲಿ ಆತನಿಗೆ ಸಮಾಧಾನಕರವಾಗಿಲ್ಲ. "ಕ್ವಾಲಿಫಿಕೇಶನ್ ಇನ್ನೂ ಕನ್ಸಿಡರ್ ಮಾಡದೇ ಬಹಳ ನಿರಾಶಾವಾದಿಯಾಗಿದ್ದಾನೆ ಅಣ್ಣ" ಎಂದು ಚಿತ್ರ ತನ್ನಲ್ಲಿ ನೊಂದು ನುಡಿದಿದ್ದಳು. "ಮೇ ಐ ಕಮಿನ್ ಮೇಡಂ !" ಆತ ವಿನಯದಿಂದ ನುಡಿಯುತ್ತ ಒಳ ಪ್ರವೇಶಿಸಿದಾಗ ನಂದಿತಾ ಎಚ್ಚೆತ್ತು ಅವನ ಹೊಸ ರೀತಿಯ ಸಂಬೋಧನೆಯಿಂದ ಅಚ್ಚರಿಗೊಂಡಳು. ಹಾಗೆಯೇ 'ಅತಿ ವಿನಯ ಧೂರ್ತತೆಯ ಲಕ್ಷಣವಲ್ಲವೇ' ಎಂದು ಮನಸ್ಸಿನಲ್ಲೇ ವ್ಯಂಗ್ಯವಾಗಿ ನಕ್ಕಳು. ಕೈಯಲ್ಲೇ ಕುರ್ಚಿ ತೋರಿಸಿ ಕುಳಿತುಕೊಳ್ಳಲು ಹೇಳಿದಳು. 'ಏಳು ವರ್ಷದ ಹಿಂದೆ ನೋಡಿದ ನಿರಂಜನನೇ ಈತ' ಎಂದು ನಂಬಲಾಗದಷ್ಟು ಬದಲಾಗಿದ್ದ ಆತ. ಕಸಿಕರ ಉಕ್ಕಿ ಬಂದರೂ ಗಾಂಭೀರ್ಯದ ಮುಖವಾಡ ಧರಿಸಿಕೊಂಡು ಆತನನ್ನೇ ದಿಟ್ಟಿಸಿದಳು ನಂದಿತಾ.

ಗೆಳತಿ ಚಿತ್ರಳ ಮನೆಗೆ ಹೋಗುತ್ತಿದ್ದಾಗ ಸುಂದರವಾಗಿ ನಗುತ್ತಿದ್ದ ಎಳೆ ಮೀಸೆಯ ಹುಡುಗ ಇಂದು ಪ್ರೌಢತ್ವ, ಚಿಂತೆಯ ಕಳೆ ಹೊತ್ತು, ಮುಖವೆಲ್ಲ ನೆರಿಗೆ ಹಿಡಿದು ಕಪ್ಪಾಗಿ ಕಾಣುತ್ತಿದ್ದ. ದುಂಡನೆಯ ಶರೀರ ಬಸವಳಿದು ಹೋಗಿತ್ತು. ಕಣ್ಣ ಕೆಳಗೆ ಕಪ್ಪು ಢಾಳಾಗಿ ಗೋಚರಿಸುತ್ತಿತ್ತು. ಬಹಳ ವಯಸ್ಸಾದವನಂತೆ ಕಾಣುತ್ತಿದ್ದ ನಿರಂಜನ್. ಅದೇ ಸಮಯಕ್ಕೆ ಧೈರ್ಯ ತಂದುಕೊಂಡು ನಿರಂಜನ್ ಎದುರು ಕೂತಿದ್ದ ನಂದಿತಾಳನ್ನು ದೃಷ್ಟಿಸಿ ನೋಡಿದ. 'ಮುಖದ ತುಂಬಾ ಮೊಡವೆ ಕಲೆ ತುಂಬಿಕೊಂಡು ಕಪ್ಪಗಿದ್ದ ಪೀಚು ಹುಡುಗಿ ಮೈ ಕೈ ತುಂಬಿಕೊಂಡು ಕೊಂಚ ಬೆಳ್ಳಗಾಗಿದ್ದಾಳೆ ಈಗ. ಈ ಜವಾಬ್ದಾರಿಯುತ ಹುದ್ದೆ ಅವಳಲ್ಲಿ ಹೊಸ ಹೊಳಪು, ಮಿಂಚು ಕಂಗಳನ್ನು ತಂದಿದೆ. ಆರ್ಥಿಕ ಸ್ವಾತಂತ್ರ್ಯ ಹೆಣ್ಣುಗಳನ್ನು ಎಷ್ಟು ಬದಲಾಯಿಸುತ್ತದೆ ! ಮುಖೇಡಿಯಾಗಿದ್ದ ಹುಡುಗಿ ಇಂದು ಎಷ್ಟು ಧೈರ್ಯದಿಂದ ನಿಸ್ಸಂಕೋಚದಿಂದ ತನ್ನನ್ನು ದಿಟ್ಟಿಸುತ್ತ ಮಾತನಾಡಿಸುತ್ತಿದ್ದಾಳೆ. ಎಲ್ಲಾ ಕಾಲ ಮಹಿಮೆ. ಎಂತೆಂತವರೋ ಏನೇನೋ ಆಗಿ ಬಿಡುತ್ತಾರೆ !'

ಅಂದುಕೊಳ್ಳುತ್ತಲೇ ನಿರಂಜನ ತನ್ನ ಇನ್‌ಫೀರಿಯಾರಿಟಿ ಕಾಂಪ್ಲೆಕ್ಸನ್ನು ಮುಚ್ಚಲೆತ್ನಿಸುತ್ತ ಪೆಚ್ಚಾಗಿ ಒಮ್ಮೆ ನಕ್ಕು ಪೀಠಿಕೆ ಎಂಬಂತೆ "ಇತ್ತೀಚೆಗೆ ನನ್ನ ತಂಗಿಯನ್ನು ಭೇಟಿಯಾಗಿದ್ದಿರಾ ?" ಎಂದು ಕೇಳಿದನು. ನಂದಿತಾ ಉಕ್ಕಿ ಬರುವ ನಗುವನ್ನು ತಡೆದು 'ಯಾಕೆ ಈತ ಇಷ್ಟೊಂದು ಸಂಕೋಚಪಟ್ಟುಕೊಳ್ಳುತ್ತಿದ್ದಾನೆ ? ಇವನ ಆಗಮನದಲ್ಲಿ ಏನೋ ಮಸಲತ್ತು ಇದೆ. ಹುಷಾರಾಗೇ ಇರಬೇಕು' ಎಂದುಕೊಂಡು "ಇಲ್ಲಾರೀ ನಿರಂಜನ್. ಪುರುಸೊತ್ತೇ ಆಗುವುದಿಲ್ಲ. ವಾರದಲ್ಲಾರು ದಿವಸಗಳು ಆಫೀಸಿನಲ್ಲೇ ಕಳೆದು ಬಿಡುತ್ತವೆ. ಸಂಜೆ ಮನೆ ಸೇರುವಾಗಲೇ ಕತ್ತಲಾಗುತ್ತದೆ. ಭಾನುವಾರ ಮಾತ್ರ ಹೋಂ ಸ್ವೀಟ್ ಹೋಂ' ಎಂದು ಕೂತು ಬಿಡುತ್ತೇನೆ. ನೀರೆರೆದುಕೊಳ್ಳುವುದು, ಟಿ ವಿ ನೋಡುವುದು, ಬಿಸಿಬಿಸಿಯಾದ ತಿಂಡಿ, ಊಟ ಕಬಳಿಸುವುದು. ಹೀಗೆ ಆ ದಿನ ನೀರಿನಂತೆ ಜಾರಿ ಹೋಗುವುದು" ಎಂದು ಹೇಳುತ್ತಲೇ ನಕ್ಕಳು. ಹಲ್ಲುಗಳು ಮುತ್ತಿನಂತೆ ಹೊಳೆಯುತ್ತ ಮುಖ ನಿಯಾನ್ ಲೈಟಿ

ನಂತೆ ಬೆಳಗಿತು. ನಿರಂಜನ್ ತದೇಕ ದೃಷ್ಟಿಯಿಂದ ಆಕೆಯನ್ನು ನೋಡುತ್ತ 'ಈಕೆ ಎಷ್ಟು ನಿಸ್ಸಂಕೋಚವಾಗಿ, ಆತ್ಮವಿಶ್ವಾಸದಿಂದ ಮಾತಾಡುತ್ತಿದ್ದಾಳೆ. ಮುಂಚೆಯೋ ನಾಚಿಕೆಯ ಮುದ್ದೆಯಾಗಿದ್ದಳು. ತಾನು 'ನಾಚಿಕೆ ಮುಳ್ಳೆಂದು' ಅವಳಿಗೆ ಹೀಯಾಳಿಸುತ್ತಿದ್ದೆ. ಈಗ ತಾನೇ ಮುಟ್ಟಿದರೆ ಮುದುಡುವಂತಾಗಿದ್ದೇನೆ.' ತನ್ನನ್ನೇ ನಿರಂಜನ ಹೇಡಿಯೆಂದು ಹಳಿದುಕೊಳ್ಳ ಹತ್ತಿದ. ವಿಷಯಕ್ಕೆ ಬರಲು ಧೈರ್ಯವೇ ಸಾಲುತ್ತಿಲ್ಲ. 'ಕಾರ್ಯ ವಾಸಿ ಕತ್ತೆ ಕಾಲು ಕಟ್ಟು' ಅನ್ನುವಂತೆ ಇವಳ ಹತ್ತಿರ ಬಂದಿದ್ದೇನೆ. ಆದರೂ ವಿಷಯಾಂತರವಾಯಿತು. ನಂದಿತಳೇ "ಚಿತ್ರ ಇತ್ತೀಚೆಗೆ ಮನೆಗೆ ಬಂದಿದ್ದಳೇ? ಸುಮನ್, ಸುಹಾಸ್ ಚೆನ್ನಾಗಿದ್ದಾರಾ? ಮಕ್ಕಳೆಲ್ಲ ನಿಮ್ಮ ಭಾವನ ಪಡಿಯಚ್ಚು ಅಲ್ಲವೇ? ಅದೇ ರೂಪು, ನಡುವಳಿಕೆ, ಬುದ್ಧಿ ಮತ್ತ ಎಲ್ಲ" ಎಂದೆನ್ನುತ್ತ ತನ್ನ ಗೆಳತಿಯ ಗೊಂಬೆಯಂತಿರುವ ಸುಂದರ ಮಕ್ಕಳನ್ನು ಕಣ್ಣ ಮುಂದೆ ತಂದುಕೊಂಡಳು. ನಿರಂಜನ್ ಶ್ರೀಮಂತ ಹುಡುಗಿಯನ್ನು ಮದುವೆಯಾದ. ನಂತರ ಚಿತ್ರಳ ತವರು ಮನೆಯ ಚಿತ್ರವೇ ಬೇರೆಯಾಯಿತು. ಇವಳ ಗೆಳತಿ ಚಿತ್ರಳಿಂದಲೇ ಅವಳಿಗೆ ಗೊತ್ತಾದದ್ದು. ನಿರಂಜನ್ ಹೆಂಡತಿ ಪಿ ಎಂಡ್ ಟಿ ಯಲ್ಲಿ ವೃತ್ತಿ ಮಾಡುತ್ತಿದ್ದಳು. ಹೆಸರು ಸೌಮ್ಯ. ಆದರೆ ಸ್ವಭಾವ ತದ್ವಿರುದ್ಧ. ಬಲು ಗರ್ವಿಷ್ಠೆ, ಅಹಂಕಾರಿ. ಚಿತ್ರಾಳ ತಾಯಿ ಬಹಳ ಜೋರಿನವರೇ. ಆದರೆ ಸೊಸೆಯ ಮುಂದೆ ಅವರ ಆಟವೇನೂ ನಡೆಯಲಿಲ್ಲ. ಹುಲಿಯಂತಿದ್ದವರು ಇಲಿಯಾದರು. ನಂದಿತಾ ಮೊದ ಮೊದಲು ಇದನ್ನು ನಂಬಲಿಲ್ಲ. ಒಂದು ದಿನ ಅವಳು ದೇವಸ್ಥಾನದಿಂದ ಬರುತ್ತಿರುವಾಗ ದಾರಿಯಲ್ಲಿ ನಿರಂಜನ್ ಹೆಂಡತಿಯ ಜತೆ ಬರುತ್ತಿರುವುದನ್ನು ಕಂಡಳು. ಆತನೇ ಹೆಂಡತಿ ಸೌಮ್ಯಳನ್ನು ನಂದಿತಳಿಗೆ ಪರಿಚಯ ಮಾಡಿಕೊಟ್ಟ. ಸೌಮ್ಯ ಅರೆಮನಸ್ಸಿನಿಂದಲೇ ನಂದಿತಳಿಗೆ ಪ್ರತಿವಂದಿಸಿದಳು. ಸಾಧಾರಣ ರೂಪಿನ ಮಧ್ಯಮ ವರ್ಗದ ಹುಡುಗಿಯ ಸ್ನೇಹ ಅವಳಿಗೆ ಬೇಕಾಗಿರಲಿಲ್ಲ. ಅದೂ ಈಕೆ ತನ್ನ ನಾದಿನಿಯ ಫ್ರೆಂಡಂತೆ. ನಾದಿನಿ ಚಿತ್ರಳ ತಲೆ ಕಂಡರಾಗದು ಆಕೆಗೆ. ಒಂದೇ ಊರಿನಲ್ಲಿದ್ದು ವಾರಕ್ಕೊಮ್ಮೆ ಚಿತ್ರ ಮಕ್ಕಳೊಡನೆ "ಅಮ್ಮಾ" ಎಂದು ಬರುವಳು. ಆಕೆಯಂತೆ ತಾನೂ ಕೆಲಸ ಬಿಟ್ಟ ಕೂಡಲೇ ಬಸವನ ಗುಡಿಯಲ್ಲಿರುವ ತಾಯಿಯನ್ನು ದಿನಾ ನೋಡಿಕೊಂಡು ರಾತ್ರಿ ಬರುವುದು ಆಕೆಗೇನೂ ಅನ್ನಿಸುತ್ತಿರಲಿಲ್ಲ. ಮಾತೆತ್ತಿದರೆ ತಾಯಿ ಮನೆಗೆ ಓಡಿ ಹೋಗುತ್ತಿದ್ದ ಗರ್ವಿಷ್ಠ ಹೆಂಡತಿ ನಿರಂಜನನಿಗೆ ನುಂಗಲಾರದ ತುತ್ತು. ಇದೆಲ್ಲ ಚಿತ್ರಾಳಿಂದ ನಂದಿತಾಳಿಗೆ ವಿಷಯ ತಿಳಿದಿದ್ದರೂ ಮಾತು ಜೋಡಿಸಲು ಇಂಥ ಪ್ರಶ್ನೆಗಳನ್ನು ಹಾಕುತ್ತಿದ್ದಳು ನಂದಿತಾ. ನಿರಂಜನ ಉತ್ತರಿಸಿದ "ಇಲ್ಲ ಮೇಡಂ. ಚಿತ್ರ ಈಗ ಹೆಚ್ಚಾಗಿ ಮನೆಗೆ ಬರುವುದಿಲ್ಲ. ಅವಳ ಮಕ್ಕಳು ಶಾಲೆಗೆ ಹೋಗುತ್ತಾರಲ್ಲವೇ?" ನಂದಿತಾ "ಹೌದೌದು. ನಾನು ಈ ವಾರವಾದರೂ ಅವಳ ಮನೆಗೆ ಹೋಗಬೇಕು. ಯಾಕೆಂದರೆ ನನ್ನ ಮದುವೆ ನಿಶ್ಚಯವಾಗಿದೆ. ಬರುವ ತಿಂಗಳು ಮಾರ್ಚ್ ಹದಿನೈದಕ್ಕೆ ಮದುವೆ. ಹಾಗೆ ನೀವೂ ಖಂಡಿತಾ ಬರಬೇಕು" ಎಂದು ಹೇಳುತ್ತ [illegible] ಮದುವೆಯ ಕರೆಯೋಲೆ ತೆಗೆದು ಅವನ ಹೆಸರು ಬರೆದುಕೊಟ್ಟಳು. ಕವರ್

**ಭೂಷಣ**

ಕಾನ್ವೆಂಟಿನಲ್ಲಿ
ಗುಲಾಬಿ ಅರಳುವುದಿಲ್ಲ
ಅರಳಿದರೂ ಅವು
ವಾಸನೆ ಬೀರುವುದಿಲ್ಲ?
ಯಾಕೆಂದರೆ
ಹಾಳೆಯ ಹೂವು
ರೋಜ್ ಕೇಕಿಗೆ ಮಾತ್ರ
ಭೂಷಣ ತಾನೆ?

**ಮರೆವು**

ಸೊಸೆಗೆ
ಬೆಂಕಿ ಹಚ್ಚುವ
ಮುನ್ನ
ಮರೆತು ಬಿಟ್ಟಿರಾ?
ನಿಮ್ಮ ಮಗಳೂ
ಮತ್ತೊಬ್ಬರ ಸೊಸೆ
ಎಂಬುದನ್ನು!

**ಶಾಂತಿ–ಗೀತೆ**

ಶಾಂತಿಯೇ
ನನ್ನ ತುಟಿಯ
ಹಾಡಾಗು!
ನಿನ್ನ ಮೌನ
ಪತಾಕೆಯ
ನಾಲಿಗೆಯಲ್ಲಿ
ನೆಡು!
ಗುಂಡುಗಳ
ಸದ್ದು ಕೇಳಿ
ಬೇಸತ್ತ ಕಿವಿಗಳಿಗೆ
ನಿನ್ನ ಸ್ನೇಹ
ಸಂದೇಶ ಕೇಳಿಸು!
ನಿತ್ಯ ರಕ್ತಪಾತ
ಕಂಡು
ರೋಸಿಹೋದ
ಕಣ್ಣುಗಳಿಗೆ
ನಿನ್ನ ದಿವ್ಯರೂಪ
ತೋರಿಸು!

—ಸಂಭವಾ, ಡಿ. ಬಡಿಗೇರ

ಓಪನ್ ಮಾಡಿದ ಆತ "ಕಂಗ್ರಾಟ್ಸ್ ಮೇಡಂ. ಓಹ್. ಹುಡುಗ ಎಚ್ ಎ ಎಲ್ ನಲ್ಲಿ ಎಂಜಿನಿಯರ್" ಎನ್ನುತ್ತಲೇ ನಂದಿತಾ "ಹೌದು. ಬಿ. ಇ. ಎಲೆಕ್ಟ್ರಾನಿಕ್ಸ್‌ನಲ್ಲಿ ಮಾಡಿದ್ದಾರೆ. ಗ್ರೇಡ್–II ಎಂಜಿನಿಯರ್." ನಿರಂಜನ್‌ನ ಮನಸ್ಸಿನಲ್ಲಿ ಇದೀಗ ಅಸೂಯೆಯ ಗುಳ್ಳೆಯೊಡೆಯಿತು. ಕಹಿಯಾಗಿ ಅವನು ನೀರಸ ಧ್ವನಿಯಲ್ಲಿ "ಹೌದೇನು ನೋಡಿ. ನನಗೆಷ್ಟು ಅನ್ಯಾಯವಾಗಿದೆ ನಿಮ್ಮ ಈ ಕಂಪೆನಿಯಲ್ಲಿ! ನಾನೂ ಬಿ. ಇ. ಎಲೆಕ್ಟ್ರಾನಿಕ್ಸ್ ಎಂಜಿನಿಯರ್. ಆದರೂ ಕ್ಯಾಟೆಗರಿ–II ನಲ್ಲಿ ಎಸ್. ಟಿ. ಎ. ಆಗಿ ಕೊಟ್ಟಿದ್ದಾರೆ. ಇನ್ನೂ ನಾನು ನಾನ್ ಆಫೀಸರ್ (Non Officer) ಅನ್ನಿಸಿಕೊಂಡಿದ್ದೇನೆ. ಇಂಟರ್‌ನಲ್ ಅಡ್ವರ್‌ಟೈಸ್‌ಮೆಂಟ್‌ನಲ್ಲಿ ಕಾಲ್‌ಫರ್ ಮಾಡಿದ್ದರೂ ಸೆಲೆಕ್ಷನ್ ಎನ್ನುವುದು ಬರೀ ನಾಟಕವಾಗಿದೆ. ಡಿಪ್ಲೊಮಾ ಎಂಜಿನಿಯರ್‌ಗೆ ಬೇಕಿದ್ದರೆ ಗ್ರೇಡ್–II ಆಫೀಸರ್ ಪೋಸ್ಟ್ ಕೊಡುತ್ತಾರೆ. ನನ್ನಂಥ ಕ್ವಾಲಿಫೈಡ್ ಪ್ರತಿಭಾವಂತನನ್ನು ಫೇಲು ಮಾಡಿ ಅದೇ ಕ್ಯಾಟಗಿರಿಯಲ್ಲಿ ಕೂರಿಸುತ್ತಾರೆ. ಅವರಿಗೆ ಬೇಕಾಗಿದ್ದವರಿಗೆ ಒಳಗೊಳಗೇ ಕೊಟ್ಟುಕೊಳ್ಳುತ್ತಾರೆ. ಈ ರಾಜಕೀಯಗಳಿಂದ ನಾನಂತೂ ನೊಂದು, ಬೆಂದು ಹೋಗಿದ್ದೇನೆ. ವೃತ್ತಿ ಜೀವನದಲ್ಲಿ ಈ ರೀತಿಯ ಭೇದಭಾವವನ್ನು ನೋಡಿ ನೋಡಿ ರೋಸಿ ಹೋಗಿದ್ದೇನೆ. ಜಾಬ್ ಸ್ಯಾಟಿಸ್‌ಫ್ಯಾಕ್ಷನ್ ಇಲ್ಲದೇ ಹುಚ್ಚನಂತಾಗಿದ್ದೇನೆ." ನಿರಂಜನ್ ಉತ್ತೇಜಿತನಾಗಿದ್ದ. ಮನದೊಳಗೆ ಅಡಗಿದ್ದ ಕೋಪ, ಆಕ್ರೋಶ, ನೋವು ಭರ್ತ್ಸನೆಯ ನುಡಿಗಳ ಮೂಲಕ ಹೊರ ಹೊಮ್ಮಿತ್ತು. ಅದುವರೆಗೆ ತಡೆ ಹಿಡಿದಿದ್ದ ವಿಷಯ ತಾನೇ ತಾನಾಗಿ ಹೊರಬಿದ್ದಿತು. ಈ ಗಾಢವಾದ ನಿರಾಶೆಯನ್ನು ಮನಗಂಡ ನಂದಿತಾ "ನಿರಂಜನ್ ಕೂಲ್ ಡೌನ್ ಯುವರ್ ಸೆಲ್ಫ್. ಟೇಕ್ ಇಟ್ ಈಸಿ. ಬದುಕಿನಲ್ಲಿ ಎಲ್ಲವೂ ನಾವು ಅಂದುಕೊಂಡಂತೆ ಆಗುವುದಿಲ್ಲ. ಇಷ್ಟ ಪಟ್ಟದ್ದೆಲ್ಲ ಸಿಗುವುದಿಲ್ಲ" ನಿರಂಜನ್ "ಹಾಗಲ್ಲ ಮೇಡಂ" ಎಂದೇನೋ ಹೇಳಲು ಹವಣಿಸಿದಾಗ ಆಕೆ "ಪ್ಲೀಸ್ ನಿರಂಜನ್. ಈ ಮೇಡಂ ಅನ್ನುವ ಹೊಸ ಗೌರವ ಸಂಬೋಧನೆ ಏತಕ್ಕೆ? ಈ ಫಾರ್ಮಾಲಿಟಿಗಳೆಲ್ಲ ನನಗಿಷ್ಟವಿಲ್ಲ. ಮೊದಲಿನ ಹಾಗೇ ಹೆಸರಿಡಿದೇ ಮಾತಾಡಬಾರದೇ?" ಎಂದು ಹೇಳಿದಳು. "ಛೀ ಛೀ ಎಲ್ಲಾದರೂ ಉಂಟೇ? ಮೊದಲಾದರೆ ನೀವು ನನ್ನ ತಂಗಿಯ ಗೆಳತಿಯಾಗಿದ್ದಿರಿ. ಈಗ ಈ ದೊಡ್ಡ ಕಂಪೆನಿಯ ಹಿರಿಯ ಅಧಿಕಾರಿಯ ಪಿ. ಎ. ಆಗಿದ್ದೀರಾ!" ಎನ್ನುವಷ್ಟರಲ್ಲಿ ತಡೆದ ನಂದಿತಾ, "ಸ್ಥಾನದಿಂದ ದೊಡ್ಡಸ್ತಿಕೆ ಬರುವುದಿಲ್ಲ ನಿರಂಜನ್. ನಮ್ಮ ನಮ್ಮ ಚಹರೆ, ಸಂಬಂಧಗಳು ಇದರಿಂದ ಬದಲಾಗಲು ಸಾಧ್ಯವೇ? ಜವಾಬ್ದಾರಿಯಿಂದ, ವ್ಯಕ್ತಿತ್ವದಿಂದ ಮನುಷ್ಯನ ಸ್ಥಾನಮಾನಗಳು ಹೆಚ್ಚಬಹುದಷ್ಟೇ. ಪದವಿ ಇವತ್ತಿದ್ದರೆ ನಾಳೆಯೂ ಇರುವ ಗ್ಯಾರಂಟಿ ಇದೆಯೇ? ಉಳಿಯುವುದು ನಮ್ಮ ನಮ್ಮ ಕಾರ್ಯ ವಿಚಕ್ಷಣತೆ, ವೈಖರಿ, ಹೆಸರು ಮಾತ್ರ. ಆದರೆ ನಾವು ನಾವಾಗೇ ಇರಬೇಕು." ನಿರಂಜನ್‌ಗೆ ಅವಳ ಅಭಿಪ್ರಾಯ ಒಪ್ಪಿಗೆಯಾಗದೇ "ನಾನೇನೂ ಹಾಗೆಂದುಕೊಳ್ಳುವುದಿಲ್ಲ. ಅವನ ಪೊಸಿಷನ್ ಮತ್ತು ಪದವಿಯೇ ಅವನಿಗೆ ಗೌರವ ತರುವಂಥ ಸಾಧನ. ಕಾರ್ಯ ವಿಚಕ್ಷಣತೆಯನ್ನು ಯಾರು ಗುರುತಿಸುತ್ತಾರೆ? ನಮ್ಮ ಬುದ್ಧಿವಂತಿಕೆಯನ್ನು ತುಳಿಯುತ್ತಾರೆ. ಇದು ನನ್ನ ಅನುಭವದ ಮಾತು" ಈ ಮಾತುಗಳನ್ನು ಕೇಳುತ್ತ ನಂದಿತಾ ವಿಷಾದದಿಂದ ನಕ್ಕಳು. 'ಈ ಮನುಷ್ಯ ಈ ಭಾವನೆಗಳಿಂದ ಹೊರತಾಗಿಲ್ಲ. ಮುಖನೋಡಿ ಮಣೆ ಹಾಕುವ ಪ್ರವೃತ್ತಿ ಇವನದು. ಧೂರ್ತತನ, ಅಷಾಢಭೂತಿತನ ಸ್ವಲ್ಪವೂ ಕಮ್ಮಿಯಾಗಿಲ್ಲ. ಈತನಿಗೆ ನನ್ನಲ್ಲಿ ಬೆಲೆ, ಗೌರವವಿಲ್ಲ. ಈತ ಬೆಲೆ ಕೊಡುವುದು ನನ್ನ ಈಗಿನ ಪೊಸಿಷನ್‌ಗೆ ಅಷ್ಟೇ. ನಾಯಿ ಬಾಲ ಡೊಂಕೇ. ಹುಲಿಯ ಮೊಷ್ಟ ಪಟ್ಟೇ ಹಾಕಿಕೊಂಡು ಬಂದಿದ್ದಾನೆ. ನಾನು

ಜಾಗ್ರತೆಯಿಂದಿರಬೇಕು. ಈತ ಬೇಗ ವಿಷಯ ಹೇಳಿ ತೊಲಗಿದರೆ ನನ್ನ ಮುಖ್ಯ ಕೆಲಸವಾದರೂ ಬೇಗ ಮುಗಿಸಬಹುದು. ಎಂದು ಮುಂದಕ್ಕೆ ಬಾಗಿ, ಗಲ್ಲದ ಮೇಲೆ ಕೈಯಿಟ್ಟು "ಹಾಂ. ಮಿ. ನಿರಂಜನ್ ! ಈಗ ವಿಷಯಕ್ಕೆ ಬನ್ನಿ. ನನ್ನಿಂದೇನಾದರೂ ಸಹಾಯವಾಗಬೇಕಿತ್ತೇ ?" ಎಂದು ಕೇಳಿದಳು.

ನಿರಂಜನ್ ಅವನತ ಮುಖಿಯಾದ. "ಹೌದು. ನಿಮ್ಮ ಹತ್ತಿರ ಒಂದು ಮುಖ್ಯ ಕೆಲಸವಾಗಬೇಕಿತ್ತು. ನೀವು ದಯವಿಟ್ಟು ಇಲ್ಲ ಅನ್ನಬಾರದು. ಒಂದು ರೀತಿಯಲ್ಲಿ ನನ್ನ ಪ್ರತಿಭೆ ಮತ್ತು ಕ್ವಾಲಿಫಿಕೇಶನ್‌ಗೆ ಸವಾಲಾಗಿ ನಿಂತ, ವ್ಯಕ್ತಿತ್ವಕ್ಕೆ ಕುಂಠಿತವಾಗಿರುವ ಈ ಬೃಹತ್ ಸಮಸ್ಯೆ ಈಗ ನನ್ನ ಅಳಿವು ಉಳಿವಿನ ಪ್ರಶ್ನೆಯಾಗಿ ನಿಂತಿದೆ. ಓದು ಮುಗಿಸಿದಾಗಿನಿಂದ ನಾನು ಒಂದೇ ಒಂದು ಸಲ ಮನಃಪೂರ್ತಿ ನಕ್ಕಿಲ್ಲ. ನನ್ನ ಘನತೆ, ಗೌರವವನ್ನು ನನಗೀಗ ಕೊಟ್ಟಿರುವ ವೃತ್ತಿ ಪದವಿ ಕುಬ್ಜನನ್ನಾಗಿ ಮಾಡಿದೆ. ಗಂಡಸಿಗೆ ಉದ್ಯೋಗ ಎಷ್ಟು ಮುಖ್ಯವೋ, ಅಷ್ಟೇ ವೃತ್ತಿಗೌರವವು ಕೂಡಾ ಅವನ ಸ್ಥಾನಮಾನವನ್ನು ಮನೆ ಮತ್ತು ಸಮಾಜದಲ್ಲಿ ದೊಡ್ಡವನನ್ನಾಗಿ ಅಥವಾ ಸಣ್ಣವನನ್ನಾಗಿ ಮಾಡುತ್ತದೆ. ಈ ಮೂರು ವರ್ಷಗಳಲ್ಲಿ ಗ್ರೇಡ್–II ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಎಂಜಿನಿಯರ್ ಪದವಿ ದೊರಕಿಸಿಕೊಳ್ಳಲು ತಿಪ್ಪರಲಾಗ ಹಾಕುತ್ತಿದ್ದೇನೆ."

ನಿರಂಜನನ ಉದ್ದ ಭಾಷಣವನ್ನು ತದೇಕ ಚಿತ್ತದಿಂದ ಕೇಳುತ್ತಿದ್ದ ನಂದಿತಾ "ಮಿ. ನಿರಂಜನ್. ನೀವು ಹೇಳುವುದೆಲ್ಲ ಸರಿ. ಇದನ್ನೆಲ್ಲ ನನ್ನ ಮುಂದೇಕೆ ಹೇಳುತ್ತಿದ್ದೀರಿ. ನಾನೇನು ಈ ವಿಷಯದಲ್ಲಿ ಸಹಾಯ ಮಾಡಬಲ್ಲೆ? ನಾನೇನು ಈ ಕಂಪೆನಿಯ ಮ್ಯಾನೇಜಿಂಗ್ ಡೈರೆಕ್ಟರೇ ?" ಧ್ವನಿ ಅವಳಿಗರಿವಿಲ್ಲದಂತೆ ಮೃದುತ್ವದ ಹೊರಗೆ ಕಾಠಿಣ್ಯದ ಚಿಪ್ಪನ್ನು ಕವುಚಿತ್ತು. ನಿರಂಜನ್ ಕುಗ್ಗಿದ ಧ್ವನಿಯಲ್ಲಿ "ನೀವು ಮನಸ್ಸು ಮಾಡಿದಲ್ಲಿ ಖಂಡಿತಾ ನನಗೆ ಸಹಾಯಮಾಡಬಲ್ಲಿರಿ. ಆರ್ ಎಂಡ್ ಡಿ ಯಲ್ಲಿ ಎಂಟು ಎ ಇ ಇ (ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಎಂಜಿನಿಯರ್) ಪೋಸ್ಟ್‌ಗೆ ಕಾಲ್‌ಫರ್ ಮಾಡಿದ್ದಾರೆ. ಈ ವಿಷಯ ನಿಮಗೆ ಗೊತ್ತಿರಬಹುದು ಮೇಡಂ. ಅದು Purely Internal Advertisement. ಈಗ ಅದರ ಎಸ್ ಎಸ್ ಸಿ ನಲ್ಲಿ (ಸ್ಟಾಫ್ ಸೆಲೆಕ್ಷನ್ ಕಮಿಟಿ) ನಿಮ್ಮ ಬಾಸೂ ಇದ್ದಾರೆ. ನೀವು ಒಂದು ಮಾತು ನನ್ನ ಬಗ್ಗೆ ಹೇಳಿದರೆ ನಾನು ಖಂಡಿತಾ ಅದರಲ್ಲಿ ಪಾಸಾಗಬಲ್ಲೆ. ಹಾಗೆ ಮಾಡಿದಲ್ಲಿ ನಿಮ್ಮ ಉಪಕಾರವನ್ನು ನಾನು ಯಾವತ್ತೂ ಮರೆಯಲಾರೆ. ನನ್ನ ಕೆರಿಯರ್ ನಿಮ್ಮ ಒಂದು ಭರವಸೆಯ ಮಾತಿನ ಮೇಲೆ ನಿಂತಿದೆ. ಈ ಸಲವೂ ನಾನೇನಾದರೂ ಫೇಲಾದರೆ ಈ ಕಂಪೆನಿಗೇ ಗುಡ್ ಬೈ ಹೇಳಿ ಯಾವುದಾದರೂ ಹಾಳೂರಿಗೆ ಹೋಗಿ ಕೂಲಿನಾಲಿಯಾದರೂ ಮಾಡಿ ಹೊಟ್ಟೆ ಹೊರೆಯುತ್ತೇನೆ" ಅವನ ಧ್ವನಿಯಲ್ಲಿ ಅಡಗಿರುವ ಬೆದರಿಸುವಿಕೆ. ಹಾಲಾಹಲ ತುಂಬಿರುವ ಹೃದಯ. ಹತಾಶೆ ನಂದಿತಾಳನ್ನು ತಟ್ಟಿದರೂ ಅವಳು ವಿಚಲಿತಳಾಗಲಿಲ್ಲ. ಯಾವುದೋ ನೆನಪಿನ ಗೂಡು ಕೆದಕಿದಂತಾಗಿ ಕೆಂಜಿರುವೆಗಳು ಮೈಯಲ್ಲ ಮುತ್ತಿಕೊಂಡಂತೆ ಅನಿಸಿ ಮೈಮುಳ್ಳೆದ್ದಿತು. ಕೊಡವಿಕೊಂಡಂತೆ ಮಾಡಿ ನಂದಿತಾ ನಿಧಾನವಾಗಿ. "ನಿಮ್ಮ ಬಗ್ಗೆ ನನಗೆ ಸಂಪೂರ್ಣ ಕನಿಕರ, ಸಹಾನುಭೂತಿಯಿದೆ. ಆದರೆ ಸೆಲೆಕ್ಷನ್ ಕಮಿಟಿಯಲ್ಲಿ ನಮ್ಮ ಬಾಸ್ ಒಬ್ಬರೇ ಇರುವುದಲ್ಲವಲ್ಲ. ಇನ್ನೂ ಇತರ ಮೂವರು ಇರುತ್ತಾರೆ. ಅವರೂ ಮಾರ್ಕ್ಸ್ ಹಾಕಬೇಡವೇ ?" ನಿರಂಜನ್ ಈಗ ಉತ್ಸುಕತೆಯಿಂದ "ಅದರ ಬಗ್ಗೆ ನೀವು ಚಿಂತಿಸಬೇಡಿ. ನಿಮ್ಮ ಬಾಸ್ ಮನಸ್ಸು ಮಾಡಿದರೆ, ಇನ್ನೊಬ್ಬರಿಗೆ ಮಾರ್ಕ್ಸ್ ಹಾಕಲು ಹೇಳುತ್ತಾರೆ. ಅದೂ ಅಲ್ಲದೇ ಒಬ್ಬೊಬ್ಬರೂ ಒಂದೊಂದು ಕ್ಯಾಂಡಿಡೇಟಿಗೆ ಸೆಲೆಕ್ಟ್ ಮಾಡಿಸಲು ಅನುಸಂಧಾನ ಮಾಡಿಕೊಡುತ್ತಾರೆ. ಪರಸ್ಪರ ಸಹಕಾರದಿಂದ ಅವರೆಲ್ಲ ಕ್ಯಾಂಡಿಡೇಟುಗಳೂ ಸೆಲೆಕ್ಟ್ ಆಗುತ್ತಾರೆ. ನಮ್ಮ ಜಿ. ಎಂ. ಒಬ್ಬರೇ ನನ್ನಮೇಲೆ ಯಾವುದೋ ದ್ವೇಷ ಸಾಧಿಸುತ್ತಿದ್ದಾರೆ. ನನ್ನ ಪ್ರತಿಯೊಂದು ಸಲದ ಪ್ರಯತ್ನವನ್ನೂ ವಿಫಲ ಮಾಡುತ್ತಿದ್ದಾರೆ. ಆತ ಎಸ್ ಎಸ್ ಸಿ ನಲ್ಲಿದ್ದರೂ ಉಳಿದ ಮೂವರ ಸಹಕಾರದಿಂದ ನನ್ನನ್ನು ಫೇಲು ಮಾಡಿಸಲು ಸಾಧ್ಯವಾಗದು."

ನಂದಿತಾ ಈಗ ಕಲ್ಲಿನಂತಾದಳು. ಆಫೀಸಿನ ಈ ಗೊಂದಲ, ಗೋಜಲು ಅವಳಿಗೆ ಅರ್ಥವಾದರೂ ಅನುಭವವಾಗಿರಲಿಲ್ಲ. ಆದರೂ ಈ ಆಸಾಮಿ ಬಹಳ ಲೆಕ್ಕಾಚಾರ ಹಾಕಿಕೊಂಡೇ ಬಂದದ್ದು ಅವಳಿಗೆ ಸ್ಪಷ್ಟವಾಯಿತು. ಅವಳು ನುಡಿದಳು. "ಅದು ಸರಿ ನಿರಂಜನ್. ಇದೆಲ್ಲವುಗಳ ನನ್ನ ಪಾತ್ರ ನನಗೆ ಸ್ಪಷ್ಟವಾಗಲೇ ಇಲ್ಲ ನೋಡಿ. ಈ ದೊಡ್ಡವರುಗಳ ಮಧ್ಯೆ ನಾನು ನಗಣ್ಯ, ಸಣ್ಣ ಮೂರ್ತಿ ನೋಡಿ. ನಾನಾದರೂ ಏನು ಮಾಡಿಯೇನು ? ಇಂಥ ದೊಡ್ಡ ವಿಚಾರ ನಾನು ಅದ್ಹೇಗೆ ನನ್ನ ಬಾಸ್‌ಗೆ ಹೇಳಲಿ ? ಆಫೀಸಿಯಲಿ ಆತ ನನ್ನನ್ನು ಮೆಚ್ಚುತ್ತಾರೆ, ಗೌರವಿಸುತ್ತಾರೆ, ಪರ್ಸನಲಿ ಮಗಳಂತೆ ನೋಡುತ್ತಾರೆ. ಎಲ್ಲ ನಿಜ. ಆದರೆ ನಾನು ಅದರ ದುರುಪಯೋಗ ಮಾಡಿಕೊಳ್ಳಲೇ ? ನಿಮ್ಮಲ್ಲಿ ನಿಜವಾದ ವಿದ್ಯಾರ್ಹತೆ, ಪ್ರತಿಭೆ ಇರುವುದೇ ಆದಲ್ಲಿ ಅನುಭವಕ್ಕೆ ಅನುಗುಣವಾಗಿ ಈ ಹುದ್ದೆ ನಿಕ್ಕೇ ಸಿಗುತ್ತದೆ. ಅದೂ ಅಲ್ಲದೇ ಇಂತಹ ಶಿಫಾರಸು ನಾನು ಮಾಡಿದಲ್ಲಿ ಬಾಸ್ ಕಣ್ಣಲ್ಲಿ ಹಗುರ ಆಗಲಾರನೇ ? ನಮ್ಮ, ನಮ್ಮ ಸೀಮಿತದ ಚೌಕಟ್ಟಿನೊಳಗೆ ಇರುವುದೇ ಚೆನ್ನಲ್ಲವೇ ? ನಮ್ಮ ಚರ್ಯೆ ಇತರರಲ್ಲಿ ಸಂಶಯ ಹುಟ್ಟಿಸಬಾರದು ನೋಡಿ. ನನ್ನೊಂದು ಮಾತಿಗೆ ಬಾಸು ಒಪ್ಪುವುದಾದರೆ ಅದು ಅವರ ವ್ಯಕ್ತಿತ್ವಕ್ಕೆ ಕುಂದು ತರಲಾರದೇ ?" ನಂದಿತಾ ಹೇಳುತ್ತ ತಲೆ ಎತ್ತಿದಾಗ ನಿರಂಜನ್‌ನ ಧುಮುಗುಡುತ್ತಿದ್ದ ಮುಖ ಕಂಡು ಚಕಿತಳಾದಳು. ಕೋಪದಿಂದ ಕೆಂಪಾದ ಅವನು, "ಏನೋ, ನನ್ನ ತಂಗಿಯ ಗೆಳತಿ ಎಂಬ ಸಲಿಗೆ ಮತ್ತು ನಂಬಿಕೆ ಯಿಂದ ನಿಮ್ಮ ಹತ್ತಿರ ಭಿಕ್ಷುಕನಂತೆ ಯಾಚಿಸಲು ಬಂದೆ. ಅಷ್ಟಕ್ಕೇ ನೀವು ದೊಡ್ಡ ಜನರಂತೆ ಮಾತನಾಡ ಹತ್ತಿದ್ದೀರಿ. ಈ ಫ್ಯಾಕ್ಟರಿ, ಕಂಪೆನಿಯ ಯೋಗ್ಯತೆ ನಂಗೆ ಗೊತ್ತಿಲ್ಲವೇ ? ಕೆಲಸ ಆಫೀಸರ್ ಗ್ರೇಡ್‌ದ್ದು ತೆಗೆಯುತ್ತಾರೆ. ಸಂಬಳ ಕಾರ್ಮಿಕ ಕ್ಯಾಟಗರಿದ್ದು ಕೊಡ್ತಾರೆ" ಉದ್ವೇಗದಿಂದ ಹೇಳುತ್ತಿದ್ದವನು ಸ್ವಲ್ಪ ನಿಯಂತ್ರಿಸಿಕೊಂಡು "ಏನೋ ಸ್ವಲ್ಪ ನನಗಾಗಿ ಪ್ರಯತ್ನ ಮಾಡಿ ನೋಡಿ ಮೇಡಂ. ನಿಮಗೆ ಪುಣ್ಯ ಬಂದೀತು. ಈಗಾಗಲೇ ಹೇಳಿದಂತೆ ನಾನೇನಾದರೂ ಫೇಲಾದರೆ ಈ ಸಲ ನಾನಂತೂ ಈ ಫ್ಯಾಕ್ಟರಿಗೆ ದೊಡ್ಡ ನಮಸ್ಕಾರ ಹಾಕಿ ಯಾವುದಾದರೂ ಖಾಸಗಿ

---

ವನಿತಾ

## ನವದಂಪತಿಗಳು

ಇದೊಂದು ಹೊಸ ಶೀರ್ಷಿಕೆ. ವಿವಾಹ ಜೀವನದಲ್ಲಿ ಅವಿಸ್ಮರಣೀಯ ಘಟನೆ. ವಿವಾಹ ದಿನವನ್ನು ಅದ್ದೂರಿಯಾಗಲ್ಲದಿದ್ದರೂ ಸರಳವಾಗಿ ಆಚರಿಸುವುದೂ ಉಂಟು. ಅದರಲ್ಲೂ ಪ್ರಥಮ ವಾರ್ಷಿಕೋತ್ಸವಕ್ಕೆ ಹೆಚ್ಚಿನ ಹುರುಪಿರುತ್ತದೆ. ಅದನ್ನು "ವನಿತಾ" ಜೊತೆಗೆ ನೀವು ಹಂಚಿಕೊಳ್ಳಬಹುದು. ಮಾಡಬೇಕಾದುದು ಇಷ್ಟೇ. ದಂಪತಿಗಳ ಕ್ವಾರ್ಟರ್ ಸೈಜ್ (3" × 4") ಬಣ್ಣದ ಭಾವಚಿತ್ರವನ್ನು ಕಳಿಸಿ. ಅದರೊಂದಿಗೆ ವಧುವಿನ ಕಡೆಯಿಂದ ಮುದ್ರಿಸಲಾದ "ಮದುವೆಯ ಕರೆಯೋಲೆ"ಯನ್ನು ಲಗತ್ತಿಸಿರಬೇಕು. ಜೊತೆಗೆ ವಧು-ವರರಾಗಲಿ, ಅಥವಾ ಅವರ ಮನೆಯ ಹಿರಿಯರಾಗಲಿ ಈ ಭಾವಚಿತ್ರವನ್ನು 'ವನಿತಾ'ದಲ್ಲಿ ಪ್ರಕಟಿಸಲು ತಾವು ಕಳಿಸುತ್ತಿದ್ದೇವೆಂದು ಸ್ವಹಸ್ತಾಕ್ಷರದಿಂದ ಬರೆದು ಸಹಿ ಹಾಕಿದ ಪತ್ರವೂ ಅಗತ್ಯ. ವಧೂ-ವರರ ತಾಯಿ–ತಂದೆಯರ ಹೆಸರುಗಳನ್ನು ತಿಳಿಸಬೇಕು.

**ವಿ. ಸೂಚನೆ :**

- ಬಣ್ಣದ ಭಾವಚಿತ್ರಗಳನ್ನೇ ಕಳಿಸಬೇಕು.
- ಮದುವೆಯ ಕರೆಯೋಲೆ, ಅದರೊಂದಿಗೆ ಸಹಿ ಹಾಕಿದ ಪತ್ರಗಳನ್ನು ಲಗತ್ತಿಸಿರದ ಭಾವಚಿತ್ರಗಳನ್ನು ಪ್ರಕಟಪಡಿಸಲಾಗುವುದಿಲ್ಲ.
- ಯಾವ ತಿಂಗಳು ವಿವಾಹದ ಪ್ರಥಮ ವಾರ್ಷಿಕೋತ್ಸವ ಬರುತ್ತದೆಯೋ ಅದರ ಹಿಂದಿನ ತಿಂಗಳು 1 ನೇ ದಿನಾಂಕದ ಒಳಗೆ ನಮಗೆ ತಲುಪುವಂತೆ ಕಳಿಸಬೇಕು. ಮದುವೆಯಾಗಿ ಒಂದು ವರ್ಷವಾಗಲಿರುವ ದಂಪತಿಗಳ ಪ್ರಥಮ ವಿವಾಹ ವಾರ್ಷಿಕೋತ್ಸವಕ್ಕೆ ಮಾತ್ರ ಈ ಶೀರ್ಷಿಕೆ ಮೀಸಲು.
- ಆಯ್ಕೆಯಾಗದ ಚಿತ್ರಗಳನ್ನು ಹಿಂದಿರುಗಿಸಲಾಗುವುದಿಲ್ಲ.
- ಈ ವಿಷಯದಲ್ಲಿ ಸಂಪಾದಕ ವರ್ಗದ ತೀರ್ಮಾನವೇ ಅಂತಿಮ. ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ.

ಭಾವಚಿತ್ರಗಳನ್ನು ಕಳಿಸುವ ಸ್ಥಳ:

**ವನಿತಾ**
**ಡಾಲ್ಟನ್ ಪಬ್ಲಿಕೇಷನ್ಸ್, ಚಂದಮಾಮ ಬಿಲ್ಡಿಂಗ್ಸ್,**
**ವಡಪಳನಿ, ಮದರಾಸು – 600 026**

ಸಂಸ್ಥೆಗೆ ಸೇರುತ್ತೇನೆ. ಅಲ್ಲಿ ಸಂಬಳ ಕಮ್ಮಿ. ಜವಾಬ್ದಾರಿ ಜಾಸ್ತಿ ಇದ್ದರೂ ಮುಂದೆ ಬರುವ ಅವಕಾಶವಾದರೂ ಇರುತ್ತದೆ. ರೆಕಗ್ನಿಶನ್ ಇರುತ್ತದೆ. ಆದರೆ ಈ ಕೆಲಸ ನಾನು ಮುಂಚೆಯೇ ಮಾಡಲು ಹೆದರುತ್ತಿದ್ದುದು ಬರೀ ಉದ್ಯೋಗದ ಸೇಫ್ಟಿ ಮತ್ತು ಸೆಕ್ಯುರಿಟಿಯ ಹೆದರಿಕೆಗೆ ಮಾತ್ರ."

ನಂದಿತಾಗೆ ಈಗ ನಿಜವಾಗಿಯೂ ಗೊಂದಲವಾಯಿತು. 'ಈತ ತನಗೇಕೆ ಬೆದರಿಸುತ್ತಿದ್ದಾನೆ, ಇವನ ಭವಿಷ್ಯಕ್ಕೆ ನಾನು ಹೊಣೆಗಾರಳೇ? ಏನೇ ಆದರೂ ಸದ್ಯಕ್ಕೆ ನಾನು ಇವನನ್ನು ಹೇಗಾದರೂ ಸಾಗಹಾಕಬೇಕು. ಕೆಲಸ ಬೇರೆ ಬಾಕಿ ಇದೆ. ಊಟದ ಸಮಯವೂ ಹತ್ತಿರವಾಗಿದೆ ಎಂದುಕೊಂಡವಳೇ "ಆಯ್ತು, ಮಿ. ನಿರಂಜನ್. ನನ್ನ ಕೈಲಾದ ಸಹಾಯ ಮಾಡುತ್ತೇನೆ. ಪೂರಾ ಭರವಸೆ ಕೊಡಲಾರೆ. ಯಾಕೆಂದರೆ ನಮ್ಮ ಬಾಸ್ ತುಂಬಾ ಸ್ಟ್ರಿಕ್ಟ್. ಅವರು ನನ್ನ ಮಾತಿಗೆ ಬೆಲೆ ಕೊಟ್ಟರೆ ಸರಿ. ಇಲ್ಲದಿದ್ದರೆ ಅದು ನಿಮ್ಮ ದುರಾದೃಷ್ಟವೆಂದು ತಿಳಿಯಿರಿ. ಫಲಾಫಲಗಳು ನಿಮ್ಮ ಅದೃಷ್ಟ ರೇಖೆಯ ಮೇಲೆ ನಿಂತಿದೆ. ಹಾಂ. ಸದ್ಯದಲ್ಲಿಯೇ ನಾನು ಚಿತ್ರಾಳನ್ನು ಭೇಟಿಯಾಗುವವಳಿದ್ದೇನೆ. ನೀವು ಪತ್ನಿ ಸಮೇತ ಖಂಡಿತಾ ನನ್ನ ಮದುವೆಗೆ ಬರಬೇಕು."

ಅವಳ ಅಷ್ಟೇನೂ ಆಶಾದಾಯಕವಲ್ಲದ ಮಾತಿನ ಮುಕ್ತಾಯದೊಂದಿಗೆ, ತನ್ನ ಜೋತು ಬಿದ್ದ ನಿರಾಶೆಯ ಮುಖದಲ್ಲಿ ಕೃತಕ ನಗುವಿನ ಲೇಪನ ಹಚ್ಚಲು ಹೋದ ನಿರಂಜನ ಸೋತು "ಹಾಗಾದ್ರೆ ಇನ್ನೂ ಬರ್ತೀನಿ ಮೇಡಂ. ಮರೆಯಬೇಡಿ" ಎನ್ನುತ್ತ ಭಾರವಾದ ಹೆಜ್ಜೆಯನ್ನೆತ್ತಿ ಹಾಕುತ್ತ ಹೋಗುವುದನ್ನು ಕಂಡ ನಂದಿತಾಳ ಹೃದಯ ದ್ರವಿಸಿತು. ಸ್ವಲ್ಪ ಹೊತ್ತು ಏನನ್ನೋ ಯೋಚಿಸುತ್ತಿದ್ದವಳ ಮುಖ ನಿರ್ಭಾವದಿಂದ ಸ್ಥಿಮಿತಕ್ಕೆ ಬಂದು ನೆಟ್ಟಗೆ ಕುಳಿತಳು.

ಹದಿನೈದು ನಿಮಿಷಗಳಲ್ಲಿ ಎಲ್ಲ ಟೈಪಿಂಗ್ ಮುಗಿಸಿ ಸಂತೃಪ್ತಿಯಿಂದ ಫೈಲಿನಲ್ಲಿ ಅವನ್ನೆಲ್ಲ ಜೋಡಿಸಿಟ್ಟು ಲಂಚ್ ಬಾಕ್ಸನ್ನು ಹತ್ತಿರವೆಳೆದುಕೊಂಡಳು. ಅದೇ ಹೊತ್ತಿಗೆ ಅವಳ ಸಹೋದ್ಯೋಗಿ ಗೆಳತಿಯೂ ಊಟದ ಬಾಕ್ಸ್ ಹಿಡಿದುಕೊಂಡು ಬಂದಳು. ಎಲ್ಲ ವಿಷಯ ಮರೆತು ಹರಿಣಿಯೊಡನೆ ಮಾತನಾಡುತ್ತ ನಗುತ್ತ ಊಟ ಮುಗಿಸಿದಳು ನಂದಿತಾ.

ಬಾಸ್ ಎರಡೂವರೆಯಷ್ಟೊತ್ತಿಗೆ ಬಂದಾಗ ಪೇಪರ್ಸ್ ಜೋಡಿಸಿಕೊಟ್ಟು ಸಹಿ ಹಾಕಿಸಿಕೊಂಡಳು. ಹೊರಬಂದು ಡಿಸ್‌ಪ್ಯಾಚ್ ಮಾಡಿಸಲಿದ್ದ ಪೇಪರ್ಸ್‌ಗಳನ್ನು ಅಟೆಂಡರ್ ಕೈಯಲ್ಲಿ ಕೊಟ್ಟು ಜವಾಬ್ದಾರಿ ಮುಗಿಸಿ ಕೊಂಚ ವಿಶ್ರಾಂತಿ ತೆಗೆದುಕೊಳ್ಳಲು ಕುರ್ಚಿಗೆ ಬೆನ್ನೂರಿ ಒರಗಿದಳು. ಬೇಡವೆಂದರೂ ಮನಸ್ಸು ಹಿಂದಕ್ಕೋಡಿತು. ಮರೆಯಲೆತ್ನಿಸುವ ಕಹಿ ನೆನಪುಗಳ ಪರದೆಯಿಂದ ಅಸ್ಪಷ್ಟವಾಗಿ ಕೆಲವಾರು ಘಟನೆಗಳು, ಆಕೃತಿಗಳು ಮಿದುಳಿನಲ್ಲಿ ಮೇಲುಗೈಯಿಂದ ರಾಜಾರೋಷವಾಗಿ ಓಡಾಡ ಹತ್ತಿದವು. ಯೋಚಿಸುತ್ತ ಯೋಚಿಸುತ್ತ ನಾಚಿಕೆ, ಅವಮಾನ ಮನಸ್ಸಿನಲ್ಲಿ ಮುಸುಕಿತು. ಬಲವಂತವಾಗಿ ಅವುಗಳನ್ನು ಹೊಡೆದೋಡಿಸಲು ಪ್ರಯತ್ನಿಸುತ್ತ, ನುಂಗಿಕೊಳ್ಳುತ್ತ ಮನದಲ್ಲೇನೋ ದೃಢ ನಿರ್ಧಾರ ಮಾಡಿಕೊಂಡಳು.

ತನ್ನ ಆ ಕಾಲೇಜು ದಿನಗಳು, ಬಡತನ ಕಾಡುತ್ತಿದ್ದರೂ ತನ್ನ ಬುದ್ಧಿವಂತಿಕೆ, ಪ್ರತಿಭೆಯಿಂದ ನಂದಿತಾ ಸರಳ ಕೃಷ್ಣ ಸುಂದರಿಯಾದರೂ ಮಿಂಚುತ್ತಿದ್ದಳು. ಡಿಬೇಟು, ಎಸ್ಸೇ ರೈಟಿಂಗ್, ಹಾಡು ಎಲ್ಲದರಲ್ಲೂ ಮೊದಲ ಪ್ರೈಜ್ ಗಿಟ್ಟಿಸಿಕೊಳ್ಳುತ್ತಿದ್ದಳು. ಓದುವುದರಲ್ಲೂ ಅಷ್ಟೇ ಮುಂದು. ಆದರೆ ಅವಳಿಗೆ ಸರಿಸಮವಾದ ಪ್ರತಿಸ್ಪರ್ಧಿಯೂ ಒಬ್ಬಳಿದ್ದಳು. ಅವಳೇ ಚಿತ್ರಾ. ಇಬ್ಬರಿಗೂ ಸಮಾನಾಭಿರುಚಿ. ಉತ್ತಮ ಪೈಪೋಟಿ. ಇವೆಲ್ಲ ಅವರಿಬ್ಬರೊಳಗೆ ಪರಸ್ಪರ ಈರ್ಷ್ಯೆ ತರುವ ಬದಲಾಗಿ ಸ್ನೇಹವನ್ನು ಇನ್ನೂ ವೃದ್ಧಿಗೊಳಿಸಿತ್ತು. ಒಬ್ಬರೊಬ್ಬರ ಮನೆಗೆ ಹೋಗಿ ಬರುವುದು ಸಾಮಾನ್ಯವಾಯಿತು. ಚಿತ್ರಾಳ ತಾಯಿ, ತಂಗಿ, ಅಕ್ಕ, ಅಣ್ಣ ಎಲ್ಲರೂ ನಂದಿತಳನ್ನು ಚೆನ್ನಾಗಿಯೇ ಉಪಚರಿಸಿ ಮಾತಾಡುತ್ತಿದ್ದರು. ನಂದಿತಾಳ ಅಣ್ಣ, ಅಕ್ಕ, ತಾಯಿಗೂ ಚಿತ್ರಾ ಅಚ್ಚುಮೆಚ್ಚು. ಗೆಳತಿಯರ ಗಳಸ್ಯ ಕಂಠಸ್ಯ ಹಾಡಿನಲ್ಲಿ ಲತಾ ಮಂಗೇಶ್ಕರ್, ಆಶಾ ಭೋಂಸ್ಲೆ ಎಂದು ಹೇಳಿಕೊಳ್ಳುತ್ತಿತ್ತು. ಇಷ್ಟರಲ್ಲಿ ಇಬ್ಬರ ಬಿ. ಎಸ್. ಸಿ ಯೂ ಮುಗಿದೇ ಹೋಯಿತು. ಈ ಪದವೀಧರೆಯರಿಬ್ಬರಲ್ಲೂ ಇನ್ನೂ ವಿದ್ಯಾಭ್ಯಾಸ ಮಾಡುವ ಹುಮ್ಮಸ್ಸು ಮತ್ತೂ ತಾಕತ್ತೂ ಇರಲಿಲ್ಲ. ಮಧ್ಯಮ ವರ್ಗದ ಹೆಣ್ಣುಮಕ್ಕಳು ಮದುವೆ ಇಲ್ಲವೇ, ಉದ್ಯೋಗವೇ ಅವರಿಗೆ ಗತಿ ಅಲ್ಲವೇ?

ಇಷ್ಟರಲ್ಲಿ ನಂದಿತಾಳ ಅಕ್ಕನ ಮದುವೆಯಾಯಿತು. ಮದುವೆಯಲ್ಲಿ ಚಿತ್ರಳದ್ದೇ ಓಡಾಟ. ಅವರಿಬ್ಬರ ಗೆಳತನ ಪರಮಾವಧಿ ತಲುಪಿತ್ತು. ಕಾಲೇಜಿಗೆ ಹೋಗುವುದು ನಿಂತರೂ ಸ್ನೇಹದ ಸಸಿ ಹೆಮ್ಮರವಾಗಿ ನಿಂತಿತ್ತು. ಕಾಲೇಜಿಗೆ, ಮನೆಗೆ ಇಬ್ಬರೂ ಹೋಗುತ್ತಿದ್ದರು. ಜಾತಿ ಅವರಿಬ್ಬರದೂ ಒಂದೇ ಆದರೂ ಹುಟ್ಟೂರು, ಭಾಷೆ ಒಂದು ತೊಡಕಾಗಿ ಸ್ನೇಹಕ್ಕೆ ಅಡ್ಡಿ ಬರಲಿಲ್ಲ. ಚಿತ್ರಾಳ ಮನೆಯಲ್ಲಿ ಅವಳ ಅಕ್ಕನ ಮದುವೆಯಾದಾಗಲಿಂದ ಭರದಿಂದ ಆಕೆಯ ತಂದೆ ಅವಳಿಗೆ ಗಂಡು ಹುಡುಕುತ್ತಿದ್ದರು. ಇನ್ನೇನು ರಿಟೈರ್ಡ್ ಆಗುವ ಮುಂಚೆ ಜವಾಬ್ದಾರಿ ಮುಗಿಸುವ ಆತಂಕ, ತವಕ ಆತನಿಗೆ. ಕೆಲಸಕ್ಕೆ ಹೋಗುವ ಅವಳ ಆಸೆಯನ್ನು ಮೊಗ್ಗಲ್ಲೇ ಚಿವುಟಿದ್ದರು.

ನಂದಿತಾ ತಂದೆ ಇಲ್ಲದ ಹುಡುಗಿ. ಅಣ್ಣ ಇದೀಗ ತಾನೆ ಅವಳ ಅಕ್ಕನ ಮದುವೆ ಮಾಡಿ ಸಾಲದಲ್ಲಿ ಪರದಾಡುತ್ತಿದ್ದ. ತಾನಾಗಿ ಗಂಡು ದೊರಕಿ ಬಂದರೆ ನಂದಿತಾಗೂ ಮಾಡಿ ಮುಗಿಸಬಹುದಿತ್ತು ಅವನು. ಆದರೆ ಆಕೆ ಅಕ್ಕನಂತೆ ಬಿಳುಪಲ್ಲ, ಸ್ಫುರದ್ರೂಪಿಯೂ ಅಲ್ಲ. ಆದರೂ ಸರಳ, ಲಕ್ಷಣ, ಬುದ್ಧಿವಂತ ಹುಡುಗಿ ಮನೆಯಲ್ಲೇ ಕೂತು 'ಸೋಮಾರಿ ತಲೆ ದೆವ್ವದ ಆಗರ' ಆಗಬಾರದು ಎಂದುಕೊಂಡು ನಂದಿತಾ ಕೆಲಸ ಹುಡುಕಲು ಶುರುಮಾಡಿದಳು.

(ಮುಂದಿನ ಸಂಚಿಕೆಯಲ್ಲಿ)



## ಅರಸೀಕೆರೆಯಲ್ಲಿ ಆದರ್ಶ ಸಮಾಜ ಸೇವಕಿ

ಅರಸೀಕೆರೆಯ ಸ್ಟೇಟ್‌ಬ್ಯಾಂಕ್ ಆಫ್ ಮೈಸೂರಿನ ವ್ಯವಸ್ಥಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಎಲ್. ವಿ. ಹನುಮಂತರಾವ್‌ರವರ ಧರ್ಮಪತ್ನಿ ಶ್ರೀಮತಿ ನಳಿನಿರಾವ್ ತಮ್ಮ ಸಂಗೀತದ ಮೂಲಕ ಅರಸೀಕೆರೆಯ ಜನತೆಗೆ ಚಿರಪರಿಚಿತರಾದರು. ತಾವು ಸಂಗೀತ ಕಲಿಯುವುದರ ಜೊತೆಗೆ ತಮ್ಮ ಮನೆಯಲ್ಲಿ ಸಂಗೀತವನ್ನು ಉಚಿತವಾಗಿ ಹೇಳಿಕೊಡುತ್ತಿದ್ದಾರೆ. ಈಗಾಗಲೇ ಅರಸೀಕೆರೆಯ ಶ್ರೀ ವಾಸವಿ ಯುವತಿಯರ ಸಂಘ ಹಾಗೂ ಶ್ರೀ ಸೀತಾ ಮಹಿಳಾ ಸಂಘದ ಸದಸ್ಯರಿಗೆ ಸೌಂದರ್ಯ ಲಹರಿಯನ್ನು ಉಚಿತವಾಗಿ ಅಭ್ಯಾಸ ಮಾಡಿಸಿರುತ್ತಾರೆ. ಹಿಂದೀ ಉಪನ್ಯಾಸಕಿಯಾಗಿ ಒಂದು ವರ್ಷ ಸೇವೆ ಸಲ್ಲಿಸಿರುವ ಶ್ರೀಮತಿ ನಳಿನಿರಾವ್ ತಮ್ಮ ಮಧುರ ಕಂಠದಿಂದ ಎಲ್ಲರ ಮನವನ್ನು ಗೆದ್ದಿದ್ದಾರೆ. ದಿನದಲ್ಲಿ ಒಂದು ಘಂಟೆಯೂ ಸಹ ಬಿಡುವಿಲ್ಲದೆ ನಿಸ್ವಾರ್ಥವಾಗಿ ಸಮಾಜಸೇವೆಯಲ್ಲಿ ತೊಡಗಿರುವ ಇವರು ದೇವರ ನಾಮವನ್ನು ಹೇಳಿಕೊಡುತ್ತಿದ್ದಾರೆ. ಶ್ರೀ ಲಕ್ಷ್ಮೀ ಸಹಸ್ರನಾಮವನ್ನು ಹೇಳಿಕೊಡುತ್ತಿದ್ದಾರೆ. ಜೊತೆಗೆ ಇವರು ಉತ್ತಮ ಯೋಗಪಟುವಾಗಿರುವುದರಿಂದ ಯೋಗ ತರಗತಿಗಳನ್ನು ಉಚಿತವಾಗಿ ನಡೆಸುತ್ತಿದ್ದಾರೆ. ಸಹನೆ, ಅನುಕಂಪ, ದಯೆ ಇವು ದೇವರು ಕೊಟ್ಟ ವರವಾಗಿದೆ. ಈಗಾಗಲೇ ಒಬ್ಬ ಕುರುಡರಿಗೂ ಸಹ ಸಂಗೀತ ಪಾಠ ಪ್ರಾರಂಭಿಸಿದ್ದಾರೆ. ಉದಯೋನ್ಮುಖ ಬರಹಗಾರರನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಅರಸೀಕೆರೆಯ ಉದಯೋನ್ಮುಖ ಬರಹಗಾರರಾದ ಹೆಚ್. ಡಿ. ದಿವಾಕರ್ ರವರ ಅನೇಕ ಕವಿತೆಗಳಿಗೆ ತಾವೇ ರಾಗಸಂಯೋಜನೆ ಮಾಡಿ ತಮ್ಮ ಮಧುರ ಕಂಠದಿಂದ ಹಾಡಿ ಧ್ವನಿ ಸುರಳಿ ಮಾಡಿದ್ದಾರೆ. ಈಗ ಅವರು ಶ್ರೀ ಭಗವದ್ಗೀತೆಗೆ ರಾಗ ಸಂಯೋಜನೆ ಮಾಡುವ ಸಂಕಲ್ಪ ಮಾಡಿದ್ದಾರೆ.

ಈಗ ಅವರ ಯಜಮಾನರಿಗೆ ನಾಗಪೂರ್ ವರ್ಗವಾಗಿರುವುದರಿಂದ ಶ್ರೀಮತಿ ನಳಿನಿರಾವ್ ಸದ್ಯದಲ್ಲಿಯೇ ನಾಗಪೂರ್ ಪಯಣಿಸಲಿದ್ದಾರೆ.

**—ಸುಮಾ ಎಂ. ವಿ.**

ಮುಖಪುಟ ಲೇಖನ:

"ಅಡಿಗೆ ಮನೆಯಲ್ಲಿ ನನ್ನ ಯಜಮಾನರು" ಶೀರ್ಷಿಕೆಗಾಗಿ ಲೇಖನಗಳನ್ನು ಕಳಿಸುವಲ್ಲಿ ಮಹಿಳೆಯರ ಉತ್ಸಾಹ ಅಪರಿಮಿತ. ಈ ವಿಷಯದಲ್ಲಿ ತಮ್ಮ ಸ್ವಾರಸ್ಯಪೂರ್ಣ ಅನುಭವವನ್ನು ರಸವತ್ತಾಗಿ ಬಣ್ಣಿಸಿ ಓದುಗರಿಗೆ ರಸಗವಳವನ್ನೇ ನೀಡಿದ್ದಾರೆ. ಮಹಿಳಾ ಸಾಹಿತ್ಯವು ಅಡಿಗೆಮನೆ ಸಾಹಿತ್ಯ ಎಂಬ ಮೂದಲಿಕೆಗೆ ಗುರಿಯಾಗಿದ್ದರೂ ಸಾಹಿತ್ಯದಷ್ಟೇ ಅಡಿಗೆ ಕೆಲಸವೂ ಸುಲಭದ ಬಾಬತ್ತಲ್ಲ ಎಂಬುದನ್ನು ಅವರ ಅನುಭವ ಮನಗಾಣಿಸಿದೆ. ಜೊತೆಗೆ ಈ ರೀತಿಯ ಅಡಿಗೆ ಮನೆ ಅನುಭವಗಳು ಸಾಹಿತ್ಯಕ್ಕೆ ಸಾಮಗ್ರಿಯಾಗಬಹುದೆಂಬುದನ್ನು ರುಜುವಾತುಪಡಿಸಿವೆ. ಇಲ್ಲಿಯವರೆಗೆ ಬಂದ ಲೇಖನಗಳಲ್ಲಿ ಆಯ್ದ ಕೆಲವನ್ನು ಈ ಸಂಚಿಕೆಯಲ್ಲಿ ಪ್ರಕಟಸಲಾಗಿದೆ. ಮತ್ತೆ ಉಳಿದವನ್ನು ಮುಂದಿನ ಸಂಚಿಕೆಗಳಲ್ಲಿ ಪ್ರಕಟಸಲಾಗುವುದು.

# "ಅಡಿಗೆ ಮನೆಯಲ್ಲಿ ನನ್ನ ಯಜಮಾನರು"

## "ಶ್ಯಾವಿಗೆ ಭಾತ್"

ನಮಗೆ ಮದುವೆಯಾಗಿ ಈಗ ಎರಡು ವರ್ಷ ಆಯ್ತು. ನಮ್ಮ ಮದುವೆಗೆ ಮುಂಚೆ ಸುಮಾರು ವರ್ಷ ಅಡಿಗೆ ಮಾಡಿದ ಅನುಭವ ನಮ್ಮೆಜಮಾನ್ರಿಗೆ ಇತ್ತು. ಅವರು ಖಾಯಂ ಆಗಿ ಸಾಂಬಾರ್, ಸಾರು, ಚಿತ್ರಾನ್ನ, ಉಪ್ಪಿಟ್ಟು ಮಾಡಿ ಮಾಡಿ ಎಕ್ಸ್‌ಪರ್ಟ್. ಸಮಯ ಬಂದಾಗಲೆಲ್ಲಾ ಅವರಿಂದ ಮಾಡಿಸಿ ಕೊಂಡು ರುಚಿ ನೋಡಿ ಅವು ನಿಜಕ್ಕೂ "ನಳ"ನ ವಂಶಜರು ಎಂದು ಖಾತ್ರಿ ಆಗಿತ್ತು. ಇಷ್ಟೆಲ್ಲಾ ಇದ್ರೂ ಒಂದು ಹೊಸ ರುಚಿ ಮಾಡಲು ಹೋಗಿ ಒಮ್ಮೆ ಎಡವಟ್ಟಾಗಿತ್ತು.

ನನಗಾಗ ನಾಲ್ಕು ತಿಂಗಳು. ಬಾಯಿ ರುಚಿ ಬೇರೆ. ಬೇಕಾದ್ದೆಲ್ಲಾ ಮಾಡ್ಕೊಂಡು ತಿನ್ನೋಣ ಅಂದ್ರೆ ಡಾಕ್ಟರ್ ಬೆಡ್‌ರೆಸ್ಟ್ ಹೇಳಿದ್ರು. ಹಾಗಾಗಿ ನನ್ನ ಬಯಕೆ ತೀರಿಸುವ ಹೊಣೆ ನನ್ನವರ ಮೇಲೆ ಬಿದ್ದಿತ್ತು. ಬಯಕೆ ಹೇಳಿದ್ದೇ ತಡ ಹುಟ್ಟು ಹಿಡಿದು ಅಡಿಗೆ ಮನೆಗೆ ನುಗ್ಗಿಯೇ ಬಿಟ್ರು.

ಅಡಿಗೆ ಮನೆಯಿಂದ ಚಾಕು ಪ್ಲೇಟಿಗೆ ಬಡಿಯುವ ಶಬ್ದದ ಜೊತೆಗೆ "ಹಾಯಾಗಿ ಕುಳಿತಿರು ನೀನು ರಾಣಿಯ ಹಾಗೆ, ಎಲ್ಲ ಕೆಲಸ ಮಾಡಿ ಮುಗಿಸುವೆ. ನೀನೇ ಆಗ ಮೆಚ್ಚಿಕೊಳ್ಳುವೆ ಪಬಪಂ, ಪಬಪಂ," ಹಾಡು ತೇಲಿ ಬರುತ್ತಿತ್ತು. ಏನಾದ್ರೂ ಸಹಾಯ ಮಾಡೋಣ ಅಂತ ಅಡಿಗೆ ಮನೆಗೆ ಬಂದು ಪ್ಲೇಟಿನಲ್ಲಿ ಕೊಚ್ಚಿದ ಈರುಳ್ಳಿ, ಇನ್ನೊಂದರಲ್ಲಿ ತುಂಡು ಮಾಡಿದ ಟೊಮೇಟೋ, ಮತ್ತೊಂದರಲ್ಲಿ ಸೀಳಿದ ಮೆಣಸಿನಕಾಯಿ. ಒಂದು ಪಾತ್ರೇಲಿ ಹುರಿದಿಟ್ಟ 250 ಗ್ರಾಂ. ಬ್ಯಾಂಬಿನೋ ಶ್ಯಾವಿಗೆ. ಈಗ ರಾಯರು ಒಲೆ ಮೇಲೆ ಬಾಣಲೆ ಇಟ್ಟು ಸುಮಾರು ಎಣ್ಣೆ ಸುರುವಿಕೊಂಡು "ಲೇ ಲತಾಮಣಿ. ಎಲ್ಲೆಲ್ಲಿ ಏನೇನಿದೆ ಹೇಳೇ, ಎಣ್ಣೆ ಕುದಿತಾ ಇದೆ" ಎಂದು ಆಲಾಪನೆ ಮಾಡ್ತ ನನ್ನ ಮುಖ ನೋಡಿದ್ರು. ನಂತರ ಬೆಂಕಿ (ಉರಿ) ಸಣ್ಣ ಮಾಡಲು ಹೇಳಿ ಸಾಂಬಾರ ಡಬ್ಬಿ ತೋರಿಸಿದೆ. ಒಂದಿಷ್ಟು ಸಾಸಿವೆ, ಉದ್ದಿನ ಬೇಳೆ, ಶೇಂಗಾಬೀಜ ತೆಗೆದು ಎಣ್ಣೆಗೆ ಹಾಕುತ್ತಾ "ಚಟಪಟ" ಅನ್ನುತ್ತಿದ್ದಂತೆಯೇ ಮೆಣಸಿನಕಾಯಿ, ಈರುಳ್ಳಿ, ಟೊಮೇಟೋ ಎಲ್ಲ ಸುರುವಿದರು. ಅದು ಬೆಂದ ತಕ್ಷಣ ನೀರು ಹಾಕಿದರು. ಉಪ್ಪು ಹಾಕಿ ಹುಳಿ ಹಿಂಡಿದರು.



ಬಿ.ಎಸ್. ವೆಂಕಟಾಚಲ ಭಟ್ಟ

ನೀರು ಹಾಕುವಾಗ ಇಬ್ಬರಿಗೆ ಸಾಕಾಗುವಷ್ಟು ಇರಲಿ ಅಂತ "ನೀರು ಸ್ವಲ್ಪ ಕಡಿಮೆ ಹಾಕಿ" ಎಂದು ಹೇಳಿ ನಾನು ಬೆಡ್ ರೂಮಿಗೆ ಹೋದೆ.

ಐದಾರು ನಿಮಿಷದ ನಂತರ "ಶ್ಯಾವಿಗೆ ಭಾತ್ ರೆಡಿ" ಅಂತ ಹೇಳ್ತಾ ರೂಮಿಗೆ ಬಂದರು. ಎಲ್ಲಿ? ಎಂದು ಕೇಳಿದ್ದಕ್ಕೆ "ಇರು ಎರಡು ನಿಮಿಷ, ನಿನಗೆಷ್ಟು ಬೇಕೋ ಅಷ್ಟು ಶ್ಯಾವಿಗೆ ಭಾತ್ ತಿನ್ನುವಿಯಂತೆ, ನೀರು ಆರಲಿ ಅಂತ ಮುಚ್ಚಿಟ್ಟು ಬಂದಿದ್ದೇನೆ" ಎಂದರು. ಮತ್ತೆರಡು ನಿಮಿಷದ ನಂತರ ಎರಡು ಪ್ಲೇಟು ತುಂಬಾ ಶ್ಯಾವಿಗೆ ಬಾತ್ ತುಂಬಿಕೊಂಡು ಬಂದು "ಮೊದ್ಲು ನೀನು ರುಚಿ ನೋಡಿ ಹೇಳು" ಎನ್ನುತ್ತಾ ಮುಖದ ಬಳಿ ಹಿಡಿದರು. ಒಳ್ಳೆ ಘಮಘಮ ಅನ್ನುತ್ತಿತ್ತು. ತಡ

ಮಾಡದೆ ಒಂದು ಚಮಚ ಬಾಯಿಗೆ ಹಾಕಿದ. ರುಚಿಯೇನೋ ಚೆನ್ನಾಗಿತ್ತು. ಆದ್ರೆ ಶ್ಯಾವಿಗೆ ಅರೆಬರೆ ಬೆಂದಿತ್ತು. ಯಾಕೆ ಹೀಗಾಯ್ತು ಅಂತ ನಮ್ಮ "ನಳ" ಮಹರಾಜರನ್ನು ಕೇಳಿದಾಗ, ಗಂಭೀರವಾಗಿ "ಅರೆ, ನೀನೇ ಅಲ್ವ ಹೇಳಿದ್ದು, ನೀರು ಸ್ವಲ್ಪ ಹಾಕಿ ಅಂತ, ನಂಗೇನ್ಗೊತ್ತು, ಇದು ಮೊದಲ ಬಾರಿಗೆ ಮಾಡ್ತಾ ಇರೋದು. ಅದೂ ಅಲ್ಲದೆ ನಿನಗೆ ಬಯಕೆ, ಜಾಸ್ತಿ ತಿನ್ನಲಿ ಅಂತ ಅಷ್ಟೂ ಶ್ಯಾವಿಗೆ ಹಾಕಿದೆ" ಅಂದರು. "ಪರವಾಗಿಲ್ಲ, ಈಗ ಇನ್ನೂ ಸ್ವಲ್ಪ ಬಿಸಿ ನೀರು ಹಾಕಿದ್ರೆ ಸರಿಹೋಗುತ್ತೆ, ಟ್ರೈ ಮಾಡಿ" ಎಂದೆ.

ಮತ್ತೆ ಅಡಿಗೆ ಮನೆಗೆ ಹೋಗಿ 10 (ಹತ್ತು) ನಿಮಿಷ ಆಗಿರಬಹುದು "ಏನೋ ಮಾಡಲು ಹೋಗಿ ಏನೋ ಆಯಿತು ಕೊನೆಗೆ" ಎಂದು ಹಾಡುತ್ತಾ ರೂಮಿಗೆ ಬರುತ್ತಾ "ಏ ಲತಾ, ಸ್ವಲ್ಪ ದ್ರಾಕ್ಷಿ ಗೋಡಂಬಿ, ಸಕ್ರೆ ಹಾಕಿ ಕುದಿಸ್ತಾ. ಒಳ್ಳೆ ಪಾಯಸ ಆಗುತ್ತೆ" ಅಂತ ಹೇಳ್ತಾ ಶ್ಯಾವಿಗೆ ಭಾತನ್ನು ಎರಡು ಲೋಟಕ್ಕೆ ಹಾಕಿಕೊಂಡು ಬಂದಿದ್ರು ನನ್ನವರು!

—ಲತಾ ವೆಂಕಟಾಚಲ ಭಟ್ಟ
ಹೊನ್ನಾವರ



## "ಅನ್ನ ಮತ್ತು ಮೆಣಸಿನ ಸಾರು"

ಅಡಿಗೆ ಸಹ ಒಂದು ಕಲೆ. ಅದರಲ್ಲಿ ಪರಿಣತಿ ಹೊಂದಲು ಸಾಕಷ್ಟು ಶ್ರಮ ಪಡಲೇ ಬೇಕು. ಸಾಮಾನ್ಯವಾಗಿ ಮಧ್ಯಮ ವರ್ಗದವರಿಗೆ ಎಲ್ಲಾ ತಾಪತ್ರಯಗಳು ಅಧಿಕ. ಆಗ ಹೋಟೇಲಿನ ಊಟ ದಿಂದ ಜೇಬಿಗೂ ಧಕ್ಕೆ! ಆರೋಗ್ಯಕ್ಕೂ ಧಕ್ಕೆ! ಅಂತಹ ಸಮಯದಲ್ಲಿ ಪರಿಸ್ಥಿತಿ ಗಂಡಸರನ್ನ ಅಡಿಗೆ ಮನೆಗೆ ತಳ್ಳುತ್ತದೆ. ಕೆಲವರು ಹೇಗೋ ನಿಭಾಯಿಸುತ್ತಾರೆ, ಮತ್ತೆ ಕೆಲವರು ಪಡುವ ಪಾಡು ಆ ದೇವರಿಗೇ ಪ್ರೀತಿ!

ತುಂಬಿದ ಮನೆಯಲ್ಲಿ ಕೊನೆಯವರಾಗಿ ಜನಿಸಿದ ನನ್ನ ಪತಿರಾಯರು ಓದಿದ್ದು, ಕೆಲಸಕ್ಕೆ ಸೇರಿದ್ದು



ಎಲ್ಲಾ ಒಂದೇ ಊರಿನಲ್ಲಿ. ಎಲ್ಲರಿಗೂ ಹೊತ್ತಿಗೆ ಸರಿಯಾಗಿ ರುಚಿ-ಶುಚಿಯಾಗಿ, ಊಟ, ತಿಂಡಿ, ಕಾಫಿ ಒದಗಿಸಲು ಮನೆಯಲ್ಲಿ ಸಾಕಷ್ಟು ಹೆಂಗಸರು ಇದ್ದದ್ದರಿಂದ, ಗಂಡಸರಿಗೆ ಅಡಿಗೆ ಮನೆ ಎಂದರೇನೆಂದೇ ತಿಳಿಯದು. ಅದರಲ್ಲೂ ಮುದ್ದಿನ ಮಗನಾದ ನನ್ನ ಪತಿರಾಯರಿಗೆ, ತೊಗರಿಬೇಳೆ ಮತ್ತು ಕಡಲೆಬೇಳೆ ಯಾವುದೆಂದು ಸಹ ತಿಳಿದಿರಲಿಲ್ಲ! ಯಾವುದೇ ಜವಾಬ್ದಾರಿ ಯಿಲ್ಲದೆ ಪುಸ್ತಕ ಪ್ರಿಯರಾಗಿ ಆರಾಮವಾಗಿದ್ದರು.

ನಮ್ಮ ಮದುವೆಯಾಗಿ 4-5 ವರ್ಷ ಕಳೆದ ನಂತರ, ಇವರಿಗೆ ಬೇರೆ ಊರಿಗೆ ವರ್ಗವಾಯಿತು. ಎಲ್ಲರಿಗೂ ಸ್ವಲ್ಪ ಬೇಸರವೆನಿಸಿದರೂ, ಮದುವೆ ಯಾಗಿರುವುದರಿಂದ ಊಟ-ಉಪಚಾರದ ಬಗ್ಗೆ ಚಿಂತಿಸಬೇಕಿಲ್ಲ, ಎಂದು ಸಮಾಧಾನ ತಾಳಿದರು. ಅದು ಇತ್ತ ಪಟ್ಟಣವೂ ಅಲ್ಲದ ಅತ್ತ ಹಳ್ಳಿಯೂ ಅಲ್ಲದ ಊರು. ಅಂತೂ ಹೊಸ ಊರಿನಲ್ಲಿ ದೊರಕಿದ ಮನೆಯಲ್ಲಿ ಹೊಸ ಸಂಸಾರ ಪ್ರಾರಂಭಿ ಸಿದೆವು. ಮನೆಯಲ್ಲಿ ನಾವಿಬ್ಬರೇ, ಇವರು ಮಾಮೂಲಿನಂತೆ ಕಚೇರಿ ಮತ್ತು ಪುಸ್ತಕದಲ್ಲಿ ಮುಳುಗಿರುತ್ತಿದ್ದರು. ಮನೆ ಸಾಮಾನು ಮತ್ತು ತರಕಾರಿ ತರುವುದರಿಂದ ಹಿಡಿದು ಎಲ್ಲಾ ಕೆಲಸಗಳನ್ನೂ ನಾನೇ ನಿಭಾಯಿಸುತ್ತಿದ್ದೆ. ಸುಮಾರು ಒಂದು ವರ್ಷ ಹೀಗೇ ಕಳೆದಿತ್ತು.

ಒಮ್ಮೆ ನಾನು ಅನಾರೋಗ್ಯದಿಂದ ಹಾಸಿಗೆ ಹಿಡಿದೆ. ಊರಿನಿಂದ ಯಾರನ್ನಾದರೂ ಕರೆಸಲು ಸಮಯಾವಕಾಶವಾದರೂ ಬೇಕಲ್ಲವೆ, ಹಾಗಾಗಿ ನನ್ನ ಸೇವೆಗೆ ಪತಿರಾಯರೇ ನಿಂತರು! ವೈದ್ಯರು ಬಂದು ನೋಡಿ "ಔಷಧಿ ನೀಡಿ, ಅನ್ನ ಮತ್ತು ಮೆಣಸಿನ ಸಾರು ಕೊಡಿ" ಎಂದು ಇವರಿಗೆ ತಿಳಿಸಿದರು.

"ಅದೇನು ಮಹಾ! ಈಗ ಮಾಡುತ್ತೇನೆ" ಎಂದು ಅಡಿಗೆ ಮನೆಗೆ ನಡೆದರು! ಆಯಾಸದಿಂದ ಮಲಗಿದ್ದ ನಾನು ಇವರಿಗೆ ಯಾವುದೇ ಮಾರ್ಗ ದರ್ಶನ ನೀಡಲು ಸಾಧ್ಯವಾಗಲಿಲ್ಲ. ಆಗ ಇನ್ನೂ ಕುಕ್ಕರ್ ಸಹ ಇರಲಿಲ್ಲ.

ನನ್ನ ಆರೋಗ್ಯ ಸುಧಾರಿಸಿದ ನಂತರ ನಳ ಮಹಾರಾಜರೇ ನೀಡಿದ ವಿವರಣೆ ಇದು. ಕಷ್ಟ ಪಟ್ಟು ಸೀಮೆ ಎಣ್ಣೆ ಸ್ಟವ್ ಹಚ್ಚಿ, ಪಾತ್ರೆಗೆ ಅಕ್ಕಿ ಮತ್ತು ನೀರನ್ನು ಹಾಕಿ ಒಲೆಯ ಮೇಲೆ ಇಟ್ಟರಂತೆ. ನಂತರ ಹಾಲ್‌ನಲ್ಲಿ ಕುಳಿತು ಒಂದು ಪುಸ್ತಕ ಹಿಡಿದರಂತೆ. ಅರ್ಧ ಗಂಟೆ ಬಿಟ್ಟು ಹೋಗಿ ನೋಡಿದಾಗ ನೀರು ಸಾಲದೆನಿಸಿ, ನೀರು ಹಾಕಿ ಮತ್ತೆ ಬಂದು ಕುಳಿತರಂತೆ. ಮತ್ತರ್ಧ ಗಂಟೆ ಕಳೆದು ನೋಡಿದಾಗ ನೀರು ಹೆಚ್ಚು ಎನಿಸಿ ಒಂದೆರಡು ಹಿಡಿ ಅಕ್ಕಿ ಹಾಕಿ ಬಂದು ಕುಳಿತರಂತೆ! ಇನ್ನರ್ಧ ಗಂಟೆ ಕಳೆದ ನಂತರ ನೋಡಿದಾಗ ಇನ್ನೂ ಸ್ವಲ್ಪ ನೀರು ಬೇಕೆನಿಸಿ ಹಾಕಿ ಬಂದರಂತೆ! ನಂತರ ಅರ್ಧ ಗಂಟೆ ಬಿಟ್ಟು ನೋಡಿದಾಗ ಅನ್ನ ಆಗಿದೆ ಎಂದೆನಿಸಿ ಕೆಳಗೆ ಇಟ್ಟರಂತೆ!

ನಂತರ ಸಾರು, ಹಿಂಗೆ ಹಸಿಮೆಣಸಿನಕಾಯಿ, ಕಿವುಚಿ, ಉಪ್ಪು ಹಾಕಿ ಕುದಿಸಿ, ಮೆಣಸಿನ ಸಾರು ತಯಾರಿಸಿದರಂತೆ!

ನನ್ನನ್ನು ಊಟಕ್ಕೆ ಕರೆದು ತಟ್ಟೆ ಇಟ್ಟು, ನನ್ನ ಎದುರಿಗೆ ಕುಳಿತರು. ಅನ್ನದ ಮುಚ್ಚಳ ತೆಗೆದರೆ, ಮೇಲಿನ ಭಾಗ ಕೆಂಪಗೆ ಸೀಕಲಾಗಿದೆ! ಇನ್ನು ಸಾರನ್ನು ನೋಡಿ ನನಗೆ ಗಾಬರಿಯಾಯಿತು! ಪರಿಸ್ಥಿತಿಯ ಅರಿವಾದ ಅಪರ ಮುಖ ನೋಡಿಯೇ ನನ್ನ ಹಸಿವು ಹಾಗೂ ಅನಾರೋಗ್ಯ ಓಡಿ ಹೋಯಿತು!

ಸುಮಾರು 8-10 ವರ್ಷಗಳ ನಂತರ ಇಂದಿಗೂ ಆ ದಿನವನ್ನು ಇಬ್ಬರೂ ಮರೆತಿಲ್ಲ.

ಆರ್.ಸುಶೀಲ ಶ್ಯಾಮಸುಂದರನ್
ಬೆಂಗಳೂರು-89



## "ಬದನೇಕಾಯಿ ಪ್ರಿಯ"

ಮನೆಯ ಒಳ ಹೊರಗಿನ ಎಲ್ಲಾ ಕೆಲಸ ಗಳಿಗೂ ಸಂಪೂರ್ಣ ಸಹಕಾರ ನೀಡುವ ನನ್ನವರ ಸ್ವಭಾವ ನನಗೆ ಅಚ್ಚುಮೆಚ್ಚು. (ದಯವಿಟ್ಟು ನೀವು ಅವರಿಗೆ ಈ ವಿಷಯ ಹೇಳದಿರಿ. ಆಮೇಲೆ ಜಂಭ



-ಮುಕುಂದರಾವ್

ಬಂದು ಬಿಟ್ಟೀತು) ಊಟ-ತಿಂಡಿ ವಿಷಯದಲ್ಲಿ ಮಾತ್ರ ಇಬ್ಬರಿಗೂ ಸ್ವಲ್ಪ ಅಷ್ಟಷ್ಟೆ. ಆಗೊಮ್ಮೆ -ಈಗೊಮ್ಮೆ ಸಣ್ಣ ಪುಟ್ಟ ವಾಗ್ವಾದಗಳು ನಡೆಯು ತ್ತಿರುತ್ತದೆ. (ಎಲ್ಲರ ಮನೆ ದೋಸೆ...ಅಲ್ಲವೇ) ಚಿಕ್ಕಂದಿನಿಂದಲೂ ನನಗೆ ಬದನೆಕಾಯಿ ಅಲರ್ಜಿ ನನ್ನವರಿಗೋ ಪಂಚಪ್ರಾಣ.

ಅದೊಂದು ದಿನ ರಾತ್ರಿಯ ಊಟಕ್ಕೆಂದು ಮೊಸರನ್ನ ರೆಡಿ ಮಾಡಿ, ಚಪಾತಿ ಹಿಟ್ಟು ಕಲಸಿ 'ಸಾಥಕ'ವನ್ನು ನಂತರ ತಯಾರಿಸಿದರಾಯ್ತೆಂದು ಮಕ್ಕಳ ಹೋಂವರ್ಕ್ ನೋಡುವಲ್ಲಿ ತಲ್ಲೀನ ಳಾಗಿದ್ದೆ. ನನ್ನವರು ಸದ್ದಿಲ್ಲದೆ ಅಡಿಗೆ ಮನೆ ಪ್ರವೇಶಿಸಿದ್ದರು.

"ಲಕ್ಷ್ಮಿ ಮೆಣಸಿನ ಪುಡಿ ಎಲ್ಲಿಟ್ಟಿದ್ದೀಯ, ಸ್ವಲ್ಪ ತೆಗೆದುಕೊಡು. ಬಾ ಇಲ್ಲಿ..." ಎಂದು ಕೂಗಿ ದಾಗಲೇ ಅಡಿಗೆ ಮನೆಯತ್ತ (....?....) ದಡಬಡಿಸಿ ಓಡಿದೆ. ಪಂಚೆ ಎತ್ತಿ ಕಟ್ಟಿ, ನಡುವಿಗೆ ಟವೆಲ್ ಸುತ್ತಿ ಕೆಲಸ ಮಾಡುತ್ತಿದ್ದ ನನ್ನವರನ್ನು ನೋಡಿ ನನಗೆ ನಗು ತಡೆಯಾಗಲಿಲ್ಲ. "ಯಾಕೇ ನಗ್ತೀಯ, ನಿಂಗೊಬ್ಬಳಿಗೇನಾ ಅಡಿಗೆ ಮಾಡೋಕೆ ಬರೋದು. ನೋಡ್ತಾ ಇರು. ಈವತ್ತು ಚಪಾತಿ

ಜೊತೆಗೆ ನಾನು ಮಾಡ್ತಾ ಇರೋ ಪಲ್ಯ ಹೇಗಿರುತ್ತೇಂತ. ಬೆರಳು ಕಚ್ಕೊಂಡು ತಿನ್ನಬೇಕು' ಅಂತ ಹೊಗಳಿಕೆ ಪ್ರಾರಂಭಿಸಿಯೇ ಬಿಟ್ಟರು. ಸಣ್ಣಕ್ಕೆ ಉದ್ದುದ್ದಕ್ಕೆ ನಾಜೂಕಾಗಿ ಹೆಚ್ಚಿದ್ದ ಈರನಗೆರೆ ಬದನೆಕಾಯಿ + ಈರುಳ್ಳಿಯನ್ನು ನೋಡಿದಾಗಲೇ ನನ್ನವರ ಕೌಶಲ್ಯದ ಅರಿವಾಗಿದ್ದು. ಪ್ರೆಷರ್ ಪ್ಯಾನ್‌ನಲ್ಲಿ ಒಗ್ಗರಣೆ ಹಾಕಿ ಈರುಳ್ಳಿ, ಬದನೆಕಾಯಿ ಹಾಕಿ ತಳ ಹತ್ತದಂತೆ ಕೈಯಾಡಿಸುತ್ತ ನಿಂತ ಅವರ ಭಂಗಿ ನೋಡಲು ಬಹು ಸೊಗಸು. ಮೆಣಸಿನ ಹುಡಿ, ಉಪ್ಪು. ಸ್ವಲ್ಪ ಹುಣಿಸೇ ಹಣ್ಣಿನ ರಸ ಹಾಕಿ ಬೇಯಿಸುತ್ತಿದ್ದ ಪಲ್ಯದ ವಾಸನೆ ಘಮ್ಮೆಂದು ಬರುತ್ತಿತ್ತು. ಮಕ್ಕಳಿಗೆ ತಂದೆಯ ಅಡಿಗೆಯ ಸವಿಯುಣ್ಣುವ ಆತುರ. ನನ್ನ ಮಗ ಆಗಲೇ ''ಏನಮ್ಮಾ ಅಣ್ಣನೇ ನಿಮಗಿಂತ ಚೆನ್ನಾಗಿ ಅಡಿಗೆ ಮಾಡ್ತಾರೇಂತ ಕಾಣುತ್ತೆ'' ಅಂತ. ಅಪ್ಪನ ಪರ ವಹಿಸಿದ್ದ ಸ್ವಲ್ಪ ಒಣಕೊಬ್ಬರಿಯೊಂದಿಗೆ ಹುರಿಗಡಲೆ ಪುಡಿಮಾಡಿ ಹಾಕಿ ಹದವಾಗಿ ಕೈಯಾಡಿಸಿ ಡೈನಿಂಗ್ ಟೇಬಲ್ ಮೇಲೆ ತಂದಿಟ್ಟ ವೈಖರಿ ನೋಡಬೇಕು. ಅಂದಿನ 'ಅವರ' ಕೈ ಅಡಿಗೆ ನಾಲಿಗೆಗೆ ಅಷ್ಟೇ ಸ್ವಾದಕೊಟ್ಟಿತ್ತು. ಇಂದು ಬದನೆಕಾಯಿ ನನಗೆ ಅವರಷ್ಟೇ ಅಚ್ಚುಮೆಚ್ಚಾಗಿದೆ. 'ಇವಳು, ಬದನೆಕಾಯಿ ತಿನ್ನಲು ಶುರುಮಾಡಿದ ಮೇಲೆ ನನಗೇನು ಮಿಗೋದೆ ಇಲ್ಲ' ಅಂತ ಬಂದವರ ಎದುರು ಚುಡಾಯಿಸದೆ ಬಿಡರು. ಜೊತೆಗೆ ಈಗ ನಿನ್ನ 'ವನಿತಾ' ಗೆ ಬರೆದು ಕಳುಹಿಸು ಅಂತ ನನ್ನವರ ವರಾತ. ನಿಮಗೆ ಬದನೆಕಾಯಿ ಅಪ್ರಿಯವೆನಿಸಿದರೆ ನಮ್ಮ 'ಶ್ರೇಯಸ್'ಗೆ (ಕನಸಿನ ಅರಮನೆ) ಬನ್ನಿ. ಇಲ್ಲವೆ ಸ್ವತಃ ತಯಾರಿಸಿ ನೋಡಿ.

$^1/_4$ ಕೆ.ಜಿ ಬದನೆಕಾಯಿ, $^1/_4$ಕೆ.ಜಿ. ಈರುಳ್ಳಿ, 2 ಚಮಚ ಮೆಣಸಿನಪುಡಿ, $1^1/_2$ಚಮಚ ಉಪ್ಪು 1 ಚಮಚ ಸಿದ್ಧಪಡಿಸಿದ ಹುಣಿಸೆ ಹಣ್ಣಿನ ಪುಡಿ-ಇಲ್ಲವೆ 2 ಚಮಚ ಹುಣಿಸೆ ಹಣ್ಣಿನ ರಸ. ಒಣ ಕೊಬ್ಬರಿಯೊಂದಿಗೆ ಹುರಿಗಡಲೆ ಸೇರಿಸಿ ಮಾಡಿದ ಪುಡಿ 3 ರಿಂದ 4 ಚಮಚ. ಹೆಚ್ಚಿಗೆ ಖರ್ಚಿಲ್ಲ. ಮಾಮೂಲಿ ಪಲ್ಯದಂತೆ ತಯಾರಿಸಿ. ಲೇಖನ ಅಚ್ಚಾದರೆ 'ನನ್ನವರ' ಪ್ರತಿಕ್ರಿಯೆ ಹೇಗಿರಬಹುದು? ನನಗೆ ಅವರು ಕೊಡುವ ಬಹುಮಾನ....

-ವರಲಕ್ಷ್ಮಿ ಮುಕುಂದರಾವ್
ಬೆಂಗಳೂರು-95



## ಬಿಸಿಬೇಳೆ ಭಾತಿನ ವೈಖರಿ

ಅಂದು ಬೆಳಿಗೆ ನನ್ನ ಅಣ್ಣನ ಮಗಳ ಮದುವೆಯ ನಿಶ್ಚಿತಾರ್ಥಕ್ಕೆ ನಾನು ರಾಜಾಜಿನಗರಕ್ಕೆ ಹೋಗಬೇಕಿತ್ತು. ಹೊರಡುವ ಮುನ್ನ ನನ್ನವರಿಗೆ ಹೇಳಿದೆ.

''ಪ್ರೆಷರ್ ಕುಕ್ಕರ್‌ನಲ್ಲಿ ಅನ್ನ ಮಾಡಿ, ಬೇಳೆ ಬೇಯಿಸಿ. ಹೆಚ್ಚು ಕಡಿಮೆ ಒಂದು ಗಂಟೆಗೆ ಬಂದ ಮೇಲೆ ಸಾರು ಮಾಡ್ತೀನಿ. ಬೇರೆ ಇನ್ನೇನು ಮಾಡಲು ತಲೆ ಕೆಡಿಸಿಕೋ ಬೇಡ.''



ಗೋವಿಂದರಾವ್

''ಅದೆಲ್ಲಾ ಬೇಡ. ಬಿಸಿಬೇಳೆ ಭಾತ್ ಮಾಡ್ತೀನಿ ಏನೇನು, ಎಷ್ಟೆಷ್ಟು ಹಾಕಬೇಕು ಹೇಳು'' ಇವರಿಗೆ ಬಿಸಿಬೇಳೆಭಾತಿನ ಚಪಲ. ಹೊರಡುವ ಸಂಭ್ರಮದಲ್ಲಿದ್ದೆ.

''ಪ್ರೆಷರ್ ಕುಕ್ಕರಿನಲ್ಲಿ ನೀರು ಹಾಕಿ ದೊಡ್ಡ ಬಟ್ಟಲಿನಲ್ಲಿ ನಾಲ್ಕು ಸಾರಿ. 1 ಪಾವು ಅಕ್ಕಿ 1 ಪಾವು ಬೇಳೆ, ದೇವರ ಮನೆಯಲ್ಲಿರೋ ಬಟ್ಟಲಿನ ತುಂಬ ಎಣ್ಣೆ, ಎರಡನೆ ಕಪಾಟಿನಲ್ಲಿರೊ ಡಬ್ಬದಲ್ಲಿರುವ ಪುಡಿ ಎರಡು ಚಮಚ, ಚಮಚ ಅದರಲ್ಲೇ ಇದೆ. ಸ್ಟೀಮ್ ಬಂದಾಗ ಕ್ಯಾಪ್ ಹಾಕಿ. ಪೇಪರ್ ಹಿಡಿದು ಮರೆತೀರಾ'' ಇಷ್ಟು ಹೇಳಿ ಮನೆಯಿಂದ ಸರಿದೆ.

ಸುಮಾರು 1-30ಕ್ಕೆ ಹಿಂತಿರುಗಿದೆ.

''ಎಲ್ಲ ಮುಗಿದಿದೆ. ಬೇಕಾದರೆ ಗೋಡಂಬಿ ಒಗ್ಗರಣೆ ಹಾಕು. ರುಚಿಯಾಗಿರುತ್ತೆ''

ನಮ್ಮವರ ಸಲಹೆಗೆ ಹೂಂ ಗುಟ್ಟಿದೆ. ಕುಕ್ಕರ್‌ನ ಮುಚ್ಚಳ ತೆಗೆದೆ. ಭಾತಿನ ಘಮಘಮವೇ ಇಲ್ಲ.

ಹಳದೀ ಬಣ್ಣ ''ಏನು ಮಾಡಿದೀರ. ಪುಡಿ ಯಾವುದು ಹಾಕಿದೀರ''

ಎರಡನೇ ಕಪಾಟಿನ ಡಬ್ಬಿ ತೋರಿಸಿದರು.

''ಭಾತಿನ ಡಬ್ಬ ಅದರ ಪಕ್ಕದ್ದು. ಅರಶಿನ ಹಾಕಿದ್ದೀರ''

ನಮ್ಮವರು ಕುಸಿದರು. ನಾನು ಸುಸ್ತು.

-ಶೀತ ಗೋವಿಂದರಾವ್
ಬೆಂಗಳೂರು-4



## ಅಡಿಗೆಯ ಗುಟ್ಟು

ಅಂದು ಭಾನುವಾರ ಮನೆಗೆಲಸ ಮುಗಿಸಿ ಸುಸ್ತಾಗಿ ಕುಳಿತಾಗ 12-30 ಆಗಿತ್ತು. ತಮ್ಮ ಮಿತ್ರನ ಮಗಳ ಹುಟ್ಟು ಹಬ್ಬಕ್ಕೆ ಉಡುಗೊರೆ ಖರೀದಿಸಿ ತರುವಂತೆ ಯಜಮಾನರು ಹೇಳಿದಾಗ ಕೆಂಡಾಮಂಡಲ ಕೋಪ. ಬೆಳಗಿನಿಂದ ಹೊರೆಗೆಲಸ. ವಿಶ್ರಮಿಸಿಕೊಳ್ಳೋಣವೆಂದರೆ ಮಧ್ಯಾಹ್ನದ ಅಡಿಗೆ ತಯಾರಿಸಬೇಕಿತ್ತು. ವಿಶ್ರಾಂತಿ ಎನ್ನುವುದು ಮಧ್ಯಮ ವರ್ಗದ ಗೃಹಿಣಿ ಪಾಲಿಗೆ ಮರೀಚಿಕೆ ಏನೋ. ಮಧ್ಯಾಹ್ನದ ಅಡಿಗೆ ಹೊಣೆ ತನ್ನದೆಂದು, ಈಗಲೇ ಹೋಗಿ ಉಡುಗೊರೆ ಖರೀದಿಸಿ ತರುವಂತೆ ಒತ್ತಾಯಿಸಿದಾಗ ಒಂದು ಕ್ಷಣ ಎದೆ ಧಸಕ್ಕೆಂದಿತು. ಖಾರದ ಪುಡಿಗೂ, ಅರಶಿನ ಪುಡಿಗೂ ವ್ಯತ್ಯಾಸ ಗೊತ್ತಿಲ್ಲದ ನಮ್ಮವರು ನಳಪಾಕ ಇಳಿಸುವುದನ್ನು ನೆನಸಿಕೊಂಡು ಬೆಚ್ಚಿ ಬೀಳುವಂತಾಯಿತು. ಒಳಗೊಳಗೆ ಖುಷಿ. ಅನುಭವಿಸಲಿ. ಹೇಗೆ ಅಡಿಗೆ ಮಾಡಿದರೂ ಒಂದೊಂದು ಹೆಸರಿಡುತ್ತಾರೆ. ಒಂದು ದಿನ ತಾನೇ ತಯಾರಿಸಿದಾಗಲೇ ಅದರ ಕಷ್ಟ ಗೊತ್ತಾಗುವುದು. ಅಣಕಿಸಲು ಬಂದ ಅವಕಾಶ ಬಿಡುವುದುಂಟೇ.

ಉಡುಗೊರೆ ಖರೀದಿಸಿ ಮನೆಗೆ ಬಂದಾಗ ವೇಳೆ 3.30 ಆಗಿತ್ತು. ಹೊಟ್ಟೆ ಒಳಗೆ ನರ್ತನ ಪ್ರಾರಂಭ. ಅಯ್ಯೊ! ಇನ್ಯಾವ ಗ್ರಹಚಾರ ಕಾದಿದೆಯೋ ಈ ಜಿಹ್ವೆಗೆ. 'ನನ್ನದು ಊಟವಾಯಿತು. ನೀನು ಮಾಡು ಹೋಗು' ಎಂದಾಗ ಅವರನ್ನು ತಿಂದು ಬಿಡುವಷ್ಟು ಕೋಪ. ಅಡಿಗೆ ಮನೆ ಹೊಕ್ಕಾಗ ಕಂಡದ್ದು ಮೇಜಿನ ಮೇಲೆ ಜೋಡಿಸಿಟ್ಟ ಹುಡಿಹುಡಿಯಾದ ಅನ್ನದ ಪಾತ್ರೆ, ಹುಳಿ, ತಿಳಿಸಾರು, ಘಮ್ಮೆನ್ನುವ ಹುರುಳಿಕಾಯಿ ಪಲ್ಯ, ಎಣ್ಣೆಯಲ್ಲಿ ಕರಿದ ಹಪ್ಪಳ ನಾಲಿಗೆ ರುಚಿ ನೋಡಿದ್ದೇ ತಡ 'ಅಬ್ಬಾ ಎಂತಹ ಸೊಗಸು'. 'ಏನ್ರಿ ನೀವೇ ತಾನೇ ಈ ಅಡಿಗೆ ಮಾಡಿದ್ದು' ಅನುಮಾನಿಸಿದವಳಿಗೆ 'ದಿಢೀರ್ ಉತ್ತರ' ''ಈ



ಗೋವಿಂದರಾಜು

ಗುಟ್ಟು ಬಿಟ್ಟು ಕೊಟ್ಟರೆ ನೀವು ಹೆಂಗಸರು ಶಾಶ್ವತವಾಗಿ ಅಡಿಗೆ ಮನೆಯಲ್ಲಿ ನಮ್ಮನ್ನು ಕೂಡಿ ಹಾಕುವಿರೆಂದೇ ಇದುವರೆವಿಗೂ ಮುಚ್ಚಿಟ್ಟದ್ದು. ಹೇಗಿದೆ ರುಚಿ. ಅಡಿಗೆ ಎಂದರೆ ಬ್ರಹ್ಮ ವಿದ್ಯೆ ಎನ್ನುವಂತೆ ಹಾರಾಡುತ್ತಿದ್ದೆಯಲ್ಲ. ಈಗ ನೋಡು 2-3 ಗಂಟೆಯಲ್ಲಿ ಎಷ್ಟು ತರ ನಾನೊಬ್ಬನೇ ಮಾಡಿದ್ದೇನೆ. ಈ ಹೆಂಗಸರಿಗೆ ಅಡಿಗೆ ತಯಾರಿಸುವಲ್ಲಿ ತಮ್ಮನ್ನು ಮೀರಿಸುವವರಿಲ್ಲ ಎಂಬ ಅಹಂ ಬೇರೆ. ನೋಡು ಇದೇ ಕೊನೆ. ಇನ್ನೆಂದು ಅಡಿಗೆ ಮನೆಗೆ ನನ್ನನ್ನು ಹಚ್ಚಬೇಡ' ಎಂದು ಕೈ ಮುಗಿದಾಗ ಉಕ್ಕಿ ಬರುತ್ತಿದ್ದ ನಗುವನ್ನು ತಡೆಯದಾದೆ

(36 ನೇ ಪುಟ ನೋಡಿ)

ಮಿನಿ ಕತೆ:

# ಗಾಳೀಪಟ



ಮಗನಿಗೆ ಬೂಟು ಹಾಕುತ್ತಾ "ಏಳು ಪುಟ್ಟ ಬೇಗ. ಚೀಲ ತೆಗೆದುಕೊ. ಶಾಲೆಗೆ ಹೊತ್ತಾಗತ್ತೆ" ಎಂದೆ. ಎಂದಿನಂತೆ ಸ್ವಲ್ಪ ರಗಳೆ, ಲಂಚ ವಸೂಲಿಯ ನಂತರವೇ ಹೊರಡುವುದು. ಇನ್ನೇನು ಹೊರಡಬೇಕೆನ್ನಲು 'ಟಕ್ ಟಕ್' ಬಾಗಿಲು ತಟ್ಟಿದ ಸದ್ದು. ಹಿಂದೆ ನೋಡಿರದ ಸುಮಾರು 5–6 ವರ್ಷದ ಹುಡುಗಿ ಕೈಯಲ್ಲೊಂದು ಪ್ಲಾಸ್ಟಿಕ್ ಕೊಡ ಹಿಡಿದು ನಿಂತಿದ್ದಳು. ಬಾಗಿಲಲ್ಲಿ. ಕೊಳೆ ಲಂಗ, ಒರಟಾದ ಕೂದಲು, ಕಂದು ಮೈಬಣ್ಣ, ಬಡಕಲು ಶರೀರ. ಆದರೂ ಹೊಳೆಯುವ ಕಣ್ಣುಗಳು, ಚೂಪುಗಲ್ಲ ಚುರುಕುತನವನ್ನು ಸೂಸುತ್ತಿದ್ದವು. ಕೊಡವನ್ನು ನನ್ನ ಕೈಗಿತ್ತು. ನೀರು ಬೇಕೆಂದು ಸಂಜ್ಞೆ ಮಾಡಿದಳು. ಆತುರದಲ್ಲಿದ್ದ ನಾನು ನೀರುಕೊಟ್ಟು ಮಗನನ್ನು ಕರೆದುಕೊಂಡು ಹೊರಟೆ. 'ಅಯ್ಯೋ ಪಾಪ ಹುಡುಗಿ ಮೂಕಿ' ಎಂದು ನೊಂದೆ.

ಹೀಗೆರಡು ದಿನಗಳ ನಂತರ– ಮತ್ತೆ ಅದೇ ಬೆಳಗಿನ ಸಮಯ ಆ ಹುಡುಗಿ ಹಾಜರಿದ್ದಳು. ಅದೇ ಸಮಯಕ್ಕೆ 'ನನಗೆ ಐಸ್‌ಕ್ರೀಮ್ ಬೇಕು' ಎಂದು ಹಠ ಹಿಡಿದ ನನ್ನ ಪುತ್ರ, ಕೇಳುತ್ತಲೇ ಆ ಹುಡುಗಿಗೆ ಖುಷಿಯೋ ಖುಷಿ. 'ಅವ್ವಾರೇ, ನೀವೂ ನಮ್ಹಂಗೆ ಮಾತಾಡ್ತಿರಲ್ರೀ' ಎಂದಳು. ಈ ಹಿಂದಿ ಪ್ರದೇಶದಲ್ಲಿ ಕನ್ನಡ ಭಾಷೆ ಕೇಳಿ ಸಂತಸಗೊಂಡಿತ್ತು ಆ ಹುಡುಗಿ. ಹಿಂದಿನ ದಿನದ ಕೈ ಸನ್ನೆ ಈಗ ನನಗೆ ಅರ್ಥವಾಗಿತ್ತು.

"ಹೆಸರೇನು ?" ಕೇಳಿದೆ.

"ಮಮ್ತಾ (ಮಮತಾ) ಹಿಂವಾಗಡಿ ಹಟ್ಟೀಲಿದ್ದೀವ್ರಿ" ಎಂದಳು. ಅವಳಿಗೂ ಒಂದು ಚಾಕೊಲೇಟ್ ಕೈಗಿತ್ತು ಕಳಿಸಿದೆ.

ಹೀಗೆಯೇ ನಂಟು ಬೆಳೆಯಿತು. ಆ ದಿನ ನನ್ನವರು ದಿಲ್ಲಿಯಿಂದ ಆಗ ತಾನೇ ಬಂದಿದ್ದು, ವಿಮಾನದಲ್ಲಿ ಕೊಟ್ಟ ಚಾಕೋಲೇಟ್‌ಗಳನ್ನು ಮೇಜಿನ ಮೇಲಿಟ್ಟಿದ್ದರು. ಎಂದಿನಂತೆ ಮಮತಾ ಬರುತ್ತಲೂ ನನ್ನ ಮಗ ಅವಳಿಗೊಂದು ಕೊಟ್ಟು ತಾನೂ ಬಾಯಿಗೆ ಹಾಕಿಕೊಂಡ. ಅವಳು ಅದನ್ನೂ ಹಿಂದೆ ಮುಂದೆ ತಿರುಗಿಸಿ, 'ಅಯ್ಯಾ ಈ ಮುತಾಯಿ (ಮಿಠಾಯಿ) ಬ್ಯಾರೆತರ ಐತಲ್ರೀ' ಎಂದಳು. 'ಪಪ್ಪ ಏರೋಪ್ಲೇನಿಂದ ತಂದ್ರು' ಎಂದುಲಿದ ನನ್ನ ಸುಪುತ್ರ. ಈ ತರಹ ದಿನಾ ಅವಳ ಪ್ರಶ್ನೆಗಳ ಮಾಲೆ ಇರುತ್ತಿತ್ತು. ಅವಳನ್ನು ಗಮನಿಸಿದ ನನ್ನವರು, "ರಾಧಾ, ನಮ್ಮ ಪುಟ್ಟನ ಜೊತೆ ಆ ಮಗುವಿಗೂ ಸ್ವಲ್ಪ ಪಾಠ ಕಲಿಸು" ಎಂದರು. ನನ್ನ ಉದಾಸೀನತೆಯನ್ನು ಗಮನಿಸಿ, "Full many a flower is born to blush unseen and waste its fragrance in the desert air ಸಮಾಜ ಸೇವೆ, ಜನಸೇವೆ ಎಂದು ಭಾಷಣ ಬಿಗಿಯುತ್ತೀಯಲ್ಲೇ ನನ್ನ ಹುಡುಗಿ" ಎಂದು ಹಂಗಿಸಿದರೂ ಕೂಡ. 'ಹೌದು' ನನ್ನವರು ಹೇಳಿದ್ದು ಸರಿ. ನನ್ನ ಮನಸ್ಸು ಸ್ವೀಕರಿಸಿತ್ತು.

ಮರುದಿನದಿಂದಲೇ ಮಮತಳಿಗೆ ಪಾಠವನ್ನಾರಂಭಿಸಿದ್ದೆ. 'ಶ್ರೀ ಗಣಪತಯೇ ನಮಃ' ಪೂರ್ವ ಜನ್ಮದ ಸಂಸ್ಕಾರವೊ ಏನೋ ಆ ಅವಿದ್ಯಾವಂತ ದಂಪತಿಗಳ ಕೂಸು ಶಾರದೆಯಂತೆ, ಹೆಜ್ಜೆ ಹೆಜ್ಜೆಗೂ ಪ್ರಶ್ನೆಗಳು. ಕೆಲವೊಮ್ಮೆ ದಿಗಂತದತ್ತ ನೋಡುತ್ತಿರುತ್ತಿದ್ದಳು ತದೇಕಚಿತ್ತಳಾಗಿ. ಹೀಗೆ ದಿನಗಳು ಕಳೆದವು.

ನನ್ನವರು ಪ್ರವಾಸ ಹೋದಾಗಲೆಲ್ಲ ನಮ್ಮ ಪುಟ್ಟನ ಜೊತೆ ಆ ಹುಡುಗಿಗೂ ಏನಾದರೂ ತರುತ್ತಿದ್ದರು. ಸಂಕ್ರಾಂತಿ ಸಮಯ—ಅಹಮದಾಬಾದಿನಿಂದ ಬಣ್ಣ ಬಣ್ಣದ ಗಾಳೀಪಟಗಳನ್ನು ತಂದಿದ್ದರು. ಅದನ್ನು ಹಾರಿಸುವಾಗ ಎಲ್ಲಿಲ್ಲದ ಉತ್ಸಾಹ ಮಮತಳಿಗೆ. ಈಗ ನಾನು 'ಅವ್ವ' ಹೋಗಿ 'ಅಮ್ಮಾ' ಆಗಿದ್ದೆ. 'ಈ ಗಾಳಿಪಟದ ಹಾಗೆ ನಾವೂ ಮೇಲೆ ಹಾರಬೇಕು. ಎಷ್ಟು ಚಂದ ಅಲ್ಲವಾ ಅಮ್ಮ' ಎಂದಿದ್ದಳು ಮುಗ್ಧವಾಗಿ.

ನಂತರ ಎರಡನೇ ಹೆರಿಗೆಗೆ ತವರಿಗೆ ಹೋಗಿದ್ದೆ. ಪುಟ್ಟನಿಗೊಬ್ಬ ಪುಟ್ಟ ತಮ್ಮನನ್ನು ಮಡಿಲಲ್ಲಿಟ್ಟುಕೊಂಡು ಹಿಂತಿರುಗಿ ಬರುವಾಗ 3–4 ತಿಂಗಳುಗಳೇ ಸಂದಿದ್ದವು. ಈ ಅವಧಿಯಲ್ಲಿ ಮಮತಾ ಯಾವ ಊರಿಗೆ ಹೋಗಿದ್ದಳೋ ತಿಳಿಯಲಿಲ್ಲ. 'ಅವರಿದ್ದ ಗುಡಿಸಲು ಮುಚ್ಚಿದೆ' ಎಂದರು ನನ್ನವರು. ಏನೋ ಅಮೂಲ್ಯವಾದ ವಸ್ತುವನ್ನು ಕಳೆದುಕೊಂಡಂತೆ ಭಾಸವಾಯಿತು. ಆ ಹುಡುಗಿಯನ್ನು ಚೆನ್ನಾಗಿ ಓದಿಸಿ ಮುಂದೆ ತರಬೇಕೆಂಬ ನನ್ನ ಆದರ್ಶ ಚಿವುಟಿ ಹೋಗಿತ್ತು. 'ನಾನು ಮಾಡುವೆ' ಎಂಬ ನನ್ನ 'ಅಹಂ'ಗೆ ಪೆಟ್ಟು ಬಿದ್ದಿತ್ತು.

ಸಮಯ ಕಳೆದಂತೆ ನೆನಪಿನಂಗಳದಲ್ಲಿ ಎಲ್ಲ ಮಸಕು-ಮಸಕು. ಮಕ್ಕಳು ಬೆಳೆದು ಅವರವರ ಓದು-ಬರಹದಲ್ಲಿ ತಲ್ಲೀನರಾಗಿದ್ದರು. ನನ್ನವರಿಗೆ ಆಫೀಸೇ ದೇಗುಲ. ಪುರುಸೊತ್ತಿಲ್ಲ. ಅನೇಕ ಬಾರಿ ಒಂಟಿತನ ಬಹುವಾಗಿ ಕಾಡುತ್ತಿತ್ತು. ಹತ್ತಿಕ್ಕಲು ಹಲವಾರು ಚಟುವಟಿಕೆಗಳನ್ನು ಅಳವಡಿಸಿಕೊಂಡಿದ್ದೆ. ಆದರೂ ಇಂದೇಕೋ ಯಾವುದರಲ್ಲೂ ಮನ ನಿಲ್ಲುತ್ತಿಲ್ಲ. ಬಿಸಿಲಿನ ಪ್ರಭಾವವೋ ಅಥವಾ ಏನೋ, ಫ್ಯಾನಿನ ಬಿಸಿಗಾಳಿಗೆ ಬೇಸತ್ತು ವರಾಂಡದಲ್ಲಿ ಆರಾಮಾಸನದಲ್ಲಿ ಕುಳಿತೆ. ಅಬ್ಬ ಎಷ್ಟು ಸಂವತ್ಸರಗಳು ಕಳೆದಿವೆ! ಪ್ರಜೋತ್ಪತ್ತಿ ಸಂವತ್ಸರದ ಕೊನೆಯ ಕೆಲವು ದಿನಗಳು! ಈ ಜೀವನದಲ್ಲಿ ಸಾಧಿಸಿದ್ದೇನು? ಉತ್ತರ ಸೊನ್ನೆ. ಬದುಕು ವ್ಯರ್ಥವೆನಿಸಿತು.

ಗೇಟು ತೆರೆದ ಸದ್ದು—ಆಕಾಶ ನೀಲಿ ಸೀರೆ, ಕಪ್ಪು ರವಿಕೆಯ ಮೇಲೆ ಕನ್ನಡಿಯ ಕಸೂತಿ ಕೆಲಸ, ಬಣ್ಣದ ಛತ್ರಿ, ಜಂಬದ ಚೀಲ ಹಿಡಿದ ಸುಮಾರು 20–22 ರ ತರುಣಿ ಒಳಬಂದಳು. ಕೂದಲನ್ನು ಬಾಚಿ ಕ್ಲಿಪ್ ಹಾಕಿದಳು. ಹಿತವಾದ ಅಲಂಕಾರ. ಕನ್ನಡಕ ತೆಗೆದು ಬೆವರೊರೆಸಿಕೊಳ್ಳುತ್ತಾ, 'ಅಮ್ಮಾ' ಎಂದಳು. ಎಲ್ಲಿಂದಲೋ ತೇಲಿ ಬಂದಂತಿತ್ತು ಆ ದನಿ. ಗುರುತು ಹತ್ತಲಿಲ್ಲ. ಅವಳೇ 'ಅಮ್ಮ, ನಾನು-ನಿಮ್ಮ ಮಮತಾ. ನಾನೀಗ 'ಗಗನಸಖಿಯಾಗಿ' ಕೆಲಸ ಮಾಡುತ್ತಿದ್ದೀನಿ. ಆ ದಿನ ನೀವು ಗಾಳೀಪಟ, 'ವಿಮಾನ ಚಾಕೊಲೇಟ್' ಕೊಡದಿದ್ದಿದ್ದರೆ...ಅವಳ ಗಂಟಲು ತುಂಬಿ ಬಂತು. 'ನನ್ನ ಆಸೆಗೆ ಇಂಬು ಕೊಟ್ಟು, ಪ್ರೋತ್ಸಾಹಿಸಿದ ದೇವರು ನೀವು, ಹಾಗೂ ಡ್ಯಾಡಿ', ಎಂದು ನನ್ನ ಪಾದ ಮುಟ್ಟಿ ನಮಸ್ಕರಿಸಿದಳು. ನಾನು ಮೂಕಳಾದೆ. ತನ್ನೆಲ್ಲ ಅನುಭವಗಳನ್ನು ಹೇಳುತ್ತಾ ಹೆಜ್ಜೆ ಹೆಜ್ಜೆಗೂ ಕೃತಜ್ಞತೆಯ ಭಾವವನ್ನು ಸೂಸುತ್ತಿದ್ದಳು. ಮತ್ತೆ ಬರುವುದಾಗಿ ಹೇಳಿದ ಅವಳನ್ನು ಬೀಳ್ಕೊಡುವಾಗ ಆನಂದ ಬಾಷ್ಪ, ನನ್ನ ಭಾವನೆ ಬದಲಾಗಿತ್ತು. ಈ ಜನ್ಮ ವ್ಯರ್ಥವೆನಿಸಲಿಲ್ಲ. ಸಾರ್ಥಕತೆಯನ್ನು ಪಡೆದ ಮನೋಭಾವ ತುಂಬಿ ಮುದಗೊಂಡೆ.

—ರತ್ನಾ ಶಾಸ್ತ್ರಿ, ಮುಂಬಯಿ

## ನಾಗ ಪಂಚಮಿ

ಶ್ರಾವಣದ ಹಬ್ಬಗಳಲ್ಲಿ ನಾಗ ಪಂಚಮಿಯೇ ಮುಖ್ಯ. ಇದರಲ್ಲಿ ನಾಗ [ಹಾವು] ಪೂಜೆಗೆ ಅಗ್ರ ಸ್ಥಾನ. ವಸ್ತುತಃ ನಾಗಪೂಜೆ, ನಾಗರ ಹಾವಿನ ಭಯಂಕರ ವಿಷದ ಭಯವನ್ನು ತಪ್ಪಿಸುವುದಕ್ಕಾಗಿಯೇ ಆರಂಭವಾಗಿರಬೇಕು.

ಆರ್ಯ ದ್ರಾವಿಡ ಎರಡೂ ಸಂಸ್ಕೃತಿಗಳ ಸಂಗಮವಾದ ನಾಗಪಂಚಮಿ ಹಬ್ಬ ಬಹಳ ವೈಶಿಷ್ಟ್ಯಪೂರ್ಣವಾದುದು. ವಿಷ್ಣುವಿನ ಹಾಸಿಗೆ, ಶಿವನ ಆಭರಣ, ಗಣಪತಿಯ ಹೊಟ್ಟೆಕಟ್ಟು ಮೊದಲಾಗಿ ನಾಗಗಳಿಗೆ ದೇವತೆಗಳ ಸಾನ್ನಿಧ್ಯ ಸಿಕ್ಕಿರುವುದನ್ನು ಗಮನಿಸಬಹುದಾಗಿದೆ.

ನಾಗಪೂಜೆಯ ಪೌರಾಣಿಕ ಕಥೆಗಳ ಹಿನ್ನೆಲೆಯಲ್ಲಿ ಜನಾಂಗಗಳ ಇತಿಹಾಸವೂ ತೋರುವುದು. ಮಹಾಭಾರತ ಕಾಲದಲ್ಲಿ 'ನಾಗ' ಜನಾಂಗದ ವಿಷಯ ಬರುತ್ತದೆ. ಮಧ್ಯಮಪಾಂಡವ ಅರ್ಜುನ ಉಲೂಪಿ, ಚಿತ್ರಾಂಗದೆ ಎಂಬ ನಾಗಕನ್ಯೆಯರ ಕೈ ಹಿಡಿದ ಕಥೆ ಪ್ರಸಿದ್ಧವಾಗಿದೆ.

ಮುಂದೆ ನಾಗರಿಗೂ ಆರ್ಯರಿಗೂ ವೈರ ಬೆಳೆಯಿತು. ನಾಗರಾಜ ತಕ್ಷಕ, ಪರೀಕ್ಷಿತ ರಾಜನನ್ನು ಕಚ್ಚಿಕೊಂದ. ಪರೀಕ್ಷಿತನ ಮಗ ಜನಮೇಜಯ ನಾಗವಂಶವನ್ನೇ ಸುಟ್ಟುಹಾಕಲು ಸರ್ಪಯಾಗವನ್ನು ಆರಂಭಿಸಿದ. ಆಸ್ತಿಕ ಋಷಿಯು ಮಧ್ಯಸ್ತಿಕೆ ವಹಿಸಿದ ಮೇಲೆ ಜನಮೇಜಯನ ಕೋಪ ಇಳಿಯಿತು. ತಕ್ಷಕ ತನ್ನ ವಿಷವನ್ನು ಹೀರಿಕೊಂಡು ಪರೀಕ್ಷಿತನನ್ನು ಬದುಕಿಸಿದ. ಅಂದಿನಿಂದ ಆರ್ಯರು ನಾಗನಿಗೆ ಮನ್ನಣೆಯನ್ನು ಕೊಟ್ಟು ನಾಗಪೂಜೆಯನ್ನು ಆಚರಿಸ ತೊಡಗಿದರು.

ಹಿಂದುಗಳೆಲ್ಲರೂ ನಾಗಪೂಜೆಯನ್ನು ಸಂಭ್ರಮ ದಿಂದ ಆಚರಿಸುತ್ತಾರೆ. ಪೂಜೆಗಾಗಿ ಕಲ್ಲಿನ ಇಲ್ಲವೆ ಮಣ್ಣಿನ ನಾಗನನ್ನು ಹೂವು, ಕೇದಗಿ, ಹಂಗ ನೂಲು, ಅರಿಶಿಣ ಕುಂಕುಮಗಳಿಂದ ಸಿಂಗರಿಸಿ, ಬಳಿಕ ಪೂಜಿಸಿ, ಅದಕ್ಕೆ ಅರಳಿಟ್ಟು, ತಂಬಿಟ್ಟು ಹಲವು ತರದ ಉಂಡಿ ಉಸಳಿಗಳ ನೈವೇದ್ಯ ಸಲ್ಲಿಸುವರು.

ಆಮೇಲೆ ಒಬ್ಬೊಬ್ಬರಾಗಿ ಹಾಲೆರೆಯುತ್ತ ತಮ್ಮ ತಮ್ಮ ಇಷ್ಟಾರ್ಥಗಳನ್ನು ಬೇಡಿಕೊಳ್ಳುವರು. ನಂತರ ಊಟ–ಉಪಹಾರಗಳನ್ನು ಮುಗಿಸಿ, ಈ ಹಬ್ಬದ ವೈಶಿಷ್ಟ್ಯದಂತೆ, ಜೋಕಾಲಿ ಜೀಕುವರು. ತಮಿಳು ನಾಡಿನಲ್ಲಿ ಕೆಲವೆಡೆ ಈ ಹಬ್ಬಕ್ಕಾಗಿಯೇ ಜೀವಂತ ಹಾವುಗಳನ್ನು ಸಾಕುತ್ತಾರಂತೆ.

ಮಹಾತ್ಮಾ ಗಾಂಧಿ ಹಾವನ್ನು 'ಕ್ಷೇತ್ರ ಪಾಲಕ' ಎನ್ನುತ್ತಿದ್ದರು.

ನಾಗಪೂಜೆಯ ಕುರಿತು ಪುರಾಣಗಳ ಕಟ್ಟು ಕತೆಯೊಂದು ಹೀಗಿದೆ. ಒಬ್ಬ ಒಕ್ಕಲಿಗ ನೇಗಿಲು ಹೊಡೆಯುತ್ತಿದ್ದಾಗ ಗುಳಕ್ಕೆ ಸಿಕ್ಕಿ ಹಾವಿನ ಮರಿಗಳು ಸತ್ತು ಹೋದವು. ರೊಚ್ಚಿಗೆದ್ದ ತಾಯಿ ಹಾವು ಅಂದು ರಾತ್ರಿ ಒಕ್ಕಲಿಗನ ಮನೆಯವರನ್ನೆಲ್ಲಾ ಕೊಂದಿತು. ಅಷ್ಟಕ್ಕೆ ಅದರ ಸೇಡು ಶಮನವಾಗದೆ, ದೂರದ ಅತ್ತೆ ಮನೆಯಲ್ಲಿದ್ದ ಒಕ್ಕಲಿಗನ ಮಗಳನ್ನು ಸಾಯಿಸಲು ಸಾಗಿತು. ನಾಗಿಣಿ ಅಲ್ಲಿ ಹೋಗಿ ನೋಡಿದಾಗ, ಒಕ್ಕಲಿಗನ ಮಗಳು ಮಣ್ಣಿನ ನಾಗನನ್ನು ಪೂಜಿಸುತ್ತಿದ್ದಳು. ಇದರಿಂದ ಶಾಂತವಾದ ನಾಗಿಣಿ ಅವಳ ತವರಿನವರನ್ನೆಲ್ಲಾ ಬದುಕಿಸಿತು.

ಇದರಂತೆಯೇ ಹಳ್ಳಿಯ ಕಥೆಯೊಂದರ ಪ್ರಕಾರ; ಅತ್ತೆಯ ಮನೆಯಲ್ಲಿದ್ದ ತಂಗಿಯನ್ನು ಕರೆಯಲು ಅಣ್ಣ ಚಕ್ಕಡಿ ತಕ್ಕೊಂಡು ಹೋದ. ಅಣ್ಣ ಕಡು ಬಡವ; ತಂಗಿ ಸಿರಿವಂತೆ.

ಮೈ ತುಂಬ ಆಭರಣಗಳನ್ನು ಇಟ್ಟುಕೊಂಡು ತನ್ನೊಡನೆ, ಹೊರಟ ತಂಗಿಯನ್ನು ಕಂಡು ಅವನ ಮನದಲ್ಲಿ ದುರಾಲೋಚನೆ ಹುಟ್ಟಿ, ಊರ ದಾರಿಯನ್ನು ಬಿಟ್ಟು ಕಗ್ಗಾಡಿನಲ್ಲಿ ಚಕ್ಕಡಿಯನ್ನು ಒಯ್ದ. ಸಂಪತ್ತಿಗಾಗಿ ಸೋದರಿಯನ್ನು ಕೊಲ್ಲುವುದಕ್ಕಾಗಿ ದೊಡ್ಡದೊಂದು ಕಲ್ಲನ್ನು ಎತ್ತಿದ. ಅದರ ಕೆಳಗಿದ್ದ ನಾಗರಹಾವು ಅವನನ್ನು ಕಚ್ಚಿತು. ಅವನು ಅಲ್ಲಿಯೇ ಸತ್ತುಬಿದ್ದ.

ತಂಗಿ ನಾಗನನ್ನು ಪ್ರಾರ್ಥಿಸಿ ಅಣ್ಣನ ಪ್ರಾಣವನ್ನು ಪಡೆದಳು. ಆಗ ಶ್ರಾವಣ ಶುದ್ಧ ಚೌತಿ ದಿವಸವಾಗಿತ್ತು.

ಕಥೆಗಳೇನೇ ಇರಲಿ. ನಾಗಪಂಚಮಿ ಹೆಚ್ಚಾಗಿ ಹೆಣ್ಣು ಮಕ್ಕಳ ಹಬ್ಬ. ಅತ್ತೆಯ ಮನೆಯ ಮೊದಲಗಿತ್ತಿಯರು ತಪ್ಪದೆ ತವರು ಮನೆಗೆ ಬಂದು ಆನಂದದಿಂದ ನಾಗಪಂಚಮಿಯನ್ನು ಆಚರಿಸುತ್ತಾರೆ.

ಎಚ್. ಎಂ. ಗೀತಾ, ಕೋಗಲೂರು

# ಸಂಮೋಹಿನಿ ಚಿಕಿತ್ಸೆ

ಡಾ। ಉಷಾ ರಾವ್

## ಸ್ವಯಂ ಸಂಮೋಹಿನಿ ಹಾಗೂ ಆಸ್ತಮಾ ವ್ಯಾಧಿ

ಸಾಮಾನ್ಯ ವೈದ್ಯಕೀಯ ಚಿಕಿತ್ಸಾ ವಿಭಾಗಗಳಿಗೆ ಬಗ್ಗದೆ ಇನ್ನೂ ಒಂದು ಒಗಟಾಗಿರುವ ವ್ಯಾಧಿ ಆಸ್ತಮಾ. ಆದರೆ, ಸ್ವಯಂ ಸೂಚನಾ ವಿಧಾನಗಳಿಗೆ ಪಕ್ಕಾಗುವ ಪ್ರವೃತ್ತಿಯನ್ನು ಅದು ಅನೇಕ ಸಂದರ್ಭಗಳಲ್ಲಿ ತೋರಿದೆ. ವಾಸ್ತವವಾಗಿ ಪ್ರತಿಯೊಬ್ಬರೂ, ಅಂದರೆ ವ್ಯಾಧಿಗ್ರಸ್ಥರೂ ಉಪಶಮನ ಪಡೆಯಲು ಮತ್ತು ಆರೋಗ್ಯವಂತರು ಈ ವ್ಯಾಧಿ ಬರದಂತೆ ತಡೆಯಲು ಸ್ವಯಂ ಈ ಸೂಚನಾ ವಿಧಾನವನ್ನು ಅನುಸರಿಸಬೇಕು. ಸ್ವಯಂ ಸೂಚನೆಯನ್ನು ಅನುಸರಿಸುವ ಅಂದರೆ ಒಬ್ಬ ವ್ಯಕ್ತಿ ತನ್ನನ್ನು ಸಂಮೋಹಿನಿ ಸ್ಥಿತಿಗೆ ಒಳಪಡಿಸಿಕೊಂಡು ತನ್ನ ಉಪಪ್ರಜ್ಞೆಗೆ ಸೂಚನೆಗಳನ್ನು ನೀಡುವ ಮೂಲಕ, ನಾವು ನಮ್ಮ ಜೀವನದುದ್ದಕ್ಕೂ ಮಾನಸಿಕ ಹಾಗೂ ಶಾರೀರಿಕವಾಗಿ ಒಳ್ಳೆಯ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು.

ಅನೇಕ ಬಗೆಯ ಅಸ್ವಸ್ಥತೆಗಳಿಗೆ ಸಂಮೋಹಿನಿ ತಂತ್ರವನ್ನು ಒಂದು ಚಿಕಿತ್ಸಾ ವಿಧಾನವಾಗಿ ಬಳಸಬಹುದು ಎಂಬುದನ್ನು ನಾವು ಈಗಾಗಲೇ ತಿಳಿದುಕೊಂಡಿದ್ದೇವೆ. ವಾಸ್ತವವಾಗಿ ಅನೇಕ ಮಂದಿ ಪ್ರತಿಷ್ಠಿತ ವೈದ್ಯರೂ ಸಹ ಈ ವಿಷಯದಲ್ಲಿ ಉತ್ತಮ ಫಲಿತಾಂಶಗಳನ್ನು ಪಡೆದಿರುವುದಾಗಿ ವರದಿ ಮಾಡಿದ್ದಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಈ ವಿಷಯದಲ್ಲಿ ಸಾಕಷ್ಟು ಸಂಶೋಧನೆ ನಡೆಸಬೇಕೆಂದು ಬ್ರಿಟಿಷ್ ಮೆಡಿಕಲ್ ಅಸೋಸಿಯೇಷನ್ ಶಿಫಾರಸು ಮಾಡಿತು; ಮತ್ತು ಲಭ್ಯವಿದ್ದ ಎಲ್ಲ ಮಾಹಿತಿಗಳನ್ನು ಪರಿಶೀಲಿಸಿದ ನಂತರ ಈ ಕ್ಷೇತ್ರದಲ್ಲಿ ನಿಜವಾದ ಶಮನಕಾರೀ ಸಾಮರ್ಥ್ಯವಿದೆ ಎಂಬುದನ್ನು ಕಂಡುಕೊಳ್ಳಲಾಯಿತು.

ಈ ಲೇಖನದ ಉದ್ದೇಶವೇನೆಂದರೆ, ಆಸ್ತಮಾದಂತಹ ವ್ಯಾಧಿಗಳನ್ನೂ ಸಹ ಸ್ವಯಂ ಸಂಮೋಹಿನಿ ಚಿಕಿತ್ಸಾ ವಿಧಾನದ ಮೂಲಕ ಸ್ವಲ್ಪ ಮಟ್ಟಿಗೆ ಗುಣಪಡಿಸಬಹುದು ಎಂಬುದನ್ನು ನಮ್ಮ ಓದುಗರಿಗೆ ತಿಳಿಯಪಡಿಸುವುದು.

ವಿಧಾನ :

ಈ ಅಧ್ಯಯನಕ್ಕೆ ಬಳಸಲಾದ ವಿಧಾನಗಳು ಇಂತಿವೆ:

1. ಮೆಟ್ರೋನೋಮೆರಿಕ್ ಶಬ್ದದ ಮೂಲಕ ವಶ್ಯಸುಪ್ತ ಸ್ಥಿತಿಯನ್ನು ಉಂಟು ಮಾಡುವುದು. ಅಂದರೆ ರೋಗಿಗಳಿಗೆ ಲೋಲಕದ ಟಿಕ್ ಟಿಕ್ ಶಬ್ದದ ಮೂಲಕ ಯಾವ ರೀತಿ ಸಂಮೋಹಿನಿ ಸ್ಥಿತಿಯನ್ನು ಪಡೆಯಬಹುದು ಎಂಬುದನ್ನು ಬೋಧಿಸುವುದು.

2. ಸ್ವಯಂ ಸಂಮೋಹಿನಿ ವಿಧಾನವನ್ನು ಬೋಧಿಸುವುದು.

3. ರೋಗಿ ಸ್ವಯಂ ಸಂಮೋಹಿನಿ ವಿಧಾನವನ್ನು ಅಭ್ಯಸಿಸುವಾಗ ನಿರಂತರವಾಗಿ ಮೇಲ್ವಿಚಾರಣೆ ನೋಡಿಕೊಳ್ಳುವುದು.

3. ಸುಧಾರಣೆಯ ಬಗ್ಗೆ ಕಂಡು ಬಾರದ್ದನ್ನು ಆಯಾದಿನದ ದಾಖಲೆ ಇಡುವುದು.

ವಾಸ್ತವವಾಗಿ ಇನ್ನೂ ಅನೇಕ ವಿಧಾನಗಳಿವೆ. ಕೆಲವು ಸಂದರ್ಭಗಳಲ್ಲಿ ರೋಗಿಯಿಂದ ಗುಪ್ತ ಸಹಕಾರ ಅಥವಾ ರೋಗಿಯ ಆಸ್ತಮಾ ವ್ಯಾಧಿಯ ಗಂಭೀರತೆಯನ್ನು ಅವಲಂಬಿಸಿ ಲೆಸೆನ್ಸಿ ಟ್ರೆಸೇಷನ್ ತಂತ್ರವನ್ನು ಬಳಸಲಾಗುವುದು. ಈ ತಂತ್ರದಲ್ಲಿ, ವಾಸ್ತವತೆಯಲ್ಲಿ ಸಾಧಿಸಲಾದುದನ್ನು ತಾನು ಸಾಧಿಸಿರುವುದಾಗಿ ಕಲ್ಪಿಸಿಕೊಳ್ಳಲು ರೋಗಿಗೆ ಹೇಳಲಾಗುವುದು. ಉದಾಹರಣೆಗೆ, ರೋಗಿಗೆ ತನ್ನನ್ನು ತಾನೇ ಸಂಮೋಹಿನಿ ಟ್ರಾನ್ಸ್‌ಗೆ ಒಳಪಡಿಸಿಕೊಂಡು (ಮೆಟ್ರೋಟೋಮ್ ಶಬ್ದವನ್ನು ಬಳಸಿ), ತನ್ನ ಉಪಪ್ರಜ್ಞೆಗೆ ಕೆಳಕಂಡ ಸೂಚನೆಗಳನ್ನು ನೀಡುವಂತೆ ಹೇಳಲಾಗುವುದು:

'ಹೌದು. ಬೆಳಿಗ್ಗೆ ಅಷ್ಟು ಹೊತ್ತಿಗೆ ನನ್ನ ನಿತ್ಯಗಟ್ಟಲೆಯ ಉಸಿರಾಟದ ವ್ಯಾಯಾಮಗಳನ್ನು ಮಾಡಿದೆ. ಅನಂತರ ಬೆಳಗಿನ ಉಪಾಹಾರ ಸೇವಿಸಿ ಆಫೀಸ್‌ಗೆ ಹೋದೆ. ದಿನವಿಡೀ ಆಫೀಸ್ ಕೆಲಸದಲ್ಲಿ ಬಿಡುವಿಲ್ಲದೆ ನಿರತನಾಗಿದ್ದೆ. ನಾನು ಆಫೀಸ್‌ನಿಂದ ಮನೆಗೆ ಹೊರಟಾಗ ಆಗಲೇ ಸಂಜೆ 5.30 ಗಂಟೆಯಾಗಿತ್ತು. ನಾನು ಮನೆಯತ್ತ ನಡೆಯಲಾರಂಭಿಸಿದೆ. ಯಾವುದೇ ಉಸಿರಾಟದ ತೊಂದರೆಯಾಗಲಿಲ್ಲ.''

"ಮನೆಗೆ ಹೋದ ನಂತರ ಒಳ್ಳೆಯ ಸ್ಟ್ರಾಂಗ್ ಕಾಫಿ ಕುಡಿದೆ ಮತ್ತು ಪುನಃ ಯೋಗ ವಿಧಾನದಲ್ಲಿ ಉಸಿರಾಟದ ವ್ಯಾಯಾಮವನ್ನು ಮಾಡಿದೆ. ರಾತ್ರಿ ನನಗೆ ಒಳ್ಳೆಯ ಗಾಢ ನಿದ್ರೆ ಬಂತು. ಬೆಳಗ್ಗೆ ಎದ್ದಾಗ ಮನಸ್ಸು ಪ್ರಫುಲ್ಲವಾಗಿತ್ತು. ನಿನ್ನೆ ಅದೆಲ್ಲವನ್ನೂ ಎಷ್ಟು ಚೆನ್ನಾಗಿ ಮಾಡಿದೆ ಎಂದು ನಾನು ಊಹಿಸಲಾರೆ''

ರೋಗಿ 'ಒನ್, ಟೂ, ತ್ರಿ' ಎಂದು ಹೇಳಿ ಅನಂತರ ಕಣ್ಣುಗಳನ್ನು ತೆರೆಯಬೇಕು.

ಈ ಮೇಲ್ಕಂಡ ವಿಧಾನವೇ ಡೀಸೆನ್ಸಿಟೈಸೇಷನ್ ತಂತ್ರ. ಇದರಲ್ಲಿ ರೋಗಿಗಳಿಗೆ ದಿನಕ್ಕೆ ಸಾಧ್ಯವಾದಷ್ಟು, ಸಾರಿ ಅಭ್ಯಾಸಿಸಲು (6 ರಿಂದ 8 ಸಾರಿ) ಹೇಳಲಾಗುವುದು.

ಈ ಹಿಪ್ನೋಥೆರಪ್ಟಿಕ್ ತಂತ್ರ ರೋಗಿಗೆ ಒಮ್ಮೆ ರೂಢಿಯಾದ ನಂತರ, ಮಾನಸಿಕ ಒತ್ತಡದಿಂದ ಒಳ್ಳೆಯ ಉಪಶಮನ ಗಳಿಸಬಲ್ಲ ಮತ್ತು ತಾನು ಗುಣವಾಗುವ ಬಗೆಗೆ ಆತ್ಮ ವಿಶ್ವಾಸ ಮರಳಿ ಪಡೆಯಬಲ್ಲ ಮತ್ತು ಜೀವನದ ಪರಿಸ್ಥಿತಿಗೆ ಹೊಂದಿಕೊಳ್ಳಬಲ್ಲ. ಇದೇ ರೀತಿ ತೊಂದರೆಗೊಳಗಾದ ರೋಗಿಗಳೊಡನೆ ಆತ ಅನುಭವವನ್ನು ಆಧರಿಸಿ ಚಿಕಿತ್ಸೆಯ ಯಶಸ್ಸಿನ ಸಾಧ್ಯತೆಯ ಬಗೆಗೂ ಸೂಚಿಸಬಹುದು. ಅನಂತರ ರೋಗಿ ಎಚ್ಚರಗೊಳ್ಳುವಂತೆ ಮಾಡಿ ಆತನೊಂದಿಗೆ ಚರ್ಚೆ ಪ್ರಾರಂಭಿಸಲಾಗುವುದು.

ಸಾಮಾನ್ಯವಾಗಿ ಒಂದು ವಾರ ಅಥವಾ ಅದರ ನಂತರ ರೋಗಿ ಚೇತರಿಸಿಕೊಳ್ಳುವ ಪ್ರಮಾಣವನ್ನು ಅವಲಂಬಿಸಿ ದಿನ ಬಿಟ್ಟು ದಿನ ಕರೆಸಲಾಗುವುದು.

ಸಂಮೋಹಿನಿ ನಂತರದ ಯೋಜಿತ ಸೂಚನೆಯ ಮೂಲಕ ರೋಗಿಗೆ ಒಂದು ಕುರ್ಚಿ ಅಥವಾ ಹಾಸಿಗೆಯ ಮೇಲೆ ಸುಖಕರವಾಗಿ ವಿಶ್ರಮಿಸಿದ ನಂತರ ಸಿಗ್ನಲ್ ಪ್ರಾರಂಭವಾಗಬೇಕೆಂದು ರೋಗಿಗೆ ತಿಳಿಸಲಾಗುವುದು. ಅದರ ಬಗೆಗೆ ಸ್ವಲ್ಪ ವಿವರಣೆ ಇಲ್ಲಿದೆ:

ಸಿಗ್ನಲ್ ಎಂದರೆ ಲೋಲಕದ ಟಿಕ್ ಶಬ್ದ. ಪ್ರತಿ ಸೆಕೆಂಡಿಗೆ ಒಮ್ಮೆ ಟಿಕ್ ಶಬ್ದ ಮಾಡುವಂತೆ ಅದನ್ನು ಅಳವಡಿಸಬೇಕು. ಲೋಲಕ ಪ್ರತಿ ಸಾರಿ 10 ಬಾರಿ ಟಿಕ್ ಶಬ್ದ ಮಾಡಿದಾಗ ರೋಗಿ ಕಣ್ಣುಗಳನ್ನು ಮುಚ್ಚಿಕೊಳ್ಳಬೇಕು ಮತ್ತು ಅನಂತರ ತೆರೆಯಬೇಕು. ಹೀಗೆ ಸುಮಾರು 10 ನಿಮಿಷಗಳವರೆಗೆ ಮಾಡಿದ ನಂತರ ರೋಗಿ ವಶ್ಯ ಸ್ಥಿತಿಗೆ ಒಳಗಾಗುವನು. ಮತ್ತು 15 ನಿಮಿಷಗಳವರೆಗೆ ಆ ಸ್ಥಿತಿಯಲ್ಲಿದ್ದಾಗ ರೋಗಿ ಸಾಮಾನ್ಯವಾಗಿ ಹಿಪ್ನೋಥೆರಪಿಸ್ಟ್ ಸಂಮೋಹಿನಿ ಗೊಳಪಡಿಸಿದಾಗ ಉಂಟಾಗುವಂಥದೇ ಅನುಭವವನ್ನು ಪಡೆಯುತ್ತಾನೆ. ಸಾಮಾನ್ಯವಾಗಿ ಹೆಚ್ಚು ಒತ್ತಡಕ್ಕೊಳಗಾದ ರೋಗಿಗೆ 15 ನಿಮಿಷಗಳಿಗೆ

### ದಾರಿದೀಪ

ನಿನ್ನ ಕಣ್ಣಲ್ಲಿರುವ ಕಾಂತಿ ನನಗೇಕಿಲ್ಲ?
ನಿನ್ನ ನಗುವಿನಲ್ಲಿರುವ ಸೌಂದರ್ಯ
ನನಗೇಕಿಲ್ಲ?
ನಿನ್ನಂತ ಮುಗ್ಧ ಮನಸ್ಸು ನನಗೇಕಿಲ್ಲ?

ಮಗುವೇ ಮಾನವನಾಗು,
ನಿಸ್ವಾರ್ಥಿಯಾಗು,
ದಯಾಮಯಿಯಾಗು,
ನನಗೆ (ನಮಗೆ) ದಾರಿದೀಪವಾಗು.

– ವಿನಿತಾ ಗಿರಡ್ಡಿ
ನರಗುಂದ

ಬದಲಾಗಿ 30 ನಿಮಿಷಗಳವರೆಗೆ ಸಂಮೋಹಿನಿ ಸ್ಥಿತಿಯಲ್ಲಿರುವಂತೆ ವಿಧಿಸಲಾಗುತ್ತದೆ.

ರೋಗಿಗೆ ಕೆಲವು ಸುರಕ್ಷತಾ ಸೂಚನೆಗಳನ್ನು ನೀಡಲಾಗುತ್ತದೆ. ಅವು ಕೆಳಕಂಡಂತಿವೆ:

1) "ಮೆಟ್ರೋಸೋಮ್' ಬಡಿತದ 'ಟಿಕ್ ಟಿಕ್' ಶಬ್ದ ಇದ್ದರೂ ಅದು ನಿಮ್ಮನ್ನು ಡಿಸ್ಟರ್ಬ್ ಮಾಡುವುದಿಲ್ಲ, ಪ್ರತಿಯಾಗಿ ನಿಮಗೆ ಇನ್ನಷ್ಟು ರಿಲ್ಯಾಕ್ಸ್ ಮಾಡಲು ಹಾಗೂ ಮತ್ತಷ್ಟು ಗಾಢವಾದ ಟ್ರಾನ್ಸ್‌ಗೆ ಒಳಗಾಗಲು ಸಹಾಯ ಮಾಡುತ್ತದೆ.

2) ಹಿಪ್ನೋಥೆರಪಿಸ್ಟರ್ ಯಾವುದೇ ಅನಿವಾರ್ಯತೆಯ ಅನುಭವ ನಿಮಗಾಗುವುದಿಲ್ಲ,

3) ಮೆಟ್ರೋಸೋಮ್ ಬಡಿತಗಳ ಈ ವ್ಯವಸ್ಥೆಯು ನೀವು ಟ್ರಾನ್ಸ್ ಸ್ಥಿತಿಗೆ ಹೋಗಲು ನಿಮ್ಮನ್ನು ಹೆಚ್ಚು ಸ್ವತಂತ್ರರಾಗಿ ಮಾಡುತ್ತದೆ.

4) ನಿಮ್ಮ ಪಕ್ಕದ ಕೋಣೆಯಲ್ಲಿರುವವರು ಮಾತನಾಡುತ್ತಿದ್ದು ಅದರಿಂದಾಗಿ ಶಬ್ದವಾದರೂ ನೀವು ಟ್ರಾನ್ಸ್ ಸ್ಥಿತಿ ತಲುಪಲು ನಿಮಗೆ ಸಾಧ್ಯವಾಗುವುದು.

ತನ್ನ ದಿನವಹಿ ಅಧಿವೇಶನಗಳು ಮತ್ತು ಅದರಿಂದ ಪಡೆದಂಥ ಪ್ರಯೋಜನಗಳ ಬಗೆಗೆ ದಾಖಲೆಯನ್ನು ಇಡಲು ರೋಗಿಗೆ ಹೇಳಲಾಗುವುದು.

ಮತ್ತೆ, ಒಂದೂವರೆ ತಿಂಗಳ ನಂತರ, ಅದೇ ರೀತಿ ಇನ್ನಷ್ಟು ಉಸಿರಾಟದ ಯೋಗಿಕ್ ವ್ಯಾಯಾಮಗಳನ್ನು, ಚಿಕಿತ್ಸೆಯ ಸ್ವರೂಪಕ್ಕೆ ಅನುಗುಣವಾಗಿ ರೋಗಿಗೆ ಬೋಧಿಸಲಾಗುವುದು.

ಕಡೆಯದಾಗಿ, ಉಸಿರಾಟದ ಯೋಗಿಕ್ ವ್ಯಾಯಾದ ಜತೆಗೇ, ಸಂಮೋಹಿನಿ ತಂತ್ರದ ಮೂಲಕ ನೀಡಲಾಗುವ ರಿಲ್ಯಾಕ್ಸೇಷನ್ ಚಿಕಿತ್ಸಾ ವಿಧಾನವು ಆಸ್ತಮಾ ರೋಗಿಗಳಿಗೆ ಚಿಕಿತ್ಸೆ ನೀಡುವಲ್ಲಿ ಸಂಮೋಹಿನಿ ಹಾಗೂ ಸ್ವಯಂ ಸಂಮೋಹಿನಿ ಗಮನಾರ್ಹ ಸುಧಾರಣೆಯನ್ನು ತೋರಿಸುವುದು ಎಂಬ ಅಭಿಪ್ರಾಯವನ್ನು ಪುಷ್ಟೀಕರಿಸುವುದು. (ಇಲ್ಲಿ, ಆಸ್ತಮಾ ರೋಗಿಗಳೆಂದರೆ ಯಾವುದೇ ಅವಯವಗಳ ತೊಂದರೆಗಳಿಲ್ಲದಂಥ, ಆದರೆ ತೀವ್ರ ಒತ್ತಡ, ಆತಂಕ, ಚಿಂತೆಗಳು, ವ್ಯಗ್ರತೆ ಮುಂತಾದ ಕಾರಣಗಳಿಂದ ಆಸ್ತಮಾ ತಗಲಿದ ರೋಗಿಗಳು ಮಾತ್ರ. ಅಂದರೆ ಅದು ಹೆಚ್ಚು ಸೈಕೋನ್ಯೂಮಾಟಿಕ್ ಸ್ವರೂಪದ್ದು). ಅಲ್ಲದೆ, ಸ್ವತಃ ಗಾಢವಾದ ವಶ್ಯ ಸುಪ್ತ ಸ್ಥಿತಿಯಲ್ಲಿ ಆಸ್ತಮಾದ ಸಂಕಟದಾಯಕ ಚಿಹ್ನೆಗಳಿಂದ ಉಪಶಮನ ನೀಡುವಲ್ಲಿ ನಿಜವಾಗಿ ಹೆಚ್ಚು ಸಹಾಯಕವಾಗಿ ನನ್ನಲ್ಲಿಗೆ ಬಂದ ಒಬ್ಬ ಆಸ್ತಮಾ ರೋಗಿಗೆ ಚಿಕಿತ್ಸೆ ನೀಡುವಲ್ಲಿ, ಸ್ವಯಂ ಸಂಮೋಹಿನಿ ವಿಧಾನದ ರಿಲ್ಯಾಕ್ಸೇಷನ್ ತಂತ್ರದ ಜತೆಗೆ ಉಸಿರಾಟದ ಕೆಲವು ಯೋಗಿಕ್ ವ್ಯಾಯಾಮಗಳು ನನ್ನ ರೋಗಿಗೆ ಶಾಶ್ವತವಾದ ಪರಿಹಾರ ನೀಡುವಲ್ಲಿ ಸಹಾಯಕವಾಯಿತು. ಮತ್ತು ರೋಗಿಗೆ ವೈದ್ಯರ ಅವಲಂಬನೆಯನ್ನು ಕನಿಷ್ಠಗೊಳಿಸಿತು.

☆

# ಪ್ರತಿಭಾನ್ವಿತ ಯುವ ನರ್ತಕಿ ಲಕ್ಷ್ಮಿ ಪದ್ಮನಾಭನ್



ಉದಯೋನ್ಮುಖ ಕಲಾವಿದೆ ಲಕ್ಷ್ಮೀ ಪದ್ಮನಾಭನ್ 16 ವರ್ಷದ ಪಿ.ಯು.ಸಿ. ವಿದ್ಯಾರ್ಥಿನಿ. ರೇವತಿ ನರಸಿಂಹನ್ ಅವರ ಶಿಷ್ಯೆ, ಭರತ ನಾಟ್ಯದಲ್ಲಿ ಸೀನಿಯರ್ ಪರೀಕ್ಷೆ ಪಾಸು ಮಾಡಿರುವ ಇವಳ ರಂಗ ಪ್ರವೇಶ ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆಯಿತು. ರಂಗ ಪ್ರವೇಶಕ್ಕಾಗಿ ಕೆಲವೇ ನೃತ್ಯಗಳನ್ನು ಕಲಿತು ಗಿಳಿಪಾಠ ಒಪ್ಪಿಸುವವರ ಸಂಖ್ಯೆ ಕಡಿಮೆ ಇಲ್ಲ. ಇದಕ್ಕೆ ಅಪವಾದ ಲಕ್ಷ್ಮಿಯ ಪ್ರವೇಶ.

ದಂಡಾಯುಧಪಾಣಿ, ಪಾರ್ಥಸಾರಥಿ, ಪುರಂದರದಾಸರು, ಬಾಲಮುರಳೀ ಕೃಷ್ಣ ಮುಂತಾದವರ ಕೃತಿಗಳಿಗೆ ಚೊಕ್ಕ ಅಭಿನಯ ನೀಡಿದಳು ಲಕ್ಷ್ಮಿ ಶಂಕರಾಭರಣದ ವರ್ಣದಲ್ಲಿ ಖಚಿತ ಲಯ, ಭಾವಪೂರ್ಣ ಅಭಿನಯದಿಂದ ಸಭಿಕರ ಮನ ಗೆದ್ದಳು. ರಂಗದ ಮೇಲೆ ಚಿಕ್ಕ ಗೊಂಬೆಯಂತೆ ಕಂಡರೂ ನೃತ್ತ-ನೃತ್ಯ ಎರಡರಲ್ಲೂ ತನ್ನ ವಿದ್ವತ್ತನ್ನು ಪ್ರದರ್ಶಿಸಿದಳು. ಕಳೆದ ಎಂಟು ವರ್ಷಗಳಿಂದ ನೃತ್ಯಾಭ್ಯಾಸದಲ್ಲಿ ತೊಡಗಿರುವ ಇವಳು ನಾಟ್ಯ ನಿಕೇತನದ ಅನೇಕ ನೃತ್ಯ ರೂಪಕಗಳಲ್ಲಿ ಪಾಲ್ಗೊಂಡಿದ್ದಾಳೆ. ಅಲ್ಲದೆ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರಗೊಂಡ "ನವಜೀವನ" ನೃತ್ಯ ನಾಟಕದಲ್ಲಿ ಪ್ರಮುಖ ಪಾತ್ರ ವಹಿಸಿದ್ದಾಳೆ.

ಅಂದಿನ ನರ್ತನಕ್ಕೆ ಹಿನ್ನೆಲೆ ಒದಗಿಸಿದವರು ರಮಾ ಜಗನ್ನಾಥ್. ನಟ್ಟುವಾಂಗ ರೇವತಿ ನರಸಿಂಹನ್, ಕಿರಣ್ ಸುಬ್ರಹ್ಮಣ್ಯ ಮೃದಂಗ, ಹೇಮಂತ್ ಕುಮಾರ್ ಪಿಟೀಲು ಹಾಗೂ ಬಿ.ವಿ. ಶ್ರೀಕಂಠನ್ ನೆರವಾದರು.

— ಪಂಕಜಾ ಸಿಂಹ



ಗುರುವಂದನೆ



# ನಿಮ್ಮ ಮನೆಗೆ ನೀವೇ














ನಿಜ. ಆ್ಯಂಕರ್ ಶೀಘ್ರ ಹೊಲಿಗೆ ಸಾಧನದಿಂದ ನಿಮ್ಮ ಮನೆಯ ಗೋಡೆಗಳ ಮೇಲೆ ರಂಗುರಂಗಿನ ಹೊಸ ಪ್ರಪಂಚವನ್ನೇ ರಚಿಸಿ ಬಿಡಬಹುದು. ನೀವೇ. ರಮಣೀಯ ಸೌಂದರ್ಯ, ಮುದ್ದಾದ ಪ್ರಾಣಿ ಪ್ರಪಂಚ, ಬೆಡಗಿನ ಬಂಗಲೆಗಳು . . ನಿಮ್ಮ ಕ್ರಿಯಾತ್ಮಕ ಪ್ರತಿಭೆಗೆ ಸಾಟಿಯಾಗಬಲ್ಲ ಇನ್ನೂರಕ್ಕೂ ಮಿಗಿಲಾದ ವಿನ್ಯಾಸಗಳು, ಆಯ್ಕೆ ನಿಮ್ಮದೇ.

ಇದು ತೀರಾ ಸುಲಭ ಕೂಡಾ. ಬರೆದಿಟ್ಟ ನಿರ್ದೇಶನದಂತೆ ಹೊಲಿಗೆಗಳನ್ನು ಜೋಡಿಸುತ್ತಾ ಹೋದ ನೀವೇ ಬೆರಗಾಗುವಂತೆ, ರಂಗು ರಂಗಿನ ಚಿತ್ರಗಳು ಮೂಡಿಬರುತ್ತವೆ.

ಪ್ರತಿ ಕಿಟ್ ಸ್ವಯಂಪೂರ್ಣವಾಗಿದೆ ವಿನ್ಯಾಸ ಮುದ್ರಿಸಲ್ಪಟ್ಟ ಕ್ಯಾನ್‌ವಾಸ್ ಹಾಳೆ, ವಿನ್ಯಾಸಕ್ಕೆ ದಾರಗಳು, ಹಂತ ಹಂತದಲ್ಲೂ ಸಹಾಯಕ್ಕೆ ಒದಗುವ ನಿರ್ದೇಶನ ಮತ್ತು ಇದಕ್ಕೆಂದೇ ಮಾಡಿದ ವಿಶೇಷ

ಎಲ್ಲಾ ಡಿಪಾರ್ಟ್‌ಮೆಂಟ್ ಮಳಿಗೆಗಳಲ್ಲೂ, ಆಟದ ಸಾಮಾನಿನ ಅಂಗಡಿಗಳಲ್ಲೂ, ಆ್ಯಂಕರ್ ದಾರದ ವಿತರಕರಲ್ಲೂ ದೊರೆಯುತ್ತದೆ.

(29ನೇ ಪುಟದಿಂದ)

ನಿಜಕ್ಕೂ ರುಚಿಕರವಾದ ಅಡಿಗೆ ಖಾಲಿಯಾದ ಪಾತ್ರೆ ನನ್ನನ್ನು ಅಣಕಿಸಿತ್ತು. ಈ ಗಂಡಸರೇ ಅರ್ಥವಾಗುವುದಿಲ್ಲ. ಇಷ್ಟು ಸೊಗಸಾಗಿ ನಳ ಪಾಕ ತಯಾರಿಸುವವರಿಗೆ ನನ್ನ ಅಡಿಗೆ ಹೇಗೆ ತಾನೇ ಮೆಚ್ಚಿಗೆಯಾಯಿತು ಎಂದೆನಿಸಿ ನನ್ನ ಬಗ್ಗೆ ನಾಚಿಕೆಯಾಗಿತ್ತು.

ಮಾರನೆ ದಿನ ಬಟ್ಟೆ ಒಗೆಯಲು ಪ್ಯಾಂಟು-ಶರ್ಟು ಕೈಗೆ ತೆಗೆದುಕೊಂಡಾಗ ರಾಯರ ಗುಟ್ಟು ಹೊರಬಿದ್ದಿತು.

ಹೋಟೇಲ್ ನಂಜುಡೇಶ್ವರ 2 ಊಟ 18.00 ರೂ ಬಿಲ್ಲು. ನನಗರಿವಿಲ್ಲದಂತೆ ಕೈಯಿಂದ ಜಾರಿ ಕೆಳಗೆ ಬಿತ್ತು.

**-ರಮಾ ಗೋವಿಂದರಾಜು**



### ನಳ - ಭೀಮರನ್ನು ಸೋಲಿಸುವ ಕೃಷ್ಣ ಪಾಕ!

"ಇತ್ತೀಚೆಗೆ ನಿನಗೆ ಅಡುಗೆ ಕೆಲಸದಲ್ಲಿ ಆಸಕ್ತಿಯೇ ಇಲ್ಲ..." ಎಂದು ನಮ್ಮವರು ರಾಗ ಎಳೆದೊಡನೆ, ನಾನು ಹೇಗಾದರೂ ಉಪಾಯವಾಗಿ ಒಂದು ದಿನದ ಅಡುಗೆ ಅವರಿಂದಲೇ ಮಾಡಿಸಿ ಬಿಡ್ತೀನಿ. "ಸ್ವಲ್ಪ ಸಹಾಯ ಮಾಡಿ ಏನಾದರೂ ವಿಶೇಷ ಮಾಡೋಣ" ಎಂದು ಅವರು ಅಡುಗೆ ಮನೆಯೊಳಗೆ ಕಾಲಿಡುವಂತೆ ಮಾಡಿದರೆ ನನ್ನ ಕೆಲಸ ತೊಂಭತ್ತು ಭಾಗ ಆದಂತೆಯೇ! ಅಡುಗೆಯ ಒಂದೊಂದೇ ಜವಾಬ್ದಾರಿ ನಿಧಾನವಾಗಿ ಅವರಿಗೆ ವಹಿಸುತ್ತಾ, ನಾನು ಮೆಲ್ಲನೆ ಹೊರಗೆ ಜಾರಿಕೊಂಡು ಬಿಡುತ್ತೇನೆ. ಇನ್ನು ಇವರು ತಮ್ಮ ಭೀಮಪಾಕ ಮುಗಿಸುವವರೆಗೆ ನಾನು ಅಡುಗೆ ಮಾಡುವ ಹೆಂಡತಿಯ ಬೆಲೆ ಅನುಭವಕ್ಕೆ ಬರುವುದು ಬೇಡವೇ! ಅದಕ್ಕೆಂದೇ ನಾನಂತೂ ಮನೆಯಲ್ಲಿ ಆಗಾಗ 'ನಳಪಾಕ' ಮಾಡಿಸುತ್ತಲೇ ಇರುತ್ತೇನೆ. ನನಗೂ ಒಂದು ದಿನದ ರಜೆ ಸಿಕ್ಕಂತಾಗುತ್ತಲ್ಲ!

ಹಾಗೆ ಒಮ್ಮೆ ಇವರು ಮಾಡಿದ್ದ ನುಚ್ಚಿನುಂಡೆ (ಹಾಗಂತ ಅವರು ಹೇಳಿದ ಮೇಲೆ ಗೊತ್ತಾಗಿದ್ದು!) ತಿಂದದ್ದೇ ನನಗಂತೂ ಎಂದೆಂದೂ ಮರೆಯಲಾಗದ ಅನುಭವ! ನೆತ್ತಿಯ ರಂಧ್ರವನ್ನೇ ಸೀಳಿಕೊಂಡು ಬರುವಂತಹ ಯಮ ಭಯಂಕರವಾದ ಖಾರ! ತಿಂದ ಉಂಡೆ ಬಾಯಲ್ಲೆಲ್ಲಾ ಹರಡಿಕೊಂಡು ಪೇಸ್ಟಿನಂತೆ ಗಟ್ಟಿಯಾಗಿ ಅಂಟಿಕೊಂಡು ಬಿಟ್ಟರೆ ನುಂಗುವುದಾದರೂ ಹೇಗೆ? ನಾಲಿಗೆ ಉಜ್ಜುವ ಬ್ರಷ್ ಸಹಾಯ ಮಾಡಿದ್ದರಿಂದ ಬಾಯಿಂದ ಹೊರಗಾದರೂ ತೆಗೆಯಲು ಸಾಧ್ಯವಾಯಿತು! ಮಾಡಿದ್ದನ್ನೆಲ್ಲಾ ರಸ್ತೆಗೆಸೆದರೆ ನಾಯಿಗಳಿಗೇನು ಬರವೇ ನಮ್ಮಲ್ಲಿ? ಆದರೂ ಕಾರ್ಪೊರೇಷನ್ ಲಾರಿ ಬರುವವರೆಗೆ ಅಲ್ಲೇ ಇತ್ತು ನೋಡಿ. ಅಥವಾ ಯಾವ್ಯಾವ ಪ್ರಾಣಿ ಬಾಯಿಗೆ ಹಾಕಿ ಏನೇನು ಪಾಡು ಪಟ್ಟಿತ್ತೋ ದೇವರೇ ಬಲ್ಲ! (ನನ್ನವರ ಪಾಕಕ್ಕೆ ನಳ-ಭೀಮರ ಹೆಸರುಗಳನ್ನಿಡಲಾಗದು. ಅವರ ಪಾಕಕ್ಕೆ ಅವರದೇ ಹೆಸರು ಕೊಡಬೇಕಷ್ಟೆ!)

ಇನ್ನೊಮ್ಮೆ ನನಗೆ ಹುಷಾರಿರಲಿಲ್ಲವೆಂದು ತಾವೇ ತಯಾರಿಸಿದ್ದರು. ಅದ್ಭುತವಾದ ಉಪ್ಪಿಟ್ಟು! ಅರ್ಧ ಪಾವು ಗೋಡಂಬಿಗೆ ಸ್ವಲ್ಪ ರವೆ ಹಾಕಿ ಮಾಡಿದ್ದರು. ಉಪ್ಪುಪ್ಪಾದ ಉಪ್ಪಿಟ್ಟನ್ನು! ಕೈಗೆ ಮೆತ್ತುವ ತುಪ್ಪ, ನಾಲಿಗೆ ಮೇಲೆ ಹಲ್ಲುಗಳ ನಡುವೆ ಹೊರಳಾಡುವ ಕಾಯಿತುರಿ, ಗೋಡಂಬಿಗಳ ನಡುವೆ ರವೆ ಎಲ್ಲಿತ್ತೋ ಬಾಯಿಗೆ ತಿಳಿಯಲಿಲ್ಲ. ಅಲ್ಲೊಂದು ಇಲ್ಲೊಂದು ಕಾಣುತ್ತಿದ್ದ ರವೆಯನ್ನು ಕಣ್ಣು ಹುಡುಕಿದ್ದರಿಂದ ಇದು ಉಪ್ಪಿಟ್ಟು ಎಂದು ಖಚಿತ ಮಾಡಿಕೊಂಡೆ. ಆದರೆ ಅಂದಿನ ತಿಂಡಿ ನಮ್ಮವರ ಜೋಬಿಗೆ ಸ್ವಲ್ಪವೂ ಆರೋಗ್ಯಕರವಾಗಿರಲಿಲ್ಲವೆಂದೇ ಅಡಿಗೆ ಮನೆ ದಾಳಿಗೆ ಬರದೆ ತೆಪ್ಪಗಿದ್ದರು ಎರಡು ತಿಂಗಳು.

ನನ್ನವರಿಗಿರುವ ಒಂದು ಕೆಟ್ಟ ಚಾಳಿ ಎಂದರೆ ಕಂಡವರ ಮನೆ ತಿಂಡಿಗಾಗಿ ಬಾಯಿ - ಬಾಯಿ ಬಿಡುವ ಜಾಯಮಾನ. ಎದುರು ಮನೆ ಗಿರಿಜಮ್ಮ ಮಾಡಿದ್ದ ಬೋಂಡ ತಿಂದು ಒಂದು ವಾರವಾದರೂ ಕನಸು - ಮನಸಿನಲ್ಲೆಲ್ಲಾ ಹಂಬಲಿಸಿ ಹಂಬಲಿಸಿ ಹೊಗಳುವುದನ್ನು ನೋಡಿ ನನಗೆ ರೇಗಿ ಹೋಗಿತ್ತು. ಇದರೊಡನೆ "ಅಡಿಗೆ ಸರಿಯಾಗಿ ಕಲಿ" ಎಂದು ನನಗೆ ಉಪದೇಶ ಬೇರೆ! ಹೆಂಡತಿಯಾದವಳಿಗೆ ಇದಕ್ಕಿಂತ ಅವಮಾನ ಬೇಕೆ? ಇವರಿಗೆ ಬುದ್ಧಿ ಕಲಿಸಲೇ ಬೇಕೆಂದು ಸಂಕಲ್ಪ ಮಾಡಿ ತವರಿನಲ್ಲಿ ಠಿಕಾಣಿ ಹೂಡಿದೆ. ನಾನು ಊರಿಗೆ ಹೋದ ಎರಡು ದಿನಕ್ಕೆ ಇವರ ಪರ್ಸು ಹೋಟೇಲ್ ಸಹವಾಸ ಮಾಡಬೇಡವೆಂದು ಬುದ್ಧಿ ಹೇಳಿತು. ಮರುದಿನದಿಂದ ಅವರು ಮಾಡಿದ ಅಡಿಗೆ ಅವರೇ ತಿನ್ನಬೇಕೆಂಬ ಅನಿವಾರ್ಯ ಸ್ಥಿತಿ. ಪಾಯಸದಂತಿದ್ದ ಅನ್ನ ಚಾಕುವಿನಲ್ಲಿ ಕತ್ತರಿಸಿ ತೆಗೆಯಬೇಕಾಗಿದ್ದ ಸಾರು; ಮಾಡಿದ್ದುಣ್ಣೋ ಮಹರಾಯ ಅಂತ! (ಸದ್ಯಕ್ಕೆ ನಾನು ಬಚಾವಾಗಿದ್ದೆ) ಉಪ್ಪಿಟ್ಟು ಮಾಡಲು ಹೋಗಿ ರವೆಯಲ್ಲಿನ ಹುಳು ತೆಗೆಯುವುದು ಹೇಗೆಂದು ತಿಳಿಯದೆ ಮೊರದಲ್ಲಿ ರವೆ ಆರಿಸಿದ್ದನ್ನು ಕೇಳಿ ತಡೆಯಲಾಗದಷ್ಟು ನಗು ನನಗೆ. ಮರುದಿನವೇ ನನ್ನ ಅಮ್ಮನ ಮುಂದೆ ಇವರ ಅಂದಿನ ಹೊಟ್ಟೆಬಾಕತನ ನೋಡಿ ನನಗೇ "ಅಯ್ಯೋ ಪಾಪ" ಎನಿಸಿಬಿಟ್ಟಿತು. ಡರ್ರನೆ ತೇಗಿ "ಹೆಂಡತಿಯೊಬ್ಬಳು ಮನೆಯೊಳಗಿದ್ದರೆ..." ಎಂದು ಇವರು ಕವಿ ನರಸಿಂಹಸ್ವಾಮಿಯವರ ಕವನದ ಸಾಲು ಹೇಳಿ ನಕ್ಕಾಗ, ನಾನು ನನ್ನ ಗೆಲುವಿನ ನಗೆಯನ್ನೂ ಬೆರೆಸಿದೆ. (ದಯವಿಟ್ಟು ಇದನ್ನೆಲ್ಲಾ ನನ್ನವರಿಗೆ ಯಾರೂ ಹೇಳಬಾರದಾಗಿ ವಿನಂತಿ.)



ಜಿ.ಎಸ್. ಕೃಷ್ಣಮೂರ್ತಿ

**-ವಿಜಯ ಕೃಷ್ಣಮೂರ್ತಿ**
**ಬೆಂಗಳೂರು**



## ಶಬ್ದಗಳ ಆರ್ಭಟ

ನಮ್ಮ ಯಜಮಾನರು ಯಾವತ್ತೂ ಅಡಿಗೆ ಮನೆಗೆ ಬಂದವರೇ ಅಲ್ಲ. ಅದರಲ್ಲೂ ನಮ್ಮ ಅತ್ತೆಯವರಿದ್ದಾಗಲಂತೂ ನನ್ನನ್ನೇ ಬಿಡುತ್ತಿರಲಿಲ್ಲ. ಇನ್ನು ಅವರನ್ನು ಬಿಡುತ್ತಾರೆಯೇ? ಒಂದು ಲೋಟ ನೀರನ್ನು ಸಹ ತಾವೇ ತೆಗೆದುಕೊಳ್ಳದವರು ಅಂದು ಮಾತಿಗೆ ಮಾತು ಬಂದು ತಾವೇ ಅಡಿಗೆ ಮಾಡುವುದಾಗಿ ಹೇಳಿದರು. ಸರಿ ಈ ದಿನ ಊಟ ಮಾಡುವಂತೆ ಎಂದೂ ಎಲ್ಲರೂ ಹಾಸ್ಯ ಮಾಡಿದರೂ ಬಿಡದೆ ತಾವೇ ಅಡಿಗೆಗೆ ನಿಂತು ಬಿಟ್ಟರು. "ಈ ದಿನ ಫಸ್ಟ್ ಕ್ಲಾಸ್ ಈರುಳ್ಳಿ ಹುಳಿ, ತಿಳಿಸಾರು, ಅನ್ನ ಮಾಡಿ ಬಿಡ್ತೀನಿ. ನೋಡಿ. ಈ ದಿನದ ಹುಳಿ ನೀವು ಎಂದೂ ತಿಂದಿರಲೇಬಾರದು" ಎನ್ನುತ್ತಾ ಅಡಿಗೆ ಮನೆಗೆ ನಡೆದರು.

ಸಾಂಬಾರ್ ಈರುಳ್ಳಿ ಬಿಡಿಸಿ ಕೊಡುವುದಕ್ಕು ನನ್ನನ್ನು ಬಿಡಲಿಲ್ಲ. ತಾವೇ ಎಲ್ಲವನ್ನೂ ಮಾಡಿಕೊಳ್ಳುವುದಾಗಿ ನನ್ನನ್ನು ಆಚೆ ಕಳಿಸಿಬಿಟ್ಟರು. "ಬೇಳೆ ಜೊತೆಗೆ ಈರುಳ್ಳಿ ಹಾಕಬೇಡಿ. ಕರಗಿ ಹೋಗುತ್ತೆ" ಎಂದು ಹೇಳಲು ಹೋದೆ. "ನನಗೂ ಗೊತ್ತಿದೆ. ನೀನು ಸುಮ್ಮನೆ ಹೋಗು" ಎಂದರು. ಕೊನೆಗೆ ಮೆಣಸಿನ ಕಾಯಿ ದನಿಯ ವಗ್ಗೆರೆ ಎಲ್ಲೆಲ್ಲಿದೆ' ಎಂದು ಹೇಳಲೂ ಸಹ ಬಿಡದೆ ನನ್ನನ್ನು ಆಚೆಗೆ ದಬ್ಬಿ ಬಾಗಿಲು ಹಾಕಿಕೊಂಡರು. ಅಕ್ಕಿ ಎಷ್ಟು ಹಾಕಿದರೋ, ಬೇಳೆ ಎಷ್ಟು ಹಾಕಿದರೋ ಅಂತೂ ಕುಕ್ಕರ್ ಮುಚ್ಚಳ ಮುಚ್ಚಿ ಹೊರ ಬಂದರು.

ಕುಕ್ಕರ್ ಕೂಗುವವರೆಗೂ ರೂಮಿನಲ್ಲಿ ಕುಳಿತು ಪಾಕ ಶಾಸ್ತ್ರ ಪುಸ್ತಕ ಹುಡುಕಿ ತೆಗೆದು ಈರುಳ್ಳಿ ಹುಳಿ ಮಾಡುವ ಕ್ರಮವನ್ನು ಸಾಂಗವಾಗಿ ನಾಲ್ಕು ಸಲ ಓದಿಕೊಂಡರು ಎಂದು ಕಾಣುತ್ತದೆ. ಈ ವೇಳೆಗೆ ಬಂದ ಒಂದಿಬ್ಬರು ಸ್ನೇಹಿತರನ್ನು ಆ ದಿನದ ಊಟಕ್ಕೆ ಆಹ್ವಾನಿಸಿದರು.

ಕುಕ್ಕರ್ ಕೂಗಿದ ನಂತರ ಎದ್ದು ಅಡಿಗೆ ಮನೆ ಹೊಕ್ಕರು. ಮತ್ತೆ ಬಾಗಿಲು ಬಂದ್. ಒಳಗಡೆ ಡಬ್ಬಗಳನ್ನು ಹುಡುಕುತ್ತಿರುವ ಶಬ್ದ ಕೇಳಿಸುತ್ತಿತ್ತು. ಶಬ್ದ ನಿಂತ ನಂತರ ಎಲ್ಲಾ ಹುರಿಯುವ ಶಬ್ದ ಕೇಳಿಸಿತು. ಯಾವ ಯಾವ ಸಾಂಬಾರ ಹಾಕಿದ್ದರೋ ಒಂದೂ ತಿಳಿಯದು. ಅಂತೂ ಹುರಿದು ಮಿಕ್ಸಿಗೆ ಹಾಕಿದ ಶಬ್ದ ಕೇಳಿಸಿತು. ಮಿಕ್ಸಿ ನಿಂತ ನಂತರ ಕುಕ್ಕರ್ ಶಬ್ದ. ಹೀಗೆ ಬರೀ ಶಬ್ದಗಳಿಂದಲೇ ಒಳಗೆ ಏನೇನು ನಡೆಯುತ್ತಿದೆ ಎಂದು ಅಂದಾಜು ಮಾಡುತ್ತಿದ್ದೆವು. ಸ್ವಲ್ಪ ಸಮಯ ಕುದಿಯಲು ಬಿಟ್ಟಿರಬೇಕು. ಸರಿ ನಾವುಗಳೂ ಕುತೂಹಲ ಬಿಟ್ಟು ಹಾಯಾಗಿ

ಕುಳಿತಿದ್ದೆವು. ಸ್ವಲ್ಪ ಸಮಯದ ನಂತರ ಇದ್ದಕ್ಕಿದ್ದಂತೆಯೇ ಅಟಿಗೆ ಮನೆಯಲ್ಲಿ ಬಾಂಬ್ ಸ್ಫೋಟವಾದ ಶಬ್ದವಾಯಿತು. ಎಲ್ಲರೂ ಹಾರಿ ಓಡಿದೆವು, ಅಟಿಗೆ ಮನೆ ಬಾಗಿಲಿಗೆ. ಅದೇ ವೇಳೆಗೆ ನಮ್ಮ ಯಜಮಾನರೂ ಟವೆಲಿನಿಂದ ಮುಖ ಒರೆಸಿಕೊಳ್ಳುತ್ತಾ ಬಾಗಿಲು ತೆರೆದು ಹೊರ ಬಂದರು. ಕುತೂಹಲದಿಂದ ಒಳಗೆ ಹೊಕ್ಕು ನೋಡಿದೆವು. ಈರುಳ್ಳಿ ಹುಳಿಯ ಪರಿಮಳವೇನೋ ಘಮಘಮಿಸುತ್ತಿತ್ತು. ಆದರೆ ಮಾಡಿದ ಹುಳಿಯನ್ನು ಸ್ಟೌವ್ ಮೇಲಿಂದ ಇಳಿಸಲು ಹೋಗಿ ಕೈ ಜಾರಿ ಬಿದ್ದು ಹುಳಿಯೆಲ್ಲಾ ನೆಲದ ತುಂಬಾ ಸುರಕೊಂಡಿತ್ತು. ಅಂತೂ ಅವರ ಅಡಿಗೆಯೂ ಮುಗಿದಿತ್ತು.

-ಸುಧಾ ಶೇಷಾದ್ರಿ
ಬೆಂಗಳೂರು

★

## 'ಮಧು'ಪಾಕ

'ಅಡಿಗೆ ಮನೆ' 'ಅಡಿಗೆ ಮಾಡುವವಳು' ಎಂದು ಹೆಂಗಸರನ್ನು ಅಡಿಗೆಗೇ ಮೀಸಲಾಗಿಟ್ಟ ಮೀಸೆ ಹೊತ್ತ ಗಂಡಸರೇ ಹೇಳಿ, ನಿಮ್ಮಲ್ಲಿ ನೂರು ಜನರಲ್ಲಿ ಒಬ್ಬ ನಳ, ಸಾವಿರ ಜನರಲ್ಲಿ ಒಬ್ಬ 'ಭೀಮ' ಇರಬಹುದೇನೋ? ಹಾಗೆಂದ ಮಾತ್ರಕ್ಕೆ 'ನಳ' 'ಭೀಮ'ರು ನೀವೇ ಎಂದುಕೊಂಡು ಸಾರಾ ಸಗಟಾಗಿ ಎಲ್ಲಾ ಹೆಂಗಸರನ್ನೂ ಅವರ ಅಡಿಗೆ ಮನೆಯನ್ನೂ ಅಲ್ಲಗಳೆಯಬಹುದೇ? ಪ್ರಾಯಶಃ ನಿಮಗೂ 'ನಳ' 'ಭೀಮ' ಪಾತ್ರ ವಹಿಸುವ ಸದವಕಾಶವನ್ನು ನಿಮ್ಮ ಅರ್ಧಾಂಗಿಯರೂ ಒದಗಿಸಿ ಕೊಟ್ಟಿರಬಹುದಲ್ಲವೇ? ನಾನಂತೂ ಕೆಲವೊಮ್ಮೆ ನಮ್ಮ ಯಜಮಾನರಿಗೆ, ನನ್ನ ಉಪಸ್ಥಿತಿಯಲ್ಲೇ ಈ ಅವಕಾಶವನ್ನು ಒದಗಿಸಿ ಕೊಡುತ್ತಿದ್ದೆ. ಅವರೂ ಅದನ್ನು ಯಾವ ಕರಾರು ಅಥವಾ ತಕರಾರುಗಳಿಲ್ಲದೆ ಸ್ವೀಕರಿಸುತ್ತಿದ್ದರು. ಆದರೆ ಒಮ್ಮೆ ನನ್ನ ಅನುಪಸ್ಥಿತಿಯಲ್ಲಿ ಕೂಡಾ ತಮಗೆ ದೊರೆಯುವ ಈ ಅವಕಾಶದ ಸದುಪಯೋಗ ಪಡೆದುಕೊಂಡರು. ನಾನು ಅನುಮಾನದಿಂದಲೇ ಅಡಿಗೆ ಮನೆಯ ಜವಾಬ್ದಾರಿಯ ಜೊತೆಗೆ ಕೆಲವು ಕಿವಿ ಮಾತುಗಳನ್ನು ಹಾಗೂ ನನ್ನ ಅನುಭವದ ಸಲಹೆಗಳನ್ನು ಅವರ ಕಿವಿಗಳಿಗೆ ಊದಿದೆನು. ಅವರೂ ಕೂಡಾ ಅದಾವುದನ್ನೂ ಅಲ್ಲಗಳೆಯದೆ, ನಿರಾಕರಿಸದೆ, ಅಡಿಗೆ ಮನೆಯ ಜೊತೆಗೆ ಇಡೀ ಮನೆಯ ಜವಾಬ್ದಾರಿಯನ್ನು ಸವಾಲಿನಂತೆ ಸ್ವೀಕರಿಸಿದರು.

ಬೇಸಿಗೆಯ ರಜಾ ದಿನಗಳಾದ್ದರಿಂದ ನಾನು ಮಕ್ಕಳನ್ನೆಲ್ಲಾ ನನ್ನೊಂದಿಗೆ ಕರೆದುಕೊಂಡು ನನ್ನ ತವರೂರಾದ 'ಶಿವಮೊಗ್ಗ'ಕ್ಕೆ ಹೋಗಿದ್ದೆನು. ಅಲ್ಲಿಯ ಆತಿಥ್ಯ ಮಕ್ಕಳ ಆಟ-ಪಾಟಗಳಲ್ಲಿ ಮನ ಮುದಗೊಂಡಿದ್ದರೂ ಮನಸ್ಸು ಮಾತ್ರ ನಮ್ಮ ಮನೆಯ ಕಡೆಗೆ, ನಮ್ಮ ಯಜಮಾನರು ಸ್ವೀಕರಿಸಿದ ಸವಾಲಿನ ಕಡೆ, ಅವರಿಂದ ನಿರೀಕ್ಷಿಸಬಹುದಾದ ಪಾಕ ವ್ಯವಸ್ಥೆಯ ಬಳಿಯೇ ಸುತ್ತುತ್ತಿತ್ತು. ಹಾಗಾಗಿ ಅವರಿಗೆ ಕೊಟ್ಟ ಮಾತಿನಂತೆ ಮೂರು-ನಾಲ್ಕು ದಿನಗಳಲ್ಲೇ ತವರಿನಿಂದ ಹಿಂದಿರುಗಿ ಬಂದೆನು. ಮನೆಯ ಹೊರ ಬಾಗಿಲ ಬಳಿಯೇ ಹೊಸ ರುಚಿ ಹೊಸ (ದುರ್) ವಾಸನೆ ಮೂಗಿಗೆ ಬಡಿಯಿತು. ಮನೆಯ ಕರೆಗಂಟೆಯನ್ನು ಒತ್ತಿದೆನು. ನಮ್ಮವರು ಹಸನ್ಮುಖದಿಂದಲೇ ನನ್ನನ್ನು ಒಳಗೆ ಸ್ವಾಗತಿಸಿ "ನಾನು ಇಲ್ಲೇ ಸ್ವಲ್ಪ ಗೆಳೆಯರೊಬ್ಬರ ಮನೆಗೆ ಹೋಗಿ ಬರುವೆನು" ಎಂದು ಹೇಳಿ ಕಣ್ಮರೆಯಾದರು. ಮನೆಯ ಒಳಗಡೆ ಕಾಲಿಡುತ್ತಲೇ ಸ್ವಾಭಾವಿಕವಾಗಿಯೇ ದೊಡ್ಡದಾದ ನನ್ನ ಮೂಗು ಹೊಸ ವಾಸನೆಯನ್ನು ಗ್ರಹಿಸಿತು. ಕಾಲುಗಳು ಆ ಸ್ಥಳಕ್ಕೆ ಧಾವಿಸಿದವು. ಕಣ್ಣುಗಳು ಪಕ್ಷಿನೋಟ ಬೀರಿದವು. ಕೈಗಳು ಹೊಸ ವಸ್ತುವಿಗಾಗಿ ತಡಕಾಡಿ, ಹುಡುಕಿಯೇ ಬಿಟ್ಟವು. ನನ್ನ ಕೈಗೆ ಸಿಕ್ಕ ಆ ವಸ್ತು ಯಾವುದು ಬಲ್ಲಿರಾ? ಅದೇ ದುಗ್ಧಪಾಕ. ಅದರ ಬಗ್ಗೆ ತಿಳಿಯುವ ಕುತೂಹಲ ಕೆರಳಿತು. ಆದರೆ ನಮ್ಮ ಮನೆಯವರು ಹೊರಗೆ ಹೋಗಿದ್ದರು. ನನ್ನ ತಲೆ ಆ ಪಾಕದ ಬಗ್ಗೆ ಯೋಚಿಸತೊಡಗಿತು. ಅಡಿಗೆ ಮನೆಯಲ್ಲಿ ನಾನು ಅಡಿಗೆ-ತಿಂಡಿಗಳನ್ನು ಮುಚ್ಚಿ ಇಡುವ ಜಾಗಗಳನ್ನೆಲ್ಲಾ ಹುಡುಕಿದೆ. ಎಲ್ಲೂ ಕಣ್ಣಿಗೆ ಬೀಳಲಿಲ್ಲ. ನನ್ನ ಪತ್ತೇದಾರಿ ಕೆಲಸ ಮುಂದುವರಿದೇ ಇತ್ತು. ಕೊನೆಯ ಪ್ರಯತ್ನವೆಂಬಂತೆ ಅಡಿಗೆ ಮನೆಯ ಕೈಬಚ್ಚಲಿನಲ್ಲಿರುವ ಪಾತ್ರೆಗಳ ಬಣ್ಣ-ವಾಸನೆಗಳನ್ನು ಗಮನಿಸತೊಡಗಿದೆನು. ಮರೆಯಲ್ಲಿ ಅಡಗಿ ಕುಳಿತು ಆಟವಾಡಿಸುವ ತುಂಟ ಮಗುವಿನಂತೆ, ಪಾತ್ರೆಗಳ ಮಧ್ಯದಲ್ಲಿ ಅಡಗಿ ಕುಳಿತ ಒಂದು ಹೊಸ ಬಣ್ಣದ ಪಾತ್ರೆ ನನ್ನ ಗಮನ ಸೆಳೆಯಿತು.

ಅದನ್ನು ಕೈಗೆತ್ತಿಕೊಂಡು ಪರೀಕ್ಷಿಸಿದೆನು. ಸ್ಟೀಲು, ಹಿತ್ತಾಳೆ, ಅಲ್ಯುಮಿನಿಯಂ, ತಾಮ್ರ ಯಾವುದೂ ಅಲ್ಲದ, ನಾನು ಅಡಿಗೆ ಮನೆಯಲ್ಲಿ ಬಳಸದಿರುವ ಒಂದು ಹೊಸ ಪಾತ್ರೆ ಅದಾಗಿತ್ತು. 'ಅದಾವ ಪಾತ್ರೆ'ಯೆಂದು ಎರಡು ನಿಮಿಷ ತಲೆ ಕೆಡಿಸಿಕೊಂಡೆ. ಸಾರ್ಥಕವಾಯಿತು. ನನಗೂ ತಲೆ ಇದೆ ಎಂಬ ನಂಬಿಕೆ ಬಂದಿತು. ತೆನಾಲಿರಾಮನ ಮುಖವನ್ನು ಮರೆಮಾಡಿದ ಮಡಕೆಯಂತೆ, ಕ್ಷಣಕಾಲ ನನ್ನ ಬುದ್ಧಿಯನ್ನು ಕೆಡಿಸಿದ ಆ ಪಾತ್ರೆಯ ಬಗ್ಗೆ ಕೋಪವೂ ಬಂದಿತು. ಮರುಕ್ಷಣವೇ ನೆನಪಾಯಿತು. ಅದು ಪ್ರತಿದಿನವೂ ನಾನು ಹಾಲನ್ನು ಕಾಯಿಸುವ ಸ್ಟೀಲಿನ ಡಬರಿಯಾಗಿತ್ತು. ಬೆಳ್ಳನೆಯ ಹಾಲನ್ನು ಕಾಯಿಸಿದ ಬಿಳಿಯ ಸ್ಟೀಲಿನ ಪಾತ್ರೆಯ ಒಳ ಹಾಗೂ ಹೊರ ಭಾಗಗಳೆರಡೂ ಕಾಡಿಗೆಯ ಬಣ್ಣಕ್ಕೆ ತಿರುಗಿ ಸ್ಟೀಲು, ಹಿತ್ತಾಳೆ, ತಾಮ್ರ, ಅಲ್ಯುಮಿನಿಯಂಗಳಲ್ಲ ಯಾವುದೋ ಹೊಸ ಲೋಹದ ಪಾತ್ರೆಯಂತೆ ಕಂಗೊಳಿಸುತ್ತಿತ್ತು. ನನ್ನ ಸಂಶೋಧನೆ ಮುಗಿಯುವ ವೇಳೆಗೆ ಆಗಲೇ 1/2 ಗಂಟೆ ಕಳೆದಿತ್ತು. ಇತ್ತ ನಮ್ಮ ಯಜಮಾನರೂ ಮನೆಗೆ ಬಂದರು. ಇಷ್ಟಾದರೂ ಆ ಹೊಸ ರುಚಿಯ ಬಗ್ಗೆ ನನ್ನ ಕುತೂಹಲ ಜಾಗೃತವಾಗಿಯೇ ಇತ್ತು. "ಇದಾವ ಹೊಸ ರುಚಿ"? ಎಂದು ನಮ್ಮವರನ್ನು ಹಾಸ್ಯ ಮಾಡುವ ರೀತಿಯಲ್ಲಿ ಕೇಳಿದೆ. ಆಗ ನಮ್ಮ ಯಜಮಾನರೋವಾಚ : "ಮಾಲತೀ...ಕೇಳುವಂಥವಳಾಗು" ಎಂದು ಅಳುಕಿನ ಮರೆಯಲ್ಲೇ ನಗುವಿನ ಮುಖವಾಡ ಧರಿಸಿ, ಶ್ರೀಕೃಷ್ಣನು ಅರ್ಜುನನಿಗೆ ಗೀತೆಯ ಮರ್ಮವನ್ನು ತಿಳಿಸಿದಂತೆ, ಇವರು ತಮ್ಮ ಕರ್ಮವನ್ನು ನನಗೆ ಸವಿವರ ತಿಳಿಸಿದರು. ನಾನು ಅದನ್ನು ನಿಮಗೆ ಸಂಕ್ಷೇಪವಾಗಿ ತಿಳಿಸುತ್ತೇನೆ.

ನನ್ನ ಯಜಮಾನರು ಭದ್ರಾವತಿಯ ಕಾಗದ ಕಾರ್ಖಾನೆಯ ಉದ್ಯೋಗಿ. ಇವರು ಕೆಲಸಕ್ಕೆ ಹೊರಡುವ ಸ್ವಲ್ಪ ಸಮಯದ ಮೊದಲು ಗ್ಯಾಸ್ ಹಚ್ಚಿ ಹಾಲನ್ನು ಕಾಯಿಸಲು ಒಲೆಯ ಮೇಲೆ ಇಟ್ಟರು. ಇವರ ಗೆಳೆಯರಾರೋ ಬಂದು ಕರೆದರು. ಹಾಲನ್ನು ಕಾಯಿಸಲು ಇಟ್ಟಿರುವುದನ್ನು ಮರೆತು, ಮನೆಗೆ ಬೀಗ ಹಾಕಿ, ಬೀಗದ ಕೈಯನ್ನೂ ತೆಗೆದುಕೊಂಡು ಕೆಲಸಕ್ಕೆ ಹೋದರು. ಗ್ಯಾಸ್ ಹಚ್ಚಿದ್ದರಿಂದ ಹಾಲು ಕಾಯುತ್ತಲೇ ಇತ್ತು. ಆದರೆ ಕೇವಲ 2-3 ದಿನಗಳಿಗಾಗುವಷ್ಟು ಮಾತ್ರ ಗ್ಯಾಸ್ ಸಿಲೆಂಡರ್‌ನಲ್ಲಿ ಇದ್ದ ಕಾರಣ ಅಕ್ಕ- ಪಕ್ಕದವರಾಗಲೀ ಮನೆಯ ಯಾವುದೇ ವಸ್ತುಗಳಿಗೂ ಹಾನಿ ಆಗಲಿಲ್ಲ. ಆದರೆ 1/2ಲೀಟರ್ ಹಾಲು 3-4 ಗಂಟೆಗಳಷ್ಟು ಕಾಲ ಒಲೆಯ ಮೇಲಿದ್ದ ಕಾರಣ ಅಗ್ನಿ ದೇವನ ಕೋಪ-ತಾಪಗಳಿಗೆ ಅದರೊಳಗಿದ್ದ ದುಗ್ಧ ಪಾಕವೂ ಕೂಡಾ ಹೊಸ ಬಣ್ಣ, ಹೊಸ ವಾಸನೆ, ಹೊಸ ರುಚಿಯೊಂದಿಗೆ ನಾನು ತವರಿಗೆ ಹೋದ ಸಂಗತಿಯನ್ನು ಸಾರುವ ಮಧು'ಪಾಕವಾಗಿತ್ತು.

ಇದು ಸುಮಾರು 7-8 ವರ್ಷಗಳ ಹಿಂದಿನ ಘಟನೆಯಾದರೂ ನನ್ನ ಕಣ್ಣ ಮುಂದೆ ಇನ್ನೂ ಹಚ್ಚ ಹಸುರಾಗಿದೆ. ಈ ಘಟನೆಯ ನಂತರ ನಾನು ನನ್ನ ಯಜಮಾನರೊಬ್ಬರನ್ನೇ ಮನೆಯಲ್ಲಿ ಬಿಟ್ಟು ಯಾವ ಊರಿಗೂ ಹೋಗುವುದಿಲ್ಲವೆಂದು ಭೀಷಣ ಪ್ರತಿಜ್ಞೆ ಮಾಡಿದ್ದೇನೆ.

ಗತಕಾಲದ 'ನಳ' ಪಾಕ 'ಭೀಮ' ಪಾಕಗಳು ಅವರಿಬ್ಬರ (ನಳ-ಭೀಮ) ಉಪಸ್ಥಿತಿಯಲ್ಲಿ ತಯಾರಾಗಿ ಪ್ರಖ್ಯಾತಿ ಪಡೆದರೆ, ಇಂದಿನ (ವರ್ತಮಾನದ) ದಿನಗಳಲ್ಲಿ ನಮ್ಮ ಅಡಿಗೆ ಮನೆಯ ಪ್ರಯೋಗ ಶಾಲೆಯಲ್ಲಿ 'ನಳ'-'ಭೀಮ' ನರ '- ನಾರಿಯರಾರೂ ಉಪಸ್ಥಿತರಿಲ್ಲದೆ, ಬೀಗ ಮುದ್ರೆಯಿಂದ ಸುಭದ್ರವಾದ ಗೃಹದಲ್ಲಿ ಕೇವಲ ಅಗ್ನಿಮುಖೇನ ತಯಾರಾದ "ದುಗ್ಧಪಾಕ" ಅಥವಾ "ಮಧುಪಾಕ" ಕೂಡ ಪ್ರಖ್ಯಾತಿ ಪಡೆಯುವುದರಲ್ಲಿ ಸಂಶಯವಿಲ್ಲ ಎಂಬುದು ನನ್ನ ನಂಬಿಕೆ.

ಮಾಲತಿ. ಎಂ. ಕಾನಿಟ್ಕರ್
ಭದ್ರಾವತಿ

ಚಿ| ಸೌ. ವಿನುತ ಹಾಗೂ ಚಿ| ಎಂ. ಗಣೇಶ್ -ಇವರ ವಿವಾಹವು ದಿ. 20–9–91 ರಂದು ಬೆಂಗಳೂರಿನ ರಾಜಾಜಿನಗರದ ರಾಜರಾಜೇಶ್ವರಿ ಕಲ್ಯಾಣ ಮಂಟಪದಲ್ಲಿ ನೆರವೇರಿತು.



ವಧುವಿನ ತಾಯಿ : ಕೆ. ರಾಧಮ್ಮ

ವಧುವಿನ ತಂದೆ : ಕೆ. ಎಂ. ಕೃಷ್ಣಮೂರ್ತಿ

ವರನ ತಾಯಿ : ಮುನಿಯಮ್ಮ

ವರನ ತಂದೆ : ಮುನಿಶಾಮಪ್ಪ





## ನವದಂಪತಿಗಳು

ಚಿ| ಸೌ| ವೀಣಾ ಮತ್ತು ಚಿ| ಪದ್ಮನಾಭ ಇವರ ವಿವಾಹವು ದಿ. 15–9–1991ರಂದು ಬೆಂಗಳೂರಿನ ವಿದ್ಯಾವಿಹಾರದಲ್ಲಿ ನೆರವೇರಿತು.

ವಧುವಿನ ತಾಯಿ: ಪಿ. ಎನ್. ಬ್ರಾಹ್ಮಣಿ

ವದುವಿನ ತಂದೆ : ಪಿ. ಆರ್. ನಾಗರಾಜ ರಾವ್

ವರನ ತಾಯಿ : ಎಚ್.ಜೆ. ಸರಳಾಬಾಯಿ

ವರನ ತಂದೆ : ಎಚ್.ಕೆ. ಜಯಸ್ವಾಮಿ



ಈ ನವದಂಪತಿಗಳ ವಿವಾಹದ ಪ್ರಥಮ ವಾರ್ಷಿಕೋತ್ಸವಕ್ಕೆ "ವನಿತಾ" ಹಾರ್ದಿಕ ಅಭಿನಂದನೆಗಳನ್ನು ಹಾಗೂ ದೀರ್ಘಕಾಲ ಸುಖ ದಾಂಪತ್ಯ ಜೀವನವನ್ನು ಹಾರೈಸುತ್ತದೆ.

ಭಾರತದಲ್ಲಿ ಮೆಕಾಲೆ ಮಹಾಶಯ ಮಾಡಿದ ಘನಕಾರ್ಯವೆಂದರೆ ಇಂಗ್ಲೀಷ್ ಶಿಕ್ಷಣವನ್ನು ಆರಂಭಿಸಿದ್ದು, ಮಾತ್ರವಲ್ಲ ಭಾರತೀಯರು ವೈಜ್ಞಾನಿಕ ಚಿಂತನೆಯೇ ಇಲ್ಲದ ಮೂಢರು, ಪ್ರತಿಗಾಮಿಗಳು, ಅವರನ್ನು ಇಂಗ್ಲೀಷ್ ಶಿಕ್ಷಣದಿಂದ ಮಾತ್ರವೇ ಪ್ರಗತಿ ಪಥದತ್ತ ಕೊಂಡೊಯ್ಯಲು ಸಾಧ್ಯ ಎಂಬ ಭಾವನೆಯನ್ನು ಭಾರತೀಯರಲ್ಲಿ ಆಳವಾಗಿ ಬೇರೂರಿಸುವಲ್ಲಿ ಯಶಸ್ವಿಯಾದ. ಇದುರಿಂದಾಗಿ ಭಾರತೀಯರಲ್ಲಿ ಸ್ವಯಂ ಚಿಂತನಶಕ್ತಿ ನಾಶವಾಗಿದ್ದು ಮಾತ್ರವಲ್ಲ ಭಾರತೀಯ ವಿಜ್ಞಾನ, ವೈದ್ಯಕೀಯ ಪದ್ಧತಿ, ತಾವು ರೂಪಿಸಿಕೊಂಡ ಸ್ವಾವಲಂಬಿಯಾದ ಜೀವನ ವಿದಾನಗಳನ್ನು ಸ್ವಯಂ ಭಾರತೀಯರೇ ತಿರಸ್ಕರಿಸುವಂತಾಯಿತು. ರಾಜಕೀಯವಾಗಿ ಬ್ರಿಟಿಷರ ಆಡಳಿತ ಕೊನೆಗೊಂಡರೂ ಚಿಂತನೆ, ಜೀವನ ವಿಧಾನಗಳಲ್ಲಿ ಭಾರತೀಯರು ಬ್ರಿಟಿಷ್ ನಿಷ್ಠರಾದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಪರಾವಲಂಬಿಗಳಾದರು. ಇದು ಎಲ್ಲಿಯವರೆಗೆ ಮುಂದುವರಿದಿದೆಯೆಂದರೆ, ಆಧುನಿಕ ಗಣಕ ಯಂತ್ರದ ಸಮಸ್ಯೆಗಳಿಗೆ ಪಾಣಿನಿಯ ವ್ಯಾಕರಣದಲ್ಲಿ ಪರಿಹಾರ ಇದೆಯೆಂದು ರಿಕ್‌ಬ್ರಿಗ್ಸ್ ಹೇಳಿದಾಗಲೇ, ಪಾಣಿನಿಯ ಹಿರಿಮೆಯ ಬಗ್ಗೆ (ಅದೂ ಆತನ ವ್ಯಾಕರಣದ ಕೂಲಂಕಷ ಅಧ್ಯಯನ ನಡೆಸದೆ) ವಾಚಾಮಗೋಚರವಾಗಿ ಹೊಗಳುತ್ತೇವೆ.

ಆಯುರ್ವೇದ ಚಿಕಿತ್ಸಾ ವಿಧಾನ, ಸುಶ್ರುತ ಸಂಹಿತೆ ಹೀಗೆ ಭಾರತೀಯ ವೈದ್ಯ ವಿಜ್ಞಾನಕ್ಕೂ ಇದೇ ಗತಿ. ಹೆರವರು ಇವುಗಳ ಅಧ್ಯಯನ ಮಾಡಿ ಬೆಲೆ ಕಟ್ಟಿದ ನಂತರವೇ ಇಲ್ಲಿ ಹೊಗಳಲಾಗುತ್ತಿದೆ. (ಅದೇ ಸಮಯ ಆಧುನಿಕತೆ ಹುಚ್ಚು ಹಿಡಿದು, ಔಷಧ ಸಸ್ಯಗಳಿಂದ ತುಂಬಿದ ಕಾಡುಗಳನ್ನು ನಾಶ ಮಾಡುತ್ತ, ಸಣ್ಣಪುಟ್ಟ ಕಾಯಿಲೆಗಳಿಗೂ ಇಂಗ್ಲೀಷ್ ಮೆಡಿಸಿನ್‌ಗಳಿಗೆ ಶರಣು ಹೋಗುವ ವಿಷಯ ಬೇರೆ) ಫಸಲು ಚೆನ್ನಾಗಿ ಬರಲು ರಾಸಾಯನಿಕ ಗೊಬ್ಬರವನ್ನೂ, ಬೆಳೆ ಹಾಳಾಗದಂತೆ ಕಾಪಾಡಲು ರಾಸಾಯನಿಕ ಕೀಟನಾಶಕಗಳನ್ನೂ ಬಳಸದಿದ್ದರೆ ಆತ ರೈತನೇ ಅಲ್ಲ ಎಂಬಷ್ಟು ಪುರೋಗಾಮಿತನ ನಮಗೆ ರಕ್ತಗತವಾಗಿದೆ.

ಸ್ವಯಂ ಚಿಂತನೆಗೆ ಮೂಲವಾದ ಪರಿಸರದೊಂದಿಗೆ ಬೆಳೆದು ಬಂದ ಮಾತೃಭಾಷಾ ಶಿಕ್ಷಣದಿಂದ ಭಾರತೀಯರು ವಿಮುಖರಾಗಿದ್ದೇ ಇಂತಹ ಅನಿಷ್ಟಗಳಿಗೆ ಮೂಲ ಕಾರಣ ಎಂದರಿತ ಶಿಕ್ಷಣ ತಜ್ಞರು, ಮಕ್ಕಳಿಗೆ ಮಾತೃಭಾಷೆಯಲ್ಲೇ ಶಿಕ್ಷಣ ನೀಡಬೇಕೆಂದು ಒತ್ತಾಯಿಸಿದರು. ಕನಿಷ್ಠ ಪಕ್ಷ ಪ್ರಾಥಮಿಕ ಹಂತದಲ್ಲಾದರೂ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವುದು ಉಚಿತ ಎಂದು ಹೇಳಿದರು. ಹೀಗೆ ಹೇಳಿದಾಗಲೆಲ್ಲಾ,




## ಪ್ರತಿಗಾಮಿತನಕ್ಕೆ ದಂಡನೆ ಕೇಶ ಮುಂಡನ

ಇದು ಜನಸಾಮಾನ್ಯರ ಮಕ್ಕಳನ್ನು ಅವಕಾಶ ವಂಚಿತರಾಗಿಸುವ ಹುನ್ನಾರವೆಂದೂ, ಮಾತೃಭಾಷಾ ಪ್ರೇಮದಲ್ಲಿ ನಾವು ಯಾರಿಗೂ ಕಡಿಮೆಯಿಲ್ಲವಾದರೂ, ಮಕ್ಕಳ ಭವಿಷ್ಯ ರೂಪಿಸುವ ಸಹಜ ಬಾಧ್ಯತೆ ಇರುವ ಹೆತ್ತವರಿಗೆ ಮಕ್ಕಳ ಶಿಕ್ಷಣ ಮಾಧ್ಯಮ ಯಾವುದಾಗಿರಬೇಕೆಂದು ನಿರ್ಣಯಿಸುವ ಹಕ್ಕಿದೆಯೆಂದೂ. ಪ್ರಜಾತಂತ್ರ ನೀಡಿದ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುವುದು ಸರಿಯಲ್ಲವೆಂದೂ, ಮಕ್ಕಳ ಮೇಲೆ ಭಾಷಾ ಹೇರಿಕೆ ಸಲ್ಲದೆಂದೂ (ಅವರ ದೃಷ್ಟಿಯಲ್ಲಿ ಇಂಗ್ಲೀಷ್ ಹೇರಿಕೆಯಲ್ಲ) ತಮ್ಮ ಹಕ್ಕನ್ನು ಮೆರೆದರು. ಮಾತೃಭಾಷಾ ವ್ಯಾಮೋಹದಿಂದ ಮಕ್ಕಳು ಬಾವಿಯೊಳಗಿನ ಕಪ್ಪೆಗಳಂತಾಗಬಾರದೆಂದೂ, ಜೊತೆಗೆ ಪ್ರಾದೇಶಿಕ ಸಂಕುಚಿತ ಭಾವನೆ ಬೆಳೆದು ಮಕ್ಕಳ ಭವಿಷ್ಯ ಹಾಳಾಗಬಾರದೆಂದೂ ಹೆತ್ತವರು ಮಕ್ಕಳನ್ನು ಇಂಗ್ಲೀಷ್ ಮಾಧ್ಯಮದ ಶಾಲೆಗೆ ಕಳಿಸಲಾರಂಭಿಸಿದರು. ಇಲ್ಲಿಗೆ ಇಂಗ್ಲೀಷ್ ಪ್ರಗತಿ ಪಥದಲ್ಲಿ ಕೊಂಡೊಯ್ಯುತ್ತದೆಂಬ ಹಾಗೂ ಭಾರತೀಯ ಭಾಷೆಗಳು ಪ್ರಾದೇಶಿಕ ಸಂಕುಚಿತ ವಾದವನ್ನು, ಪ್ರತಿಗಾಮಿತನವನ್ನೂ ಪ್ರತಿಪಾದಿಸುತ್ತವೆ ಎಂಬ ನಂಬಿಕೆ ಭಾರತೀಯರಲ್ಲಿ ದೃಢವಾಗಿ ಬೇರೂರಿದ್ದು ನಿಚ್ಚಳವಾಯಿತು.

ಹೀಗೆ ಮಕ್ಕಳ ಭವಿಷ್ಯ ರೂಪಿಸುವ ಜವಾಬ್ದಾರಿಯನ್ನು ಇಂಗ್ಲೀಷ್ ಮಾಧ್ಯಮದ ಶಾಲೆಗಳಿಗೆ ಒಪ್ಪಿಸಿದ ನಂತರ, ವಿದ್ಯಾರ್ಥಿಗಳನ್ನು ಪ್ರಗತಿ ಪಥದಲ್ಲಿ ಕೊಂಡೊಯ್ಯುವ ಸದುದ್ದೇಶದಿಂದ ಕೆಲ ಇಂಗ್ಲೀಷ್ ಶಾಲೆಗಳು ಕೆಲ ನಿರ್ದಿಷ್ಟ ನಿಯಮಗಳನ್ನು ಜಾರಿಗೆ ತಂದುವು. ಅವುಗಳಲ್ಲಿ ಪ್ರಾದೇಶಿಕ ಸಂಕುಚಿತ ಭಾವ ಹಾಗೂ ಪ್ರತಿಗಾಮಿತನದಿಂದವಿದ್ಯಾರ್ಥಿಗಳನ್ನು ದೂರವಿಟ್ಟು, ಅವರಲ್ಲಿ ವಿಶಾಲ ಮನೋಭಾವ ಹಾಗೂ ವೈಜ್ಞಾನಿಕ ಮನೋಭಾವ ಹೆಚ್ಚಿಸುವ ಏಕೈಕ ಉದ್ದೇಶದಿಂದ ಶಾಲೆಯಲ್ಲಿ ವಿದ್ಯಾರ್ಥಿಗಳು ಇಂಗ್ಲೀಷ್‌ನಲ್ಲೇ ಮಾತನಾಡತಕ್ಕದ್ದು (ಖಾಸಗಿಯಾಗಿಯೂ ಕೂಡ) ಎಂಬ ಕಟ್ಟಪ್ಪಣೆಯೂ ಒಂದು ಪ್ರಮುಖ ನಿಯಮ. ಹಾಗೇನಾದರೂ ವಿದ್ಯಾರ್ಥಿಗಳು ಅಪ್ಪಿತಪ್ಪಿ ಮಾತೃಭಾಷೆಯಲ್ಲಿ ಮಾತನಾಡಿದರೆಶಿಕ್ಷಿಸುವ ಪದ್ಧತಿಯನ್ನು ಜಾರಿಗೆ ತಂದುವು. ವೈಜ್ಞಾನಿಕ ಮನೋಭಾವನೆ ರಕ್ತಗತವಾಗುವುದು ಅಷ್ಟು ಸುಲಭವಲ್ಲವಲ್ಲ. ಇಂತಹ ನಿಯಮೋಲ್ಲಂಘನ ಮಾಡಿದ ಕೇರಳದ ಚಾತ್ತಮಂಗಲಂನ ಶಾಲೆಯ ವಿದ್ಯಾರ್ಥಿಯೊಬ್ಬನಿಗೆ ನೀಡಿದ ಶಿಕ್ಷೆ ವಿಶಿಷ್ಟ.

ಆತ ಏಳನೆಯ ಇಯತ್ತೆಯ ವಿದ್ಯಾರ್ಥಿ, ವಯಸ್ಸು 13. ಒಂದು ದಿನ ಆತ ತರಗತಿಯಲ್ಲಿ ತನ್ನ ಸ್ನೇಹಿತನೊಂದಿಗೆ ಮಾತನಾಡುತ್ತಿದ್ದಾಗ ಅದು ಹೇಗೋ ಆತನ ಬಾಯಿಯಿಂದ ಒಂದು ಮಲಯಾಳ ಪದ ಉರುಳಿತು. ಇದು ಶಿಕ್ಷಕ ವರ್ಗಕ್ಕೆ ತಿಳಿಯಿತು. ಕ್ಷಮಿಸಬಲ್ಲಂತಹ ಕ್ಷುಲ್ಲಕ ಘಟನೆಯಾದರೂ, ಹೀಗೆ ಬಿಟ್ಟಲ್ಲಿ ಮುಂದೆ ವಿದ್ಯಾರ್ಥಿಗಳೆಲ್ಲ ತಮ್ಮ ಮಾತೃಭಾಷೆಯಲ್ಲಿ ಮಾತನಾಡಲಾರಂಭಿಸಿ ಅವರ ಪ್ರಗತಿ ಕುಂಠಿತವಾಗುವ, ಹಾಗೂ ನಾಳಿನ ಪ್ರಜೆಗಳ ಭವಿಷ್ಯ ಭವ್ಯವಾಗಿಸುವ ತಮ್ಮ ಶಾಲೆಯ ಮೂಲೋದ್ದೇಶಕ್ಕೆ ಕಳಂಕ ತಗಲುವ ಅಪಾಯದ ಮುನ್ಸೂಚನೆ ಕಂಡ ಶಿಕ್ಷಕ ವರ್ಗ ಎಚ್ಚೆತ್ತು ಕಾರ್ಯ ತತ್ಪರವಾಯಿತು. ಅವನನ್ನು ಸ್ಕೂಲಿನ ಪ್ರಿನ್ಸಿಪಾಲರು ತಮ್ಮ ಕೋಣೆಗೆ ಕರೆದು ಛೀಮಾರಿ ಹಾಕಿದರು. ಹಾಗೂ ಆ ವಿದ್ಯಾರ್ಥಿಯನ್ನು ಕ್ಷೌರದಂಗಡಿಗೆ ಕಳಿಸಿ, ನುಣ್ಣಗೆ ತಲೆ ಬೋಳಿಸಲಾಯಿತು.

ಈ ವಿದ್ಯಮಾನ ನಡೆದ ನಂತರ ಹೆತ್ತವರ ಪ್ರತಿಕ್ರಿಯೆ ಹೇಗಿತ್ತೋ ತಿಳಿಯದು. ಪ್ರಾಯಶಃ ತಮ್ಮ ಮಗ ಮಾತೃಭಾಷೆಯಲ್ಲಿ (ಮಲಯಾಳ) ಮಾತನಾಡುವ ಘೋರಾಪರಾಧ ಮಾಡಿದನಲ್ಲ ಎಂದು ತಲೆ ತಗ್ಗಿಸಿರಬಹುದು. ಹಾಗೂ ಇಂತಹ ಮಹಾಪರಾಧ ಮಾಡಿದರೂ ಕಠಿಣವಾಗಿ ಶಿಕ್ಷಿಸದೆ ಸಣ್ಣ ಶಿಕ್ಷೆ ನೀಡಿ ಮುಂದೆ ಆತ ಅಂತಹ ತಪ್ಪೆಸಗದಂತೆ ತಮ್ಮ ಮಗನನ್ನು ಎಚ್ಚರಿಸಿದ ಶಾಲಾಅಧಿಕಾರಿಗಳನ್ನು ಅಭಿನಂದಿಸಿರಬಹುದು.

ಇಂಗ್ಲಿಷ್ ಮೀಡಿಯಂ ವಾಳ್ಗೆ
ಇಂಗ್ಲಿಷ್ ಮೀಡಿಯಂ ಗೆಲ್ಗೆ!

## ಬಾಂಧವ್ಯ

ಮುದುಕಿ ತನ್ನ ಗುಡಿಸಲೊಳಗೆ ಹರಕು ಚಾಪೆ ಹಾಸಿ ಮಲಗಿದ್ದಳು.

ಹೊರಗಡೆ ಧೋ ಎಂದು ಮಳೆ ಸುರಿಯುತ್ತಿತ್ತು. ಒಂದೇ ಸಮನೆ 'ರುಂ ರುಂ' ಸದ್ದೆಬ್ಬಿಸಿ ಗಾಳಿ ಬೀಸುತ್ತಿತ್ತು. ದೂರದಿಂದ ಕಡಲಲೆಗಳ ಭೀಕರ ಅಬ್ಬರ–ಆರ್ಭಟಗಳೂ ಕೇಳಿಸುತ್ತಿದ್ದವು.

ಮುದುಕಿ ಜ್ವರದಿಂದ ಬಳಲುತ್ತಿದ್ದಳು. ಮೈ ಕೊರೆಯುವ ಚಳಿಯನ್ನು ತಡೆಯಲಾರದೆ ಕಳೆದ ಏಳೆಂಟು ದಿನಗಳಿಂದಲೂ ಅತೀವ ಯಾತನೆಯುನ್ನು ಅನುಭವಿಸುತ್ತಿದ್ದಳು.

ಸ್ವಲ್ಪ ಹೊತ್ತಿಗೆ ಮಳೆ ಇನ್ನಷ್ಟು ಜೋರಾಯಿತು. ಮತ್ತಷ್ಟು ವೇಗ ಹೆಚ್ಚಿಸಿಕೊಂಡು ಗಾಳಿಯೂ ರಪರಪ ಬೀಸತೊಡಗಿತು. ಮುದುಕಿ ಮಗ್ಗಲು ಬದಲಾಯಿಸಿದಳು. ಹರಕು ದುಪ್ಪಟಿಯನ್ನು ಮೈ ತುಂಬಾ ಹೊದ್ದುಕೊಂಡು ಚಳಿಯಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದಳು.

ಅಷ್ಟರಲ್ಲಿ ಇದ್ದಕ್ಕಿದ್ದಂತೆ ಗುಡಿಸಲ ತಡಿಕೆಯ ಬಾಗಿಲು ತೆರೆದುಕೊಂಡಿತು. ಮಳೆಯ ತುಂತುರು ಹನಿಗಳು ಶೀತಲ ಗಾಳಿಯೊಂದಿಗೆ ಒಳ ನುಗ್ಗಿ ಮುದುಕಿಯ ಕಾಲುಗಳನ್ನು ಒದ್ದೆ ಮಾಡಿದುವು. ಇನ್ನಷ್ಟು ಚಳಿಯೆನಿಸಿ ಮುದುಕಿ ಮೆಲ್ಲಗೆ ಕಣ್ಣು ತೆರೆದು ಬಾಗಿಲ ಕಡೆಗೆ ದೃಷ್ಟಿ ಹಾಯಿಸಿದಳು. ಅದೇ ಸಮಯದಲ್ಲಿ ಅಲ್ಲೊಂದು ನೆರಳು ಕಾಣಿಸಿಕೊಂಡಿತು!

# ಕಥೆಗೊಂದು ಚಿತ್ರ ಶೀರ್ಷಿಕೆಯಲ್ಲಿ ಆಯ್ಕೆಯಾದ ಕಥೆಗಳು



ಮುದುಕಿ ಸಣ್ಣಗೆ ನಡುಗಿದಳು. ಆ ನೆರಳು ತನ್ನ ಪ್ರಾಣವನ್ನು ಕೊಂಡೊಯ್ಯಲು ಬಂದಿರುವ ಯಮರಾಯನಾಗಿರಬಹುದೇ ಎಂದು ಅವಳಿಗೆ ಭಯವಾಯಿತು.

ಆದರೆ ಅಲ್ಲಿ ಯಮನೂ ಇರಲಿಲ್ಲ. ಯಮದೂತರೂ ಇರಲಿಲ್ಲ. ಇದ್ದವರು ಮೂವರು ಮನುಷ್ಯರು ಮಾತ್ರ– ಓರ್ವ ಗಂಡಸು ಹಾಗೂ ಇಬ್ಬರು ಹೆಂಗಸರು. ಮುದುಕಿ ಆ ಮೂವರನ್ನೂ ಕ್ಷಣಕಾಲ ದಿಟ್ಟಿಸಿ ನೋಡಿದಳು. ಎಂದೋ ಕಂಡು ಮರೆತ ಮುಖಗಳು. ಆದರೂ ಆ ಮುಖಗಳ ಗುರುತು ಹಿಡಿಯಲು ಅವಳಿಗೀಗ ಕಷ್ಟವಾಗಲಿಲ್ಲ. ಆ ಮೂವರೂ ಬೇರೆ ಯಾರೂ ಅಲ್ಲ; ತನ್ನ ಗರ್ಭದಲ್ಲೇ ಜನ್ಮ ತಾಳಿ ಬಂದವರು–ತನ್ನ ಮಕ್ಕಳು ಎಂಬ ಸತ್ಯವನ್ನು ಮನದಟ್ಟು ಮಾಡಿಕೊಳ್ಳಲು ಅವಳಿಗೆ ಹೆಚ್ಚು ಹೊತ್ತು ಬೇಕಾಗಲಿಲ್ಲ.

"ಯಾಕಮ್ಮಾ ಹಾಗೆ ನೋಡುತ್ತಿದ್ದೀಯಾ? ನಿನಗೆ ನಮ್ಮ ಗುರುತು ಸಿಗಲಿಲ್ಲವೇ? ನಾವು ನಿನ್ನ ಮಕ್ಕಳಲ್ಲವೇ?" ತಾಯಿಯ ನೆಟ್ಟ ನೋಟವನ್ನು ಎದುರಿಸಲಾಗದೆ ಮಗ ಪ್ರಶ್ನಿಸಿದ.

ಮುದುಕಿಯ ಬಳಿ ಮಾತಿರಲಿಲ್ಲ. ತನ್ನ ಮಕ್ಕಳನ್ನು ತಾನು ಈ ಜನ್ಮದಲ್ಲಿ ಮತ್ತೊಮ್ಮೆ ಕಾಣುವೆನೆಂದು ಅವಳು ಭಾವಿಸಿರಲಿಲ್ಲ. ಅವರನ್ನು ಮತ್ತೊಮ್ಮೆ ಕಾಣಬೇಕೆಂಬ ಪ್ರಯತ್ನವನ್ನೂ ಅವಳು ಮಾಡಿರಲಿಲ್ಲ. ಆದರೆ ಇದೀಗ ತೀರಾ ಅನಿರೀಕ್ಷಿತವಾಗಿ ಅವರು ತನ್ನ ಕಣ್ಮುಂದೆ ನಿಂತಾಗ ಅವಳ ಮಾತೃಹೃದಯ ತುಂಬಿ ಬಂದಿತ್ತು. ಅತೀವ ಆನಂದದಿಂದ ಮೈ ಮರೆತು ಅವಳು ಮಾತಿಲ್ಲದ ಮೂಕಿಯಾಗಿದ್ದಳು.

"ಯಾಕಮ್ಮಾ ಮೌನವಾಗಿದ್ದೀಯಾ? ಹಲವು ವರ್ಷಗಳಿಂದ ನಾವು ನಿನಗಾಗಿ ಎಲ್ಲೆಲ್ಲಿಯೋ ಹುಡುಕಾಡುತ್ತಿದ್ದೆವು. ಆದರೆ ನೀನು ಇಲ್ಲಿದ್ದೀಯಾ ಅಂತ ನಾವು ತಿಳಿಯುವ ಹೊತ್ತಿಗೆ ತುಂಬ ತಡವಾಗಿ ಹೋಯಿತು..." ಎಂದು ಹಿರಿ ಮಗಳು ಕಂಬನಿದುಂಬಿ ನುಡಿದಳು.

"ಹೌದಮ್ಮಾ.. ಇದುವರೆಗೂ ನಾವು ತಾಯಿಯಿಲ್ಲದ ತಬ್ಬಲಿಗಳಾಗಿದ್ದೆವು. ಆದರೆ ಇನ್ನು ಮುಂದೆ ನೀನು ಬದುಕಿರುವವರೆಗೂ ನಮ್ಮೊಂದಿಗಿರಬೇಕು. ಹಳೆಯದ್ದೆಲ್ಲವನ್ನೂ ಮರೆತು ಮತ್ತೆ ಹೊಸ ಮನುಷ್ಯಳಾಗಿ ನೀನು ನಮ್ಮೊಂದಿಗೆ ಮನೆಗೆ ಬರಬೇಕು..." ಕಿರಿ ಮಗಳು ತಾಯಿಯ ಮನವೊಲಿಸಲು ಪ್ರಯತ್ನಿಸಿದಳು.

'ಆಗಲಮ್ಮಾ ಹಾಗೆಯೇ ಆಗಲಿ...' ಎಂದೇನೋ ಹೇಳಲು ಮುದುಕಿ ಬಾಯಿ ತೆರೆದಳು. ಆದರೆ ಅಷ್ಟರಲ್ಲಿ ಸ್ವಾಭಿಮಾನ ಅಡ್ಡ ಬಂತು. ತನ್ನ ಮಕ್ಕಳು ಎಷ್ಟೇ ಪ್ರೀತಿ ಗೌರವ ತೋರಿದರೂ, ಯಾವುದೇ ಒತ್ತಡ ತಂದರೂ ತಾನು ಮಾತ್ರ ಯಾವ ಕಾರಣಕ್ಕೂ ಮನ ಬದಲಾಯಿಸಬಾರದು. ಹಿಂದೊಮ್ಮೆ ತಾನು ತೊರೆದು ಬಂದ ಮನೆಗೆ ಮತ್ತೆ ಕಾಲಿಡಬಾರದು ಎಂದು ದೃಢ ನಿರ್ಧಾರ ತಾಳಿದ ಮುದುಕಿ, ಮಾತಾಡಲೆಂದು ತೆರೆದಿದ್ದ ಬಾಯಿಯನ್ನು ಪುನಃ ಮುಚ್ಚಿಕೊಂಡಳು. ಮನ ಬಿಚ್ಚಿ ಹೇಳಬೇಕೆಂದಿದ್ದ ಯಾವುದೋ ಮಾತು ಅವಳ ಗಂಟಲಲ್ಲೇ ಉಳಿಯಿತು.

ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಮುದುಕಿ ತನ್ನ ಕೈ ಹಿಡಿದ ಗಂಡನನ್ನೂ, ಹೆತ್ತ ಮಕ್ಕಳನ್ನೂ,

ಬಂಧು ಬಳಗವನ್ನೂ ತೊರೆದು ಮನೆಯಿಂದ ಪಲಾಯನ ಮಾಡಿದ್ದಳು.

ಅವಳು ತನ್ನ ತವರು ಮನೆಯಿಂದ ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂಬ ನೆಪವೊಡ್ಡಿ ಅವಳ ಅತ್ತೆ–ಮಾವಂದಿರು ನೀಡುತ್ತಿದ್ದ ಉಪಟಳವೇ ಆ ಪಲಾಯನಕ್ಕೆ ಕಾರಣವಾಗಿತ್ತು. ಅದೊಂದು ದಿನ ಸೀಮೆ ಎಣ್ಣೆ ಸುರಿದು ಸುಡಲು ಬಂದ ಅತ್ತೆಯ ಕೈಯಿಂದ ಹೇಗೋ ಬಿಡಿಸಿಕೊಂಡು ಮನೆ ಬಿಟ್ಟು ಓಡಿ ಬಂದವಳು, ಯಾರಿಗೂ ಹೊರೆಯಾಗ ಬಯಸದೆ ಈ ಕುಗ್ರಾಮದಲ್ಲಿ ಪುಟ್ಟದೊಂದು ಗುಡಿಸಲು ಕಟ್ಟಿ ನೆಲೆಯೂರಿದ್ದಳು. ಎಲ್ಲಾ ಸಾಂಸಾರಿಕ ಬಂಧನಗಳಿಂದಲೂ, ಮೋಹಗಳಿಂದಲೂ ಮುಕ್ತಳಾಗಿ ಓರ್ವ ಸನ್ಯಾಸಿನಿಯಂತೆ ಏಕಾಂಗಿಯಾಗಿಯೇ ಜೀವಿಸತೊಡಗಿದ್ದಳು. ಇತ್ತೀಚೆಗಂತೂ ತನ್ನ ಹೆತ್ತವರನ್ನೂ, ತಾನು ಹೆತ್ತ ಮಕ್ಕಳನ್ನೂ, ಎಲ್ಲರನ್ನೂ, ಎಲ್ಲವನ್ನೂ ಮರೆತು ಪೂರ್ಣ ನಿರ್ಲಿಪ್ತಳಾಗಿದ್ದಳು. ಆದರೆ ಇದೀಗ ತೀರಾ ಅನಿರೀಕ್ಷಿತವಾಗಿ ತನ್ನ ಕರುಳಿನ ಕುಡಿಗಳು ಎದುರಾದಾಗ– ಅವರ ಮಾತುಗಳನ್ನು ಆಲಿಸಿದಾಗ ಅವಳ ಮನಸ್ಸು ಕದಡಿ ಅಲ್ಲೋಲ ಕಲ್ಲೋಲವಾಯಿತು. ಎಂದೋ ಮರೆತಿದ್ದ ನೆನಪುಗಳು ಮತ್ತೆ ಮರುಕಳಿಸಿದವು.

ಬೆಂಕಿಯಿಕ್ಕಿ ಕೊಲ್ಲಲು ಬರುತ್ತಿರುವ ತನ್ನ ಅತ್ತೆ; ಅತ್ತೆಯ ಕೈಯಿಂದ ತಪ್ಪಿಸಿಕೊಂಡು ಓಡುತ್ತಿರುವ ತನ್ನನ್ನು ನಿರ್ಲಿಪ್ತ ಭಾವದಿಂದ ನೋಡುತ್ತಾ ನಿಂತ ತನ್ನ ಗಂಡ; "ಓಡಿದರೆ ಎಷ್ಟು ದೂರ ಓಡಿಯಾಳು? ಮರಳಿ ಬಂದಾಗ ನೋಡಿಕೊಂಡರಾಯಿತು..'' ಎನ್ನುತ್ತಿರುವ ಮಾವ; ಬಿಕ್ಕಿ ಬಿಕ್ಕಿ ಅಳುತ್ತಿರುವ ತನ್ನ ಮಕ್ಕಳು– ಎಲ್ಲರೂ ಅರೆ ಕ್ಷಣದಲ್ಲಿ ಅವಳ ನೆನಪಿನ ತೆರೆಯ ಮೇಲೆ ಮೂಡಿ ಬಂದು ಮನ ನೋಯಿಸಿದುವು.

"ಏನಮ್ಮಾ ಯೋಚಿಸುತ್ತಿದ್ದೀಯ? ನಿನಗೆ ಹಿಂಸೆ ನೀಡಿದ ಅಜ್ಜ–ಅಜ್ಜಿಯರು ಎಂದೋ ಸತ್ತು ಹೋದರು. ಈಗ ಅಪ್ಪನೂ ಯಾವುದೋ ಕಾಯಿಲೆಯಿಂದ ಹಾಸಿಗೆ ಹಿಡಿದು ಇಂದೋ ನಾಳೆಯೋ ಎನ್ನುವ ಸ್ಥಿತಿಯಲ್ಲಿದ್ದಾರೆ. ತಾನು ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಟ್ಟು ನಿನ್ನನ್ನೇ ಜ್ಞಾಪಿಸಿಕೊಂಡು ಕೊರಗುತ್ತಿದ್ದಾರೆ...'' ಮಗ ಹೇಳಿದ.

"ಹೌದಮ್ಮಾ ಅಪ್ಪ ತೀರಾ ಚಿಂತಾಜನಕ ಸ್ಥಿತಿಯಲ್ಲಿದ್ದಾರೆ. ನಿನ್ನಲ್ಲ ಕ್ಷಮೆ ಕೇಳ ಬಯಸಿದ್ದಾರೆ. ಅವರನ್ನು ಕ್ಷಮಿಸಿ ಬಿಡಮ್ಮ... ಮನೆಗೆ ಬಂದು ಒಂದೇ ಬಾರಿ ಕ್ಷಮಿಸಿದೆನೆಂದು ಹೇಳಿ ಅವರಿಗೆ ಪೂರ್ಣ ನಿಶ್ಚಿಂತೆಯಿಂದ ಸಾಯಲು ಅವಕಾಶ ಮಾಡಿಕೊಡಮ್ಮ...'' ಎಂದು ಹಿರಿ ಮಗಳು ಒತ್ತಾಯಿಸಿದಳು.

"ಯಾಕಮ್ಮಾ ಮೌನವಾಗಿದ್ದೀಯಾ? ಎದ್ದೇಳು, ಮನೆಗೆ ಹೋಗೋಣ...'' ಎಂದಳು ಕಿರಿ ಮಗಳು.

ಒತ್ತಾಯಕ್ಕೆ ಮಣಿದವಳಂತೆ ಮುದುಕಿ ಪ್ರಯಾಸಪಟ್ಟು ಮೆಲ್ಲಗೆ ಎದ್ದು ನಿಂತಳು. ಆಮೇಲೆ ತೋಳುಗಳನ್ನು ಚಾಚಿ ತನ್ನ ಮೂವರು ಮಕ್ಕಳನ್ನೂ ಬಾಚಿ ತಬ್ಬಿಕೊಂಡಳು. ಮೂವರೂ ಆ ತಾಯಿಯ ಅಕ್ಕರೆಯ ಅಪ್ಪುಗೆಯಲ್ಲಿ ಪುಟ್ಟ ಹಸುಳೆಗಳಂತೆ ಬೆಚ್ಚಗೆ ಮಲಗಿದರು; ಒಂದೇ ಒಂದು ಕ್ಷಣ...

ಮರುಕ್ಷಣ ಮುದುಕಿ ನಿಶ್ಚಲಳಾದಳು. ಸದ್ದಿಲ್ಲದೆ ಅವಳ ಪ್ರಾಣ ಪಕ್ಷಿ ಹಾರಿ ಹೋಗಿತ್ತು!

– ಫೆಮಿನಾ ಅಬ್ದುಲ್ಲ, ತೋಡಿಕಾನ





## ಪ್ರತಿಭಾವಂತ ನೃತ್ಯ ಕಲಾವಿದೆ ಮಾಲಿನಿ ರಾಮನಾಥ್

ಬೆಂಗಳೂರಿನಲ್ಲಿ ನೃತ್ಯ ಕಲಿಯುವುದರಲ್ಲೂ, ನೃತ್ಯ ಕಲಿಸುವುದರಲ್ಲೂ ಸಾಕಷ್ಟು ಸ್ಪರ್ಧೆ ಇದೆ. ಅಂಥವರಲ್ಲಿ ಕು। ಮಾಲಿನಿ ರಾಮನಾಥ್ ಕೂಡ ಒಬ್ಬಳು. ಚಿಕ್ಕಂದಿನಿಂದ ನೃತ್ಯ ಕಲಿಯುತ್ತಿದ್ದರೂ ಅದನ್ನೇ ಮುಖ್ಯ ಮಾಧ್ಯಮವನ್ನಾಗಿಸಿಕೊಂಡು ತನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳಬೇಕೆಂಬ ಅಭಿಲಾಷೆ ಉಳ್ಳವರಲ್ಲಿ ಇವಳೂ ಒಬ್ಬಳು. ನೃತ್ಯವನ್ನೇ ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು ಬೆಂಗಳೂರು ವಿಶ್ವ ವಿದ್ಯಾನಿಲಯದ ಸಂಗೀತ–ನೃತ್ಯ –ನಾಟಕ ವಿಭಾಗದಲ್ಲಿ ಎರಡು ಚಿನ್ನದ ಪದಕಗಳನ್ನು ಗಳಿಸಿ ಪದವಿ ಪಡೆದಿರುವ ಮಾಲಿನಿಗೆ ಶ್ರೀಯುತ ಡಿ. ಸರ್ವೋತ್ತಮ ಕಾಮತರವರು ಮುಖ್ಯ ಗುರುಗಳು. 1990ರ ರಂಗ ಪ್ರವೇಶದ ನಂತರ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದಾಳೆ. ಅದರಲ್ಲಿ ವಿಶ್ವ ಕಲಾದ ನೃತ್ಯ ಪೌಣತ ಮಹೋತ್ಸವ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರತಿ ಶುಕ್ರವಾರ ಸಂಜೆಯ ಕಾರ್ಯಕ್ರಮ ಹೆಚ್ಚಿನ ಯಶಸ್ಸನ್ನು ತಂದು ಕೊಟ್ಟಿದೆ.

ನೃತ್ಯದಲ್ಲಿ ಹೆಚ್ಚಿನ ತರಬೇತಿಗಾಗಿ ಶ್ರೀಮತಿ ಲೀಲಾ ರಾಮನಾಥನ್‌ರವರಲ್ಲೂ, ಶ್ರೀಮತಿ ಕನಕಲೇಖೆಯವರ ಶಿಬಿರದಲ್ಲೂ ಭಾಗವಹಿಸಿದ್ದಾಳೆ. ಇದೀಗ ಕನ್ನಡ ಎಂ. ಏ. ಓದುತ್ತಿರುವ ಮಾಲಿನಿ ವಿದ್ವತ್ ಪರೀಕ್ಷೆಗೆ ಸಿದ್ಧತೆ ನಡೆಸಿದ್ದಾಳೆ. ಅನೇಕ ವಿದ್ಯಾರ್ಥಿಗಳಿಗೆ ನೃತ್ಯಾಭ್ಯಾಸವನ್ನೂ ಮಾಡಿಸುತ್ತಿರುವ ಈಕೆಗೆ ನೃತ್ಯಕ್ಷೇತ್ರದಲ್ಲಿ ಹೆಚ್ಚಿನ ಯಶಸ್ಸು ದೊರೆಯಲೆಂದು ನಮ್ಮೆಲ್ಲರ ಹಾರೈಕೆ.

–ಚೈತ್ರಾ, ಬೆಂಗಳೂರು

## ಕಂಬನಿಯ ಕಾಣಿಕೆ

ಗಡಿಯಾರ ಢಣ್.. ಢಣ್... ಎಂದು ಎರಡು ಬಾರಿ ಬಡಿದು ಸುಮ್ಮನಾಯಿತು. ಹಜಾರದಲ್ಲಿ ಮೊಮ್ಮಕ್ಕಳೊಂದಿಗೆ ಮಲಗಿದ್ದ ರಾಜಮ್ಮ ಎದ್ದು ಕುಳಿತರು. ಮನೆಯವರೆಲ್ಲಾ ಶಾಂತವಾಗಿ ಮಲಗಿ ನಿದ್ರಿಸಿದ್ದರೂ ರಾಜಮ್ಮನ ಕಣ್ಣೆವೆಗಳು ಕೂಡಿರಲಿಲ್ಲ. ಪಕ್ಕದಲ್ಲಿ ಮಲಗಿದ್ದ ವಿಮಲೆಳ ಮಗಳು ನಿದ್ರೆಗಣ್ಣಿನಲ್ಲಿ ಹೊರಳಾಡಿ ಕನವರಿಸಿಕೊಂಡಳು. ಥಟ್ಟನೆ ಅವಳ ಹೊದಿಕೆಯನ್ನು ಸರಿಪಡಿಸಿ ಮೃದುವಾಗಿ ಅವಳ ತಲೆ ನೇವರಿಸಿದರು. ದೀರ್ಘವಾದ ನಿಟ್ಟುಸಿರು ಬಿಟ್ಟ ಅವರು ಮತ್ತೆ ಮಲಗಿದರು. ರಾತ್ರಿ ಮಕ್ಕಳೊಡನೆ ನಡೆದಿದ್ದ ಮಾತುಕತೆಗಳಿಂದಾಗಿ ಈಗ ಬೇಡ ಬೇಡವೆಂದರೂ ಹಿಂದಿನ ನೆನಪುಗಳು ನುಗ್ಗಿ ಬಂದವು.

ಗೋಪಾಲನ್ನು ವಿವಾಹವಾಗಿ ಅತ್ತೆಯ ಮನೆಗೆ ಬಂದಾಗ ರಾಜಮ್ಮನಿಗೆ ಹದಿನಾರು ವರ್ಷ. ಗೋಪಾಲ ಹಣಕಾಸಿನ ಬಗ್ಗೆ ಕೊಂಚ ಜಿಪುಣತನ ತೋರಿದರೂ ತನ್ನ ಮೇಲಿನ ಪ್ರೀತಿಗೆಂದೂ ಯಾವ ಕೊರತೆಯನ್ನೂ ಮಾಡಿರಲಿಲ್ಲ. ಮದುವೆಯಾದ ಐದು ವರ್ಷಗಳಿಗೆ ವಿಜಯ, ವಿಮಲ ಅವರ ಮಡಿಲು ತುಂಬಿದರು. ಮತ್ತೆ ನಾಲ್ಕು ವರ್ಷಗಳಿಗೆ ಜನಿಸಿದ ವಿಕ್ರಮ ಗಂಡು ಮಗುವಿಲ್ಲದ ಕೊರತೆಯನ್ನು ನೀಗಿದ. ಅಂತೂ ತಮ್ಮ ನೋವು, ನಲಿವುಗಳನ್ನು ಮರೆತು ಮಕ್ಕಳ ಏಳ್ಗೆಗಾಗಿ ಶ್ರಮಿಸಿದರು ದಂಪತಿಗಳು. ಗಂಡ ಮತ್ತು ಮಕ್ಕಳ ಆನಂದವೇ ತಮ್ಮ ಆನಂದ ಎಂದು ಭಾವಿಸುತ್ತಿದ್ದ ರಾಜಮ್ಮನಿಗೆ ಅರಿವಾಗದೇ ದಿನಗಳು ಉರುಳಿ ಹೋದುವು. ಮಕ್ಕಳು ಬೆಳೆದು ನಿಂತರು.

ರೂಪವಂತೆಯರಾಗಿದ್ದ ಹೆಣ್ಣು ಮಕ್ಕಳಿಗೆ ಗಂಡು ಸಿಗುವುದು ಕಷ್ಟವಾಗಲಿಲ್ಲ. ಆದರೆ ಜಯನಗರದಲ್ಲಿದ್ದ ಸೈಟನ್ನು ಮಾರಬೇಕಾಯ್ತು. ಚಿಕ್ಕಂದಿನಿಂದಲೂ ಕೊಂಚ ಲೆಕ್ಕಾಚಾರದವ ಗೋಪಾಲ. ಹೀಗಾಗಿ ಅಂದಿನಿಂದ ಉಳಿಸಿ ಬೆಳೆಸಿದ ಹಣವೂ ಬಿದಾಯ್ತು. ಮತ್ತೆ ನಾಲ್ಕಾರು ವರ್ಷಗಳಿಗೆ ತಮ್ಮ ಅಣ್ಣನ ಮಗಳನ್ನೇ ವಿಕ್ರಮನಿಗೆ ತಂದುಕೊಂಡರು ರಾಜಮ್ಮ ಮಕ್ಕಳು ಚಿಕ್ಕವರಾಗಿದ್ದಾಗ ಅಕ್ಕಪಕ್ಕದ ಮಕ್ಕಳಿಗೆ ಪಾಠ ಹೇಳಿ ಬಂದ ಹಣದಿಂದ ಮಾಡಿಸಿಕೊಂಡಿದ್ದ ಒಂದೆರಡು ಒಡವೆಗಳನ್ನು ಮಗನ ಮದುವೆಯ ಸಮಯದಲ್ಲಿ ಸೊಸೆಗೆ ಕೊಟ್ಟುಬಿಟ್ಟರು. ತಮ್ಮ ಕರ್ತವ್ಯವನ್ನು ಮುಗಿಸಿ ಸಮಾಧಾನದ ನಿಟ್ಟುಸಿರು ಬಿಟ್ಟರು ದಂಪತಿಗಳು. ಅದೇ ಸಮಯಕ್ಕೆ ಗೋಪಾಲನಿಗೆ ನಿವೃತ್ತಿಯಾಯಿತು. ಹೆಣ್ಣು ಮಕ್ಕಳ ಮದುವೆ ಮತ್ತು ಮಗನ ವಿದ್ಯಾಭ್ಯಾಸಕ್ಕೆಂದು ಸಾಲ ಪಡೆದಿದ್ದುದರಿಂದ ಹೆಚ್ಚೇನೂ ಹಣ ಬಂದಿರಲಿಲ್ಲ. ಈಗ 15 ದಿನಗಳ ಹಿಂದೆ ರಾತ್ರಿ ಮಲಗಿದ ಗೋಪಾಲ ಬೆಳಿಗ್ಗೆ ಮೇಲೇಳಲಿಲ್ಲ. ಮುಗ್ಧ ರಾಜಮ್ಮ ತಮ್ಮ ಬಾಳಿನಲ್ಲಿ ಅನಿರೀಕ್ಷಿತವಾಗಿ ಬೀಸಿದ ಬಿರುಗಾಳಿಯಿಂದ ತತ್ತರಿಸಿದರು. ಕಾರ್ಯಕ್ಕಾಗಿ ಬಂದಿದ್ದ ಎಲ್ಲಾ ಸಂಬಂಧಿಗಳು ಪ್ರಯಾಣ ಮಾಡಿದ ಮೇಲೆ ರಾಜಮ್ಮನ ನೋವು ಇನ್ನೂ ಹೆಚ್ಚಾಯಿತು. ಮಂಕಾಗಿ ಕುಳಿತಿದ್ದ ಅವರ ಮುಂದೆ ಮಕ್ಕಳು ಬಂದು ಮೆಲ್ಲನೆ ಮಾತಿಗಾರಂಭಿಸಿದರು. ಈಗಿರುವ ಹಳೆ ಮನೆಯನ್ನು ಮಾರಿ ಬಂದ ಹಣ ಮತ್ತು ಬ್ಯಾಂಕಿನಲ್ಲಿರುವ ಹಣ ಇವುಗಳನ್ನು ಸಮಪಾಲು ಮಾಡಿಕೊಳ್ಳೋಣ ಎಂದು ವಿಮಲ, ವಿಜಯ ನುಡಿದರೆ ವಿಕ್ರಮ ಮತ್ತು

ಅವನ ಹೆಂಡತಿ ತಮಗೇ ಹೆಚ್ಚು ಪಾಲು ಬೇಕೆಂದರು. ಕೊನೆಗೆ ಯಾವ ನಿರ್ಧಾರಕ್ಕೂ ಬಾರದೇ "ಅಮ್ಮ ನಾಳೆಯ ವರಗೂ ನೀನೇ ಯೋಚನೆ ಮಾಡಿ ಹೇಳು" ಎಂದು ನುಡಿದು ರೂಮು ಸೇರಿದರು. ಬರೀ ಹಣಕಾಸಿನ ಬಗ್ಗೆಯೇ ಚರ್ಚೆ ಮಾಡಿದ ಮಕ್ಕಳು ತಮ್ಮ ನೋವನ್ನು ಅರ್ಥ ಮಾಡಿಕೊಳ್ಳಲಿಲ್ಲವಲ್ಲ, ಅಪ್ಪನಿಲ್ಲದೇ ಅಮ್ಮ ಹೇಗಿದ್ದಾಳು ಎಂದು ಯೋಚಿಸಲಿಲ್ಲವಲ್ಲ ಎನಿಸಿ ಹೃದಯ ಭಾರವಾಯಿತು. ಇವುಗಾಗಿಯೇ ತಾವು ಇಷ್ಟೊಂದು ಕಷ್ಟಪಟ್ಟಿದ್ದು ಅನಿಸಿದಾಗ ಕಣ್ಣು ತುಂಬಿ ಬಂತು. ಸುರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಂಡ ರಾಜಮ್ಮನಿಗೆ ಅಂತೂ ಮಕ್ಕಳ ಭವಿಷ್ಯಕ್ಕೆ ತಮ್ಮ ಬಾಳನ್ನೇ ಮುಡಿ ಪಾಗಿಡುವ ತಂದೆ ತಾಯಿಯರಿಗೆ ಮಕ್ಕಳು ಕೊಡುವ ಕಾಣಿಕೆಯೆಂದರೆ ಈ ಕಂಬನಿಯೇ ಎನಿಸಿ ಮನಸ್ಸು ಕಹಿಯಾಯಿತು.

—ಸವಿತಾ ಪ್ರಭಾಕರ್



## .......ಟಿ.ಸಿ. ಪೂರ್ಣಿಮಾಗೆ ಸಾಹಿತ್ಯ ಪ್ರಶಸ್ತಿ.......



ಟಿ.ಸಿ. ಪೂರ್ಣಿಮಾ — ಮಂಜುಳಾ — ಶಾಂತಾ ಜಗದೀಶ್

ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕಿನ ಕಂಪಲಾಪುರ ಒಂದು ಸಾಮಾನ್ಯ ಹಳ್ಳಿ. ಇಲ್ಲಿ ನಡೆವ ಸಾಹಿತ್ಯ ಕಾರ್ಯಕ್ರಮಗಳು ನಗರ ಪ್ರದೇಶದಲ್ಲೂ ನಡೆಯುವುದಿಲ್ಲವೆಂದರೆ ಅದೇನೂ ಆಶ್ಚರ್ಯವೇನಲ್ಲ.

ಕಳೆದ ಮೂರು ವರ್ಷಗಳಿಂದಲೂ ಈ ವೇದಿಕೆ ರಾಷ್ಟ್ರಕವಿ ಕುವೆಂಪು ಹೆಸರಿನಲ್ಲಿ ಕವನ ಸಂಕಲನಗಳನ್ನು ಆಹ್ವಾನಿಸಿ ಅತ್ಯುತ್ತಮ ಸಂಕಲನಕ್ಕೆ ಪ್ರಶಸ್ತಿ ನೀಡುತ್ತಾ ಬಂದಿರುವುದು ಸ್ವಾಗತಾರ್ಹ. ಸಾಹಿತ್ಯ ರಥವನ್ನು ಹಳ್ಳಿಯಿಂದ ನಗರಕ್ಕೆ ಎಳೆದೊಯ್ದು ನಗರ ಜನರೂ ಎಚ್ಚೆತ್ತುಕೊಳ್ಳುವಂತೆ ಮಾಡಿದ ಈ ವೇದಿಕೆ ಅಧ್ಯಕ್ಷ ಕಂಪ್ಲಾಪುರ ಮೋಹನ್‌ರವರ ಸಾಹಸ ಅವರ್ಣನೀಯ.

ಈ ಬಾರಿಯ ಕುವೆಂಪು ಸಾಹಿತ್ಯ ಪ್ರಶಸ್ತಿ ಬೆಂಗಳೂರಿನ ಟಿ.ಸಿ. ಪೂರ್ಣಿಮಾಗೆ 'ಹಾದಿಬದಿಯ ಹದಿಬದೆ' ಕವನ ಸಂಕಲನಕ್ಕೆ ದೊರೆತಿದೆ.

ಮೈಸೂರಿನ ಶಾಂತಾ ಜಗದೀಶರವರ 'ಮೌಲ್ಯ' ಕವನ ಸಂಕಲನ ತೀರ್ಪುಗಾರರ ಪ್ರಶಸ್ತಿ ಪಡೆದಿದೆ.

ಮೈಸೂರಿನ ಮಹಾರಾಣಿ ಕಾಲೇಜಿನ ವಿದ್ಯಾರ್ಥಿನಿ ಸಾ.ತಿ. ಮಂಜುಳಾರವರ 'ನನ್ನ ಕವನಗಳೇ ಹೀಗೆ' ಸಂಕಲನ ವೇದಿಕೆಯ ವಿಶೇಷ ಪ್ರಶಸ್ತಿ ಗಳಿಸಿದೆ.

ಈ ಪ್ರಶಸ್ತಿಗಳನ್ನು ವಿತರಿಸಿದ ಜನಪ್ರಿಯ ಸಾಹಿತಿ ಹಾಗೂ ಗುಲ್ಬರ್ಗ ವಿ.ವಿ.ಯ ಮಾಜಿ ಕುಲಪತಿ ಡಾ। ಹಾ.ಮಾ. ನಾಯಕರವರು ಮಾತನಾಡಿ ಸಾಹಿತ್ಯ ರಚಿಸುವವರು ಹೆಚ್ಚು ಕೃಷಿ ಮಾಡಬೇಕೆಂದು ಕರೆ ನೀಡಿದರು.

ಮುಖ್ಯ ಅತಿಥಿಗಳಾಗಿದ್ದ ಜನಪ್ರಿಯ ಕಾದಂಬರಿ ಗಾರ್ತಿ ಆರ್ಯಾಂಬ ಪಟ್ಟಾಭಿರವರು ಮಾತನಾಡಿ ಮಹಿಳೆಯರಿಗೇ ಹೆಚ್ಚು ಪ್ರಶಸ್ತಿ ಬಂದ ಬಗ್ಗೆ ಸಂತೋಷ ವ್ಯಕ್ತಪಡಿಸಿ ಏಕಾಗ್ರತೆಯಿಂದ ಅಧ್ಯಯನ ನಡೆಸುವಂತೆ ಕಿವಿ ಮಾತು ಹೇಳಿದರು.

ಮೈಸೂರು ನಗರದ ಇಂಜಿನೀಯರ್ಸ್ ಸಭಾಂಗಣ ದಲ್ಲಿ ನಡೆದ 1991–92ರ ಈ ಪ್ರಶಸ್ತಿ ಪ್ರದಾನ ಸಮಾರಂಭದ ಅಧ್ಯಕ್ಷತೆಯನ್ನು ಮೈಸೂರು ವಿ.ವಿ. ಕುಲಪತಿ ಡಾ। ಎಂ. ಮಾದಯ್ಯ ವಹಿಸಿದ್ದರು.

ಕಳೆದ 3 ವರ್ಷಗಳಲ್ಲಿ ಎಂಟು ಮಂದಿಗೆ ಪ್ರಶಸ್ತಿ ನೀಡಲಾಗಿದ್ದು ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರು ಮುಂದಿದ್ದಾರೆಂದು ಸಾಬೀತಾಗಿದೆ.

ವರದಿ : ಸರಸ್ವತಿ ಮೋಹನ,

## ಹಣದ ಮಹಿಮೆ

ಸೀತಮ್ಮನವರು ತಮ್ಮ ಎಲ್.ಐ.ಸಿ. ಇನ್ಷೂರೆನ್ಸ್ ಹಣವನ್ನು ವೃದ್ಧರ ಆಶ್ರಮಕ್ಕೆ ಕೊಟ್ಟು ತಮ್ಮ ಗತ ಜೀವನವನ್ನು ನೆನಪು ಮಾಡಿಕೊಂಡರು. ತಾನು ಬದುಕಿದ ರೀತಿ, ಮಕ್ಕಳನ್ನು ಕಷ್ಟದಿಂದ ಸಾಕಿ ತಾನು ಈ ಸ್ಥಿತಿಗೆ ಕಾರಣವಾದದ್ದನ್ನು ನೆನೆಸಿಕೊಂಡರು. ಅವೆಲ್ಲಾ ಅವರಿಗೆ ಚಿತ್ರ ಪಟದ ಮೇಲೆ ಹಾದು ಹೋಗುವಂತ ಅವರ ಕಣ್ಣ ಮುಂದೆ ತೇಲಿ ಬಂದಿತು.

ಸೀತಮ್ಮನವರಿಗೆ ರಾಮ ಅದೃಷ್ಟವೇ ಎನ್ನಬೇಕು. ರಾಮಚಂದ್ರಪ್ಪನವರು ಹೆಸರಿಗೆ ತಕ್ಕಂತೆ ಶ್ರೀರಾಮ ಚಂದ್ರರೇ ಆಗಿದ್ದರು. ಎಲ್.ಐ.ಸಿ.ಯಲ್ಲಿ ಉನ್ನತ ಹುದ್ದೆ ಯನ್ನು ಪಡೆ ಸೀತಮ್ಮನವರನ್ನು ಮದುವೆ ಆಗಿದ್ದರು. ಮದುವೆ ಆದಾಗ ಸೀತಮ್ಮನವರು ಕೇವಲ 5ನೇ ತರಗತಿಯನ್ನು ಕಲಿತಿದ್ದರು. ಗಂಡನ ಪ್ರೋತ್ಸಾಹ ಹಾಗೂ ಉತ್ತೇಜನದಿಂದ 10ನೇ ತರಗತಿ ಹಾಗು ಟಿ.ಸಿ.ಹೆಚ್. ಶಿಕ್ಷಣವನ್ನು ಮುಗಿಸಿದರು. ಈ ದಂಪತಿಗಳಿಗೆ ಸುರೇಖಾ ಹಾಗೂ ಸುಶೀಲ ಎಂಬ ಇಬ್ಬರು ಮಕ್ಕಳು ಇವರ ಪ್ರೇಮದಲ್ಲಿ ಅರಳಿದರು.

ವಿಧಿಯ ಆಟವೇ ಬೇರೆ ಆಗಿತ್ತು. ಆಫೀಸಿನಿಂದ ಹಿಂತಿರುಗಿ ಬರುವಾಗ ಹಟಾತ್ತನೆ ಲಾರಿ ಅಪಘಾತದಲ್ಲಿ ರಾಮಚಂದ್ರಪ್ಪನವರು ಅಸು ನೀಗಿದರು. ಇಬ್ಬರು ಮಕ್ಕಳು ಹಾಗೂ ತನ್ನನ್ನು ನಡುನೀರಿನಲ್ಲಿ ಕೈ ಬಿಟ್ಟ ಪತಿಯನ್ನು ನೆನೆದು ಅವರಿಗೆ ದಿಕ್ಕೆ ತೋಚದಂತಾಯಿತು. ಆದರೆ ಮಕ್ಕಳ ಭವಿಷ್ಯಕ್ಕಾದರೂ ಅವರು ದುಡಿಯ ಬೇಕಾಯಿತು. ಪತಿಯ ಪ್ರೇರಣೆಯಿಂದ ಪಾಸು ಮಾಡಿದ್ದ ಶಿಕ್ಷಣ ಅವರಿಗೆ ನೆರವಿಗೆ ನಿಂತಿತು. ಅಲ್ಲಿಯೇ ಹತ್ತಿರದಲ್ಲಿದ್ದ ನರ್ಸರಿ ಶಾಲೆಗೆ ಉಪಾಧ್ಯಾಯಿನಿಯಾಗಿ ಸೇರಿದರು. ಹಾಗೆಯೇ ರಾಮಚಂದ್ರಪ್ಪನವರ ಗೆಳೆಯರ ಸಹಾಯ ದಿಂದ ಒಂದು 5–6 ಮನೆಗೆ ಹೋಗಿ ಪಾಠ ಹೇಳುವ ಕೆಲಸವನ್ನು ಹಚ್ಚಿಕೊಂಡರು.

ಸುರೇಶ ಹಾಗೂ ಸುರೇಖಾರನ್ನು ಹೇಗೋ ಕಷ್ಟಪಟ್ಟು ಒಂದು ನೆಲೆಗೆ ತಂದಿದ್ದರು. ಸುರೇಶ ಆದೇ ತಾನೆ ಬಿ. ಎಸ್ಸಿ. ಮುಗಿಸಿ ಒಂದು ಕಂಪನಿಯಲ್ಲಿ ಹುದ್ದೆಗೆ ಸೇರಿ 2,000 ಜೀತ ತರುವಂತಾದನು. ಪತಿಯು ಉಳಿಸಿಹೋಗಿದ್ದ ಅಲ್ಪ ಸ್ವಲ್ಪ ಹಣ ಹಾಗೂ ತಾನು ಉಳಿಸಿದ ಹಣದಿಂದ ಸುರೇಖಾಳಿಗೂ ಒಂದು ಮದುವೆ ಮಾಡಿ ಮುಗಿಸಿ ಒಂದು ಜವಾಬ್ದಾರಿ ಕಳೆದುಕೊಂಡಿದ್ದರು.

'ಕಾಲಚಕ್ರ ಉರುಳಿದ ಹಾಗೇ ಸುರೇಶ ಕೂಡ ಅವನ ಕಂಪೆನಿಯಲ್ಲೇ ಕೆಲಸಕ್ಕಿರುವ ರಶ್ಮಿಯನ್ನು ಮದುವೆ ಮಾಡಿಕೊಂಡು ನೇರವಾಗಿ ಕರೆತಂದಾಗ ಸೀತಮ್ಮನವರು ಸೊಸೆಯನ್ನು ಸಂತೋಷದಿಂದಲೇ ಸ್ವಾಗತಿಸಿದರು. ಆದರೆ ರಶ್ಮಿಗೆ ಅತ್ತೆಯ ಇರುವು ಅಷ್ಟಾಗಿ ಸರಿ ಬೀಳಲಿಲ್ಲ. ಇದೆಲ್ಲಾ ಇದ್ದರೂ ಸೀತಮ್ಮನವರು ಸಹಿಸಿಕೊಂಡರು.

ಸ್ವಲ್ಪ ಕಾಲ ಕಳೆದ ಮೇಲೆ ಸುರೇಖಾಳಲ್ಲಿ ಇರುವುದಾಗಿ ತಿಳಿಸಿ ಅಲ್ಲಿಗೆ ನಡೆದಾಗ 10–15 ದಿನ ಉಪಚಾರ ಚೆನ್ನಾಗಿಯೇ ನಡೆಯಿತು. ಅಳಿಯ ಮಹೇಶ್ ಕೂಡ ಸದಾ ಹೆಂಡತಿಯ ಮೇಲೆ ಸಿಡಿಮಿಡಿಗೊಳ್ಳುತ್ತಿದ್ದ. ಸುರೇಖಾಳಿಗೂ ಅವನ ವರ್ತನೆ ಆಶ್ಚರ್ಯ ತರಿಸಿತ್ತು. ಒಂದು ರಾತ್ರಿ 'ಏಕೆ ಹೀಗೆ ನಡೆದುಕೊಳ್ಳುವಿರಿ' ಎಂದು ಸುರೇಖಾ ಮಹೇಶನಲ್ಲಿ ಕೇಳಿದಾಗ, ಮಹೇಶನ ಉತ್ತರ ಈ ರೀತಿ ಇತ್ತು. ಅಯ್ಯೋ! ಮಂಕೆ ನಾನು ನಿನ್ನ ಮೇಲೆ ಸಿಡಿಮಿಡಿಗೊಳ್ಳಲಿಲ್ಲ. ನಿನ್ನ ಮುದಿ ಅಮ್ಮ ಇದನ್ನು ಅರ್ಥ ಮಾಡಿಕೊಂಡು ಹೊರಡಲಿ ಎಂದು ಅಷ್ಟೆ. ಏಕೆಂದರೆ ಅವಳಿಂದ ನಮಗೆ ಯಾವ ಆರ್ಥಿಕ ಸಹಾಯವಿದೆ ಹೇಳು ಎಂದಾಗ ಸುರೇಖಾ ಕೂಡ ಅವನಿಗೆ ತಲೆ ಆಡಿಸಿದಳು. ಈ ಮಾತನ್ನು ನೀರು ಕುಡಿಯಲು ಎದ್ದ ಸೀತಮ್ಮನಿಗೆ ಕೇಳಿಸಿ ಭೂಮಿ ಬಾಯಿ ಬಿಡಬಾರದೆ ಎನಿಸಿತು. ಮರುದಿನವೇ ಅಲ್ಲಿಂದ ಹೊರಟ ಸೀತಮ್ಮ ನೇರವಾಗಿ ವೃದ್ಧರ ಆಶ್ರಮ ಸೇರಿದರು.

ಸ್ವಲ್ಪ ದಿನಕ್ಕೆ ಅವರ ಹೆಸರಿಗೆ ಇನ್ಷೂರೆನ್ಸ್ ಹಣ 1 ಲಕ್ಷ ಅವರಿಗೆ ಬಂದಿದೆ ಎಂದು ಮಕ್ಕಳಿಗೆ ತಿಳಿಯಿತು. ಹೇಗಾದರೂ ಅಮ್ಮನನ್ನು ತಾನೇ ಇಟ್ಟುಕೊಳ್ಳುವುದಾಗಿ ಸುರೇಶ ಮನದಲ್ಲಿ ಲೆಕ್ಕ ಹಾಕಿದ. ರಶ್ಮಿ ಇದ್ದಕ್ಕಿದ್ದಂತೆ ಅತ್ತೆಯನ್ನು ಗೌರವಿಸುವ ಹಾಗೇ ಮಾತನಾಡಿದಳು. ಸುರೇಖಾ ಹಾಗೂ ರಮೇಶರಿಗೆ ವಿಷಯ ತಿಳಿದ ಕೂಡಲೇ ಸುರೇಖಾನನ್ನು ಅವಳ ಅಮ್ಮನನ್ನು ಕರ ತರಲು ಕಳಿಸಿದ.

ಅವರು ಊಹಿಸಿದ್ದೇ ಒಂದು ನಡೆದದ್ದೇ ಒಂದಾಗಿತ್ತು. "ನಾನು ಈಗ ನೆಮ್ಮದಿಯಿಂದ ಇರುವೆ.

ನೀವು ನಿಮ್ಮ ಪಾಡಿಗೆ ಸುಖವಾಗಿರಿ'' ಎಂದು ಶಾಂತವಾಗಿ ಉತ್ತರಿಸಿ ಕರೆಯಲು ಬಂದ ಮೂವರನ್ನು ಬರಿಗೈಯಲ್ಲಿ ಕಳಿಸಿದರು.

ರಾಜಲಕ್ಷ್ಮಿ ಗೌರಿಶಂಕರ್



## ನಿರ್ಧಾರ

"ಹೌದು, ಈಗ ಉಳಿದಿರೋದು ಇದೊಂದೇ ಮಾರ್ಗ'' ಎಂದುಕೊಂಡರು ಸುಶೀಲಮ್ಮ. ಪಕ್ಕದ ಮನೆ ಶ್ಯಾಮರಾಯರು ಬರುವುದನ್ನೇ ಕಾಯುತ್ತಾ, ಬಸ್‌ಸ್ಟಾಪ್‌ಕ್ಕೆ ಸನಿಹದಲ್ಲಿದ್ದ ದೇವಸ್ಥಾನದ ಕಂಬಕ್ಕೆ ಒರಗಿ ಕುಳಿತ ಅವರ ಕಣ್ಣೆದುರಿಗೆ ಈವರೆಗೆ ನಡೆದುದೆಲ್ಲ ಮತ್ತೊಮ್ಮೆ ಸಿನೆಮಾ ರೀತಿಯಲ್ಲಿ ಹಾಯ್ದು ಹೋಗತೊಡಗಿತು.

ರಾಮರಾಯರ ಕೈ ಹಿಡಿದಾಗ ಎಷ್ಟೊಂದು ಮುದವಿತ್ತು! ಕೈ ತುಂಬ ಸಂಬಳ ತರುತ್ತಿದ್ದ ರಾಯರು ಅಷ್ಟೇ ಪ್ರೀತಿಯಿಂದ ಸುಶೀಲಮ್ಮಳನ್ನು ನೋಡಿಕೊಂಡಿದ್ದರು. ಅವಳಾದರೂ ಅಷ್ಟೇ. ಅವರ ಪ್ರೀತಿಗೆ ತಕ್ಕಂತೆ ಒಂದು ಗಂಡು ಒಂದು ಹೆಣ್ಣು ಮಗು ಹೆತ್ತು ಗಂಡನ ಮನೆಯನ್ನು ಬೆಳಗಿದ್ದಳು. ಗಂಡ ಮಕ್ಕಳೊಂದಿಗೆ ಸುಖವಾಗಿದ್ದಾಗ ದಿನಗಳು ಕಳೆದದ್ದೇ ಗೊತ್ತಾಗಲಿಲ್ಲ. ಆದರೆ ಅಂದು ಆ ಆಘಾತಕರ ಸುದ್ದಿ ಕೇಳಿ ಸುಶೀಲಮ್ಮ ನೆಲಕ್ಕೆ ಕುಸಿದಿದ್ದರು. ಎದೆ ಬಿರಿಯುವಂತೆ ಶೋಕಿಸಿದ್ದರು. ಅಪಘಾತದಲ್ಲಿ ಮೃತರಾದ ರಾಯರು ಆಕೆಯನ್ನು ಹಾಗೂ ಮಕ್ಕಳನ್ನು ಅನಾಥರನ್ನಾಗಿಸಿದ್ದರು. ಅನಂತರದ ಜೀವನವೆಲ್ಲ ಬೇವಿನಂತೆ ಕಹಿಯಾದುದೇ. ಇರುವ ಇಬ್ಬರು ಮಕ್ಕಳನ್ನು ಬೆಳೆಸಿ, ವಿದ್ಯೆ ಕೊಡಿಸಿ ದೊಡ್ಡವರನ್ನಾಗಿ ಮಾಡುವಷ್ಟರಲ್ಲಿ ಸುಶೀಲಮ್ಮ ಜರ್ಝರಿತಳಾಗಿದ್ದಳು. ಅಂತೂ ಮಗನಿಗೆ ನೌಕರಿ ಸಿಕ್ಕಾಗ ಅವರ ಮುಖದಲ್ಲಿ ಮತ್ತೆ ನಗುವಿನ ಬೆಳ್ಳಿರೇಖೆ ಮೂಡಿತ್ತು. ಮರುವರ್ಷವೇ ಮಗಳ ಮದುವೆಯು ಬ್ಯಾಂಕ್ ಆಫೀಸರ್ ಸುಬ್ರಹ್ಮಣ್ಯನೊಂದಿಗೆ ನಿಶ್ಚಿತವಾದಾಗ ಅದೆಲ್ಲ ತನ್ನ ರಾಯರ ಪುಣ್ಯವೇ ಎಂದುಕೊಂಡಳು. ಮಗಳು ಗಂಡನ ಮನೆಗೆ ಹೋಗುತ್ತಿದ್ದಂತೆಯೇ ಸೊಸೆ ಮಗನ ಕೈ ಹಿಡಿದು ಹೊಸ್ತಿಲ ತುಳಿದಿದ್ದಳು.

ಸೊಸೆ ಬರುತ್ತಲೇ ಸುಶೀಲಮ್ಮಳ ಜೀವನದಲ್ಲಿ ಮತ್ತೆ ನರಕ ಯಾತನೆ ಪ್ರಾರಂಭವಾಯಿತು. ಆಧುನಿಕ ಶಿಷ್ಟಾಚಾರದಲ್ಲಿ ಬೆಳೆದ ಸೊಸೆಗೆ ಸುಶೀಲಮ್ಮಳ ಹಳೆಯ ರೀತಿ ನೀತಿಗಳೊಂದೂ ಸರಿ ಬರಲಿಲ್ಲ. ಅವಳು ಕೂತರೂ, ನಿಂತರೂ ಸೊಸೆಗೆ ಸಮಾಧಾನವಿಲ್ಲ. ಮನೆಗೆ ಬರುವ ಗೆಳತಿಯರೆದುರು ಸುಶೀಲಮ್ಮಳನ್ನು 'ಅತ್ತೆ' ಎಂದು ಕರೆಯಲು ಆಕೆಗೆ ಅವಮಾನವೆನಿಸುತ್ತಿತ್ತು. ಮಗನೂ ಹೆಂಡತಿಯ ಮಾತು ಕೇಳಿ ಆಗಾಗ ತಾಯಿಯ ಮೇಲೆ ರೇಗಾಡುತ್ತಿದ್ದ. "ಅಮ್ಮಾ ನಿನಗೆ ವಯಸ್ಸಾಗಿದೆ. ಈಗ ಹಾಕಿದ್ದನ್ನು ಎರಡು ಹೊತ್ತು ತಿಂದು ಸುಮ್ಮನೆ ರಾಮಾ–ಕೃಷ್ಣಾ ಎಂದು ಮೂಲೆಯಲ್ಲಿ ಕುಳಿತಿರಬಾರದೆ'' ಎಂದು ಹೇಳುವ ಮಗನ ಮಾತು ಸುಶೀಲಮ್ಮಳನ್ನು ಭರ್ಚಿಯಂತೆ ಇರಿಯುತ್ತಿದ್ದವು. "ಅವಳು ನನ್ನ ಹೆಂಡತಿ. ಅವಳೇನಾದರೂ ಮಾಡಲಿ, ನೀ ಸುಮ್ನೆ ಇರಮ್ಮ'' ಎಂದು ಹೆಂಡತಿಯನ್ನೇ ಎತ್ತಿ ಕಟ್ಟುವ ಮಗನ ಮಾತು ಕೇಳಿದಾಗ "ನಾನು ಇವನಿಗೆ ಏನೂ ಅಲ್ಲವೇ?'' ಎಂದು ಮನಸ್ಸಿನಲ್ಲೇ ದುಃಖಿಸುತ್ತಿದ್ದಳು. ಈ ಮಗನ ಗೊಡವೆ ಬೇಡ ಮಗಳ ಹತ್ತಿರವಾದರೂ ಹೋಗೋಣವೆಂದರೆ, ಮೊನ್ನೆ ಬಂದಾಗ ಆಕೆ, "ಮುಂಬಯಿಯಲ್ಲಿ ಗಂಡ–ಹೆಂಡತಿ ಇಬ್ಬರು ಮಕ್ಕಳನ್ನು ಕಟ್ಟಿಕೊಂಡು ಇರೋದೇ ಒಂದು ಕಷ್ಟವಮ್ಮಾ ಅವರೊಬ್ಬರ ಸಂಬಳ ನಾಲ್ಕು ಜನಕ್ಕೆ ಹದಿನೈದು ದಿನಕ್ಕೂ ಸಾಲದು. ಇನ್ನು ನಿನ್ನನ್ನು ಕರ್‍ಕೊಂಡು ಹೋಗಿ ಮನೆಯಲ್ಲಿ ಹೇಗಮ್ಮಾ ಇಟ್ಕೊಳ್ಳೋದು?, ಮನೆಗೆ ಆಗಾಗ ಅವರ ಫ್ರೆಂಡ್ಸ್ ಎಲ್ಲಾ ಬರ್‍ತಿರ್ತಾರೆ. ನಮ್ಮೆಜಮಾನ್ರಿಗೆ ನಿನ್ನಂಥಾ ಹಳೇ ಜನರನ್ನ ಕಂಡರೆ ಆಗೋದಿಲ್ಲಾಂತ ನಿನಗೆ ಗೊತ್ತಿಲ್ಲೇನಮ್ಮಾ?'' ಎಂದು ಕೈ ಬಾಯಿ ತಿರುವುತ್ತಾ ಹೇಳಿದಾಗ ಅವಳ ಮುಖಕ್ಕೆರಡು ಬಾರಿಸಲೇ ಎಂಬಷ್ಟು ಸಿಟ್ಟು ಬಂದಿತ್ತು. "ಇಂಥ ರಾಕ್ಷಸಿಯನ್ನು ನಾನೇ ಹೆತ್ತನೇ'' ಎಂದುಕೊಂಡರು ಸುಶೀಲಮ್ಮ.

"ಮುಪ್ಪಿನ ಕಾಲದಲ್ಲಿ ಮಗನೋ ಮಗಳೋ ತನಗೆ ಆಧಾರವಾಗಬಹುದು ಎಂದುಕೊಂಡು ಎಷ್ಟೊಂದು ಆಕ್ಕರೆಯಿಂದ ಬೆಳೆಸಿದ್ದೆ. ಆದರೆ ಅದೆಲ್ಲವೂ ಹಾವಿಗೆ ಹಾಲೆರೆದಂತಾಯಿತೇ?'' ಎಂದುಕೊಂಡ ಸುಶೀಲಮ್ಮ ಅಂದೇ ಯಾವುದೋ ನಿರ್ಧಾರಕ್ಕೆ ಬಂದರು.

ಮರುದಿನ ನಸುಕಿನಲ್ಲಿಯೇ ಪಕ್ಕದ ಮನೆಯಲ್ಲಿದ್ದ ಶ್ಯಾಮರಾಯರನ್ನು ಕಂಡು ಬಂದಳು. ಶ್ಯಾಮರಾಯರು ರಾಮರಾಯರ ಆಪ್ತ ಸ್ನೇಹಿತರಷ್ಟೇ ಅಲ್ಲ, ಹಿತಚಿಂತಕರೂ ಹೌದು. ಸುಶೀಲಮ್ಮನಿಗಂತೂ ಅಣ್ಣನ ಸಮಾನ. ಸುಶೀಲಮ್ಮಳ ಮನೆಯಲ್ಲಿ ನಡೆಯುವುದೆಲ್ಲ ಅವರಿಗೆ ಗೊತ್ತು. ಅವರ ಮನೆಯಲ್ಲೂ ಅದೇ ಗೋಳು. ಇಬ್ಬರು ಮಕ್ಕಳು ಕೆಲಸಕ್ಕೆ ಹೋಗುತ್ತಿದ್ದಂತೆಯೇ ಸೊಸೆಯಂದಿರ ಕಾಟ ಪ್ರಾರಂಭವಾಗುತ್ತದೆ. ವಯಸ್ಸಿಗೂ ಮೀರಿದ ಕೆಲಸ ಮಾಡಬೇಕು. ಅವರು ಹಾಕಿದ್ದನ್ನು ತಿಂದು ತೆಪ್ಪಗಿರಬೇಕು. ಇದರಿಂದ ಮುಕ್ತರಾಗಲು ಅವರು ಯೋಜನೆಯೊಂದನ್ನು ರೂಪಿಸಿದರು. ಸುಶೀಲಮ್ಮನಿಗೂ ಆ ಯೋಜನೆ ಹೇಳಿದಾಗ ಅವರಿಗೂ ಸಂತೋಷವಾಯಿತು.

ಸುಶೀಲಮ್ಮ ಕುಳಿತಲ್ಲಿಗೆ ಶ್ಯಾಮರಾಯರು ಕೂಡ ತಮ್ಮ ಒಂದು ಕೈಯಲ್ಲಿ ಕೋಲು, ಇನ್ನೊಂದು ಕೈಯಲ್ಲಿ ಬ್ಯಾಗ್ ಹಿಡಿದು ಬಂದರು. ಅಷ್ಟರಲ್ಲೇ ಅಲ್ಲಿಗೆ ಬಂದ ಕೆಂಪು ಬಸ್ಸನ್ನು ಏರಿ 'ವೃದ್ಧಾಶ್ರಮ'ವಿದ್ದ ಆ ನಗರದತ್ತ ಅವರಿಬ್ಬರೂ ಹೊರಟರು!

—ಗಾಯತ್ರಿ ಇನಾಮದಾರ

## ಮಾತೆಯ ಮಹಿಮೆ




ಹಳ್ಳಿಯ ಹೆಂಗಳೆಯರಿಗೆ ತಮ್ಮ ಹಕ್ಕುಗಳ ಕುರಿತು, ಸ್ತ್ರೀ ಸಮಾನತೆಯ ಕುರಿತು ತಿಳಿವಳಿಕೆಯಿಲ್ಲ ಎಂಬುದು ನಗರವಾಸಿ ಸುಶಿಕ್ಷಿತ ವರ್ಗದ ಜನರಲ್ಲಿ ಆಳವಾಗಿ ಬೇರೂರಿದ ಒಂದು ನಂಬಿಕೆ. ಕಾರಣ ನಗರವಾಸಿ ಮಹಿಳೆಯರಂತೆ ಅವರು ಕಾನೂನು ಪುಸ್ತಕಗಳನ್ನು ಓದಿದವರಲ್ಲ. ಮನುಸ್ಮೃತಿಯನ್ನು ಟೀಕಿಸಲು ಅವರಿಗೆ ಬರುವುದಿಲ್ಲ, ಸ್ತ್ರೀಸ್ವಾತಂತ್ರ್ಯದ ಕುರಿತು ಪತ್ರಿಕೆಗಳಲ್ಲಿ ಅಂಕಣಗಟ್ಟಲೆ ಬರೆಯುವುದಿಲ್ಲ. ಪುತ್ರಕಾಮೇಷ್ಟಿಯನ್ನೆದುರಿಸಿ ಪ್ರದರ್ಶನ ನಡೆಸುವುದಿಲ್ಲ. ರಸ್ತೆಯಲ್ಲಿ ಮೆರವಣಿಗೆ ಹೋಗುವುದು, ಸಮೂಹ ಮಾಧ್ಯಮಗಳಲ್ಲಿ ಪ್ರಚಾರ ಮಾಡುವುದು ಹೀಗೆ ಹಲವು ಹತ್ತು ಬಗೆಯಲ್ಲಿ ತಮ್ಮಲ್ಲಿ ಎಚ್ಚರ ಮೂಡಿದೆ ಎಂದು ತಿಳಿಸುತ್ತಿಲ್ಲ. ಇವೆಲ್ಲ ಚಟುವಟಿಕೆಗಳಿಗೆ ಇಚ್ಛಿತ ಫಲ ದೊರೆಯಲು ದೀರ್ಘಕಾಲ ಬೇಕಾಗುತ್ತದೆ ಎಂಬುದು ಬೇರೆ ಮಾತು. ಆದರೆ ಮಹಾರಾಷ್ಟ್ರದ ಖುರ್ಸಾಪುರ–ಜಾಮಗಡ ಹಳ್ಳಿಯ ಹೆಣ್ಣುಮಕ್ಕಳು ನಗರವಾಸಿ ಮಹಿಳಾಮಣಿಗಳಂತೆ ಇಂತಹ ಯಾವುದೇ ರೀತಿಯ ಚಟುವಟಿಕೆಗಳಲ್ಲಿ ತೊಡಗದೆ ದೃಢಚಿತ್ತದಿಂದ ಸ್ತ್ರೀ ಪುರುಷ ಸಮಾನತೆಯನ್ನು ಸಾಧಿಸಿದ್ದಾರೆ.

ಆ ಗ್ರಾಮದ ಶಾಲೆಯ ದಾಖಲೆ ಪುಸ್ತಕಗಳು, ಹಾಜರಿ ಪುಸ್ತಕಗಳು ಇವರ ಸಾಧನೆಗೆ ಸಾಕ್ಷಿ ಹೇಳುತ್ತವೆ. ಅವುಗಳಲ್ಲಿ ಮಕ್ಕಳ ಹೆಸರಿನೊಂದಿಗೆ ತಂದೆಯ ಹೆಸರು ಮಾತ್ರವಲ್ಲ ತಾಯಿಯ ಹೆಸರೂ ಸೇರಿಕೊಂಡಿದೆ. ಉದಾಹರಣೆಗೆ ರಾಜೇಶ್ ರತ್ನಾ ರಾಕೇಶ್, ಮಧುಕರ ಸುಮನ ರಾಮಚಂದ್ರ. ಇವುಗಳಲ್ಲಿ ಮೊದಲ ಹೆಸರು ಮಗುವಿನದಾದರೆ ಮಧ್ಯದ ಹೆಸರು ತಾಯಿಯದು, ಕೊನೆಯ ಹೆಸರು ತಂದೆಯದು.

ಇನ್ನು ಮುಂದೆ ಹುಟ್ಟಲಿರುವ ಮಕ್ಕಳ ಹೆಸರಿನ ನಂತರ, ತಂದೆಯ ಹೆಸರಿಗೂ ಮೊದಲು ತಾಯಿಯ ಹೆಸರನ್ನು ಕಡ್ಡಾಯವಾಗಿ ನಮೂದಿಸಬೇಕೆಂಬ ವಿಶೇಷ ನಿರ್ಣಯವನ್ನು 1991ರ ನವೆಂಬರ್‌ನಲ್ಲಿ ಅಲ್ಲಿನ ಗ್ರಾಮಸಭೆ ಒಮ್ಮತದಿಂದ ಅಂಗೀಕರಿಸಿತು.

ಹಳ್ಳಿಯ ಹೆಣ್ಣುಮಕ್ಕಳು ತಮ್ಮಲ್ಲಿ ಮೂಡಿದ ಈ ಆಲೋಚನೆಯನ್ನು ಈ ರೀತಿ ಯಶಸ್ವಿಯಾಗಿ ಕಾರ್ಯರೂಪಕ್ಕಿಳಿಸಿದರೆಂದರೆ ಆಶ್ಚರ್ಯವಾಗದಿರದು. "ಎಲ್ಲ ಮಕ್ಕಳೂ ತಂದೆಗಿಂತ ತಾಯಿಗೆ ಹತ್ತಿರವಾಗಿರುತ್ತಾರೆ. ಆದ್ದರಿಂದ ಮಗುವಿನ ಹೆಸರಿನ ನಂತರ ತಾಯಿಯ ಹೆಸರನ್ನು ನಮೂದಿಸುವುದು ಸರ್ವರೀತಿಯಲ್ಲೂ ನ್ಯಾಯ'' ಎಂದು ಈ ಕುರಿತು ಕೇಳಿದ ಪ್ರಶ್ನೆಗೆ ಸಹಜವಾಗಿ ಉತ್ತರಿಸುತ್ತಾರೆ.

ಹಳ್ಳಿಯ ಹೆಂಗಸರು ಜಗಲಿಯ ಮೇಲೆ ಕುಳಿತು ಎಲೆ–ಅಡಿಕೆ ಜಗಿಯುತ್ತ, ಊರ ಪಂಚಾಯತಿ ಮಾಡುತ್ತ ಕಾಲಹರಣ ಮಾಡುವವರು ಎಂಬುದು ಸುಶಿಕ್ಷಿತ ವರ್ಗದ ಸಾಮಾನ್ಯ ನಂಬಿಕೆ. ಆದರೆ ಈ ಹಳ್ಳಿಯ ಹಮ್ಮೀರೆಯರು ಸುಶಿಕ್ಷಿತ ಮಹಿಳಾಮಣಿಗಳು ನಾಚುವಂತೆ, ಯಾವುದೇ ಹಾರಾಟ–ಹೋರಾಟಗಳಿಲ್ಲದೆ, ತಮ್ಮ ಗ್ರಾಮ ಪಂಚಾಯತಿ ಇಂತಹ ಕ್ರಾಂತಿಕಾರಕ ನಿರ್ಣಯವನ್ನು ಅಂಗೀಕರಿಸುವುದು ಮಾತ್ರವಲ್ಲ, ಅಕ್ಷರಶಃ ಆಚರಣೆಗೆ ತರುವಲ್ಲೂ ಯಶಸ್ವಿಯಾಗಿದ್ದಾರೆ. ಪುರುಷ ಪ್ರಾಧಾನ್ಯದ ವಿರುದ್ಧ, ಸ್ತ್ರೀ ಸಮಾನತೆಗಾಗಿ ಅಹರ್ನಿಶಿ ಹೋರಾಟ ನಡೆಸುವ ನಗರವಾಸಿ ಸುಶಿಕ್ಷಿತ ಮಹಿಳಾಮಣಿಗಳಿಗೆ ಇಂತಹ ಧೈರ್ಯ ಬಂದೀತೇ?

# ಅಡುಗೆ ಮನೆ ಸಾಹಿತ್ಯ – ಓದುಗರ ಪ್ರತಿಕ್ರಿಯೆ

## ದೃಷ್ಟಿಕೋನ ಬದಲಾಗಲಿ

ಮಹಿಳಾ ಸಾಹಿತ್ಯ ಅಡಿಗೆ ಮನೆ ಸಾಹಿತ್ಯ ಎನ್ನುವ ಮಾತು ನಿಜವೇ ಆಗಿದ್ದರೂ, ಅದಕ್ಕೆ ಕಾರಣವಾದ ಅಂಶಗಳನ್ನು ಗಮನಿಸಿದಲ್ಲಿ, ಮಹಿಳಾ ಲೇಖಕಿಯರಲ್ಲಿರುವ ದೌರ್ಬಲ್ಯಗಳು ಒಂದು ಅಂಶವಾದರೆ, ಪುರುಷ ಪ್ರಧಾನ ಸಮಾಜವೂ ಒಂದು ಬಹು ಮುಖ್ಯ ಕಾರಣ.

ಭಾವುಕತೆ ಸ್ತ್ರೀ ಸಹಜವಾದ ಸ್ವಭಾವ. ಆದರೆ ಸಾಹಿತ್ಯ ರಚನೆಗೆ ಭಾವುಕತೆಯೊಂದೇ ಬಂಡವಾಳವಾಗಲಾರದು. ಆದರೆ ಬಹಳಷ್ಟು ಮಹಿಳಾ ಸಾಹಿತಿಗಳು ಭಾವುಕತೆಯನ್ನೇ ಬಂಡವಾಳವಾಗಿಟ್ಟುಕೊಂಡು ಬಹಳಷ್ಟು ಕತೆ, ಕಾದಂಬರಿಗಳನ್ನು ಬರೆದಿದ್ದಾರೆ. ಈ ಬಗೆಯ ಸಾಹಿತ್ಯ ಕೇವಲ ಒಂದು ವರ್ಗದ ಓದುಗರನ್ನು ಆಕರ್ಷಿಸಬಹುದಾದರೂ, ಇದರಿಂದ ಮನುಷ್ಯನ ಚಿಂತನೆಯಾಗಲೀ, ಸಂಸ್ಕಾರವಾಗಲೀ ಉತ್ತಮಗೊಳ್ಳಲಾರದು. ಅಂತಹ ರಚನೆಗಳು ನೆನಪಿನಲ್ಲುಳಿಯದ ಕೇವಲ ಸಮಯ ಕೊಲ್ಲುವ 'ಚ್ಯೂಯಿಂಗ್ ಗಮ್ ಸಾಹಿತ್ಯ'ವಾಗಷ್ಟೇ ಉಳಿಯಬಲ್ಲವು.

ಮಹಿಳಾ ಲೇಖಕಿಯರು ಸಾಹಿತ್ಯ ರಚನೆಗೆ ಮೊದಲು, ಕೂಲಂಕಷ ಪೂರ್ವಭಾವಿ ತಯಾರಿ, ಟಿಪ್ಪಣಿ, ಹಾಗೂ ವಿಷಯ ಸಂಗ್ರಹಣೆಗೆ ಹೆಚ್ಚಿನ ಆದ್ಯತೆ ಕೊಡುವುದು ಒಳಿತು.

ಹದಿವಯಸ್ಸಿನ ಹುಡುಗಿಯರಲ್ಲಿ ಪ್ರೇಮ ಕವನಗಳನ್ನು ನೀಡುವುದರೊಂದಿಗೆ ಆರಂಭವಾಗುವ ಬಹಳಷ್ಟು ಸಾಹಿತ್ಯಾಭ್ಯಾಸ ಕುಡಿಯೊಡೆಯುವ, ಗಿಡವಾಗಿ ನೆಟ್ಟಗೆ ನಿಲ್ಲುವ ಮೊದಲೇ ನೆಲಕ್ಕೆ ಬೀಳುವ ಸಂದರ್ಭಗಳೇ ಹೆಚ್ಚು!

ಬಾಲ್ಯದಿಂದಲೇ ಗಂಡಿಗೆ ನಿರ್ದಿಷ್ಟ ಗುರಿಯನ್ನು ಹೊಂದಲು ಪ್ರಚೋದಿಸುವ ಪೋಷಕವರ್ಗ, ಅದೇ ಹೆಣ್ಣಿನ ವಿಷಯದಲ್ಲಿ ಅಡಿಗೆ, ಗಂಡ, ಮನೆ, ಮಕ್ಕಳೇ ಬದುಕಿನ ಧ್ಯೇಯವೆನ್ನುವ ಮಾತುಗಳನ್ನು ತಲೆಗೆ ತುಂಬುತ್ತದೆ. ಇವೆಲ್ಲವನ್ನೂ ಮೀರಿ ಸಾಹಿತ್ಯರಚನೆಯಲ್ಲಿ ಆಸಕ್ತಿ ಹೊಂದಿದರೂ ಅದಕ್ಕೆ ತಕ್ಕ ಪ್ರೋತ್ಸಾಹ ಸಿಗುವುದು ಬಹಳ ಕಡಿಮೆ. ಸಾಹಿತ್ಯಾಸಕ್ತರ ಪರಿಚಯ, ಚರ್ಚೆ, ಸಾಹಿತ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆಗಳಿಗೆ ಕುಟುಂಬದ ನಿರುತ್ಸಾಹ ದೊಡ್ಡ ತೊಡರಾಗುತ್ತದೆ. ಆದರೆ ಗಂಡಿಗೆ ಇದೊಂದು ಸಮಸ್ಯೆಯೇ ಅಲ್ಲ. ತನಗೆ ಆಸಕ್ತಿಯಿರುವ ವಿಷಯದಲ್ಲಿ ಯಾವ ಸಮಯದಲ್ಲಿಯಾದರೂ ಎಲ್ಲಿಗಾದರೂ ಹೋಗಿ ಬರಬಲ್ಲ, ಯಾರನ್ನಾದರೂ ಭೇಟಿ ಮಾಡಬಲ್ಲ. ಅವನ ಈ ಕೆಲಸಗಳಿಗೆ ಸಮಾಜವೆಂದೂ ಅಪಸವ್ಯಗಳ ಬೆಟ್ಟು ಮಾಡಿ ತೋರಿಸುವುದಿಲ್ಲ.

ತನ್ನ ಸಮಾನ ಅಭಿರುಚಿಯ ಹೆಣ್ಣನ್ನು ಆರಿಸುವ, ವರಿಸುವ ಸ್ವಾತಂತ್ರ್ಯ ಇಂದು ಒಬ್ಬ ಗಂಡಿಗಿದೆ. ಆದರೆ ಹೆಣ್ಣಿಗೆ?

ಮಹಿಳಾ ಲೇಖಕಿಯರ ಪಾಲಿಗೆ ವಿವಾಹವೆಂಬುದು ಒಂದು ಅಗ್ನಿಪರೀಕ್ಷೆಯಂತೆ. ವಿವಾಹನಂತರ ಅವಳು ಸಾಹಿತ್ಯಕ್ಷೇತ್ರದಲ್ಲಿ ಮುಂದುವರಿಯಬೇಕೇ? ಅಥವಾ ತನ್ನ ಹವ್ಯಾಸ, ಆಸಕ್ತಿಗಳಿಗೆಲ್ಲಾ ತರ್ಪಣ ಬಿಟ್ಟು ಒಬ್ಬ ಸಾಮಾನ್ಯ ಗೃಹಿಣಿಯಾಗಿ ಮುಂದುವರಿಯಬೇಕೇ? ಎನ್ನುವುದು ಅವಳ ಪತಿಯ ಮನಸ್ಥಿತಿಯ ಮೇಲೆ ನಿರ್ಧಾರವಾಗುತ್ತದೆ.

ಜಾತೀಯತೆಯನ್ನು ಹೊಡೆದೋಡಿಸಿ, ಸ್ತ್ರೀಗೆ ಸ್ವಾತಂತ್ರ್ಯ–ಸಮಾನತೆಗಳನ್ನು ಕೊಡಿ ಎನ್ನುವ ಕೂಗು ಮುಗಿಲುಮುಟ್ಟುತ್ತಿರುವ ಈ ದಿನಗಳಲ್ಲಿ ಸಾಹಿತ್ಯದಲ್ಲಿ ಆಸಕ್ತಿ ಹೊಂದಿರುವ, ತನ್ನ ಅಭಿರುಚಿ, ಹವ್ಯಾಸಗಳಿಗೆ ಸರಿಜೋಡಿಯಾಗಬಲ್ಲ ಅನ್ಯಜಾತಿಯ ವರ ದೊರೆತರೂ, ಹೆಣ್ಣಿಗೆ ವಿವಾಹವಾಗುವ ಧೈರ್ಯವಾಗಲೀ ಅದನ್ನು ಸುಲಭವಾಗಿ ಒಪ್ಪಿಕೊಳ್ಳುವ ಸಮಾಜವಾಗಲೀ ಇಂದು ನಮ್ಮಲ್ಲಿದೆಯೇ? ಆದರೆ ಜಾತಿ ಹೊಂದಾಣಿಕೆ, ನೆರವು, ಪ್ರೋತ್ಸಾಹಗಳಿಂದ ಬದುಕಿನಲ್ಲಿ ಬಹಳಷ್ಟನ್ನು ಸಾಧಿಸಿರುವ ಮಹಿಳಾ ಲೇಖಕಿಯರು ಹಲವಾರು ಮಂದಿ. ಉದಾ: ಅನುಪಮ ನಿರಂಜನ, ಕಮಲಾ ಹಂಪನಾ ಇತ್ಯಾದಿ.

ಈಗಿನ ಪುರುಷ ಪ್ರಧಾನ ಸಮಾಜದ ದೃಷ್ಟಿಕೋನ ಬದಲಾಗಿ ವಿದೇಶಗಳಲ್ಲಿರುವಂತೆ ಹೆಣ್ಣು ಗಂಡು ಸಮಾನವೆನ್ನುವ, ಜಾತೀಯತೆಯ ಅಡೆತಡೆಗಳಿಲ್ಲದ, ಆರ್ಥಿಕವಾಗಿ ಯಾರ ಹಂಗಿಗೂ ಒಳಪಡದ, ಏಕಾಂಗಿಯಾದರೂ ಬದುಕಬಲ್ಲ ಮುಕ್ತ ಸಮಾಜ ಹೆಣ್ಣಿಗೆ ದೊರೆತಾಗ ಖಂಡಿತಕ್ಕೂ ಹೆಣ್ಣಿನಿಂದ ಅತ್ಯುತ್ತಮ ಕೃತಿಗಳನ್ನು ನಿರೀಕ್ಷಿಸಬಹುದು.

—ವೇದಾ, ಚಿಕ್ಕಮಗಳೂರು

## ಪ್ರತಿಭೆಗೆ ಲಿಂಗಭೇದವಿಲ್ಲ

ನಿಂದನೆಯ ಮುಖಾಂತರ ಸೃಜನ ಸಾಹಿತ್ಯಕ್ಕೆ ಸ್ತ್ರೀಯರನ್ನು ಹುರಿದುಂಬಿಸುವ ಕಾವ್ಯ ಕೌಶಿಕ್‌ರ (ಅಡುಗೆ ಮನೆ ಸಾಹಿತ್ಯ – ವನಿತಾ ಜೂನ್ '92) ಶೈಲಿ ಚೆನ್ನಾಗಿದೆ. ದೇಶದ ಮತ್ತು ಪ್ರಪಂಚದ ಒಟ್ಟು ಸಾಹಿತ್ಯವನ್ನು ಸಮೀಕ್ಷಿಸಿ, ಸ್ತ್ರೀಯರ ಕೊಡುಗೆ ಶೂನ್ಯ ಎಂಬ ನಿರ್ಣಯಕ್ಕೆ ಕಾವ್ಯರವರು ಬಂದಂತೆ ಕಾಣುತ್ತದೆ.

ಮೊದಲಿಗೆ ದೇಶದ ಸಾಹಿತ್ಯ : 10ನೇ ಶತಮಾನದ ರಾಜಶೇಖರನು (ಹಿರಿಯ ಕಾವ್ಯ ಮೀಮಾಂಸ ಕರ್ತೃ) ''ಪುರುಷರಂತೆ ಸ್ತ್ರೀಯರೂ ಕವಿಗಳಾಗಬಲ್ಲರು. ಕಾವ್ಯ ನಿರ್ಮಾಣಕ್ಕೆ ಅಗತ್ಯವಿರುವ ಸಂಸ್ಕಾರವು ಆತ್ಮಗತ. ಲಿಂಗ ಭೇದವನ್ನು ಅವಲಂಬಿಸಿಲ್ಲ'' ಎಂದಿದ್ದಾನೆ. ಧನದೇವನು ಸಂಸ್ಕೃತ ಕವಯಿತ್ರಿಯರ ಹೆಸರುಗಳನ್ನು ''ಶೀಲಾ ವಿದ್ಯಾ ಮಾರುಲಾ ಮೋರಿಕಾದ್ಯಾ....'' ಎಂದು ವರ್ಣಿಸಿದ್ದಾನೆ.

'ಕೌಮುದೀ ಮಹೋತ್ಸವ' ನಾಟಕದ ರಚಯಿತ್ರಿ ವಿಜಯಾಂಬಿಕೆಯು 7ರಿಂದ 10ನೇ ಶತಮಾನದ ಮಧ್ಯಕಾಲದವಳು. ಈಕೆ ಒಂದು ಪದ್ಯದಲ್ಲಿ ವ್ಯಾಸ ಮತ್ತು ವಾಲ್ಮೀಕಿಗಳ ಸಾಲಿನಲ್ಲಿ 'ದಂಡಿ'ಗೇ ಸವಾಲು ಹಾಕಿದ್ದಾಳೆ. 14ನೇ ಶತಮಾನದಲ್ಲಿ 'ಮಧುರಾ ವಿಜಯಮ್' ಅಥವಾ 'ವೀರ ಕಂಪಣರಾಯ ಚರಿತಮ್' ಎಂಬ ಕಾವ್ಯವನ್ನು ಬರೆದ ಗಂಗಾದೇವಿಯು ಬುಕ್ಕಾರಾಯನ ಸೊಸೆ. ವಿಜಯ ನಗರದವಳು, 16ನೇ ಶತಮಾನದಲ್ಲಿ 'ವರದಾಂಬಿಕಾಪರಿಣಯ'ವನ್ನು ಬರೆದ ಮತ್ತೊಬ್ಬ ವಿಜಯನಗರದ ಕವಯಿತ್ರಿ, ತಿರುಮಲಾಂಬೆ, ಅಚ್ಯುತ ದೇವರಾಯನ ಪ್ರಿಯೆ. ಒಂದು ಶತಮಾನದ ನಂತರ ಬಂದ ತಂಜಾವೂರಿನ ರಘುನಾಥ ನಾಯಕನ ಪ್ರೇಯಸಿ ರಾಮಭದ್ರಾಂಬೆ ರಚಿಸಿದ ರಘುನಾಥಾಭ್ಯುದಯವು ಐತಿಹಾಸಿಕ ಕಾವ್ಯ. ವೇದಕಾಲದಲ್ಲಿಯೂ ಘೋಷಾ, ಅಪಲಾರಂತಹ ಕವಯಿತ್ರಿಯರೂ, ಗಾರ್ಗಿ, ಆತ್ರೇಯಿಯರಂತಹ ಬ್ರಹ್ಮವಾದಿನಿಯರ ಹೆಸರುಗಳನ್ನು ಪಂಡಿತರು ಸೂಚಿಸುತ್ತಾರೆ. ಇವಲ್ಲದೇ ಶೀಲಾ ಭಟ್ಟಾರಿಕಾ, ಗೌರಿ, ಪದ್ಮಾವತಿ, ಭಾವದೇವಿ, ಇಂದು ರೇಖಾ, ತ್ರಿಭುವನ ಸರಸ್ವತಿ, ವಿದ್ಯಾವತಿ, ಸುಭದ್ರಾ, ಸರಸ್ವತೀ ಕುಟುಂಬದುಹಿತಾ, ರಸವತೀ ಪ್ರಿಯಂವದಾ, ಜಘನಚಪಲಾ, ವಿಕಟ ನಿತಂಬಾ, ಕಾಮಾಕ್ಷಿ, ಮದಿರೇಕ್ಷಣಾ, ಮದಾಲಸ ಮುಂತಾದ 32 ಬಿಡಿ ಕವಯಿತ್ರಿಯರ, ದೇಶದ ವಿವಿಧ ಪ್ರಾಂತ್ಯಗಳಿಂದ ಸಂಸ್ಕೃತ ಸಾಹಿತ್ಯವನ್ನು ಸಂಪನ್ನಗೊಳಿಸಿದ್ದಾರೆ.

ಇನ್ನು ಕನ್ನಡ ಸಾಹಿತ್ಯದಲ್ಲಿ ಸಂಚಿಯ ಹೊನ್ನಮ್ಮ ಹೆಳವನ ಕಟ್ಟೆಯ ಗಿರಿಯಮ್ಮನವರ ಹೆಸರನ್ನು ನಾವು ಕೇಳಿ ಬಲ್ಲೆವು ಅಲ್ಲವೇ? ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯದಲ್ಲಿ ಮಹಿಳೆಯರ ಪಾತ್ರ ಹಿರಿದು. ಹೆಸರುಗಳು ಹೇರಳ. ಇತ್ತೀಚಿನ ಸಾಹಿತ್ಯ ಕ್ಷೇತ್ರದಲ್ಲಿ ಇಲ್ಲ, ಇಲ್ಲವೆಂದು, ಒಂದು ದೊಡ್ಡ ಪಟ್ಟಿಯನ್ನೇ ಲೇಖಕಿ ಕೊಟ್ಟಿದ್ದಾರೆ. ಬಿಟ್ಟಿರುವ ಎರಡು ಪ್ರತಿಭೆಗಳಾದ ಗೀತಾ ನಾಗಭೂಷಣ, ಭಾಗ್ಯಶ್ರೀ ಎ. ಭಟ್‌ರವರ ಹೆಸರುಗಳನ್ನು ಮಾತ್ರ ಸೂಚಿಸುತ್ತೇನೆ.

ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರ ವ್ಯಾಪಕವಲ್ಲ. ಆದರೆ ಇಲ್ಲ ಎಂದು ಹೇಳುವುದು ಸಲ್ಲ; ಪ್ರತಿಭೆ ಮತ್ತು ಶ್ರಮಕ್ಕೆ ಲಿಂಗ ಭೇದದ ಹಣೆ ಪಟ್ಟಿ ಬೇಡ.

ಅದು ಸರಿ! ಮಹಿಳೆಯರು ಅಡಿಗೆ ಮನೆಯಲ್ಲಿ ಯಶಸ್ಸು ಪಡೆದಿದ್ದಾರೆಂದು ಯಾರು ಹೇಳಿದರು? ಸೀತೆ, ಸಾವಿತ್ರಿ, ದ್ರೌಪದಿ, ದಮಯಂತಿಯರು ಕಂಬನಿಗೆ ಹೆಸರಾದವರೇ ಹೊರತು ಅಡುಗೆಗೆ ಅಲ್ಲ. ಪಾಕಶಾಸ್ತ್ರದಲ್ಲೂ ಗರಿಮೆ ಪಡೆದವರು ನಳ ಭೀಮರೆಂಬ ಪುರುಷರೇ ಅಲ್ಲವೇ!

—ಕುಸುಮಾ ಎಸ್. ರಾವ್, ಬಳ್ಳಾರಿ

## ಅಪವಾದವನ್ನು ತೊಡೆದು ಹಾಕಬಹುದು

ಅಡುಗೆ ಮನೆ ಸಾಹಿತ್ಯ ಕುರಿತು ಬರೆದ ಕಾವ್ಯ ಕೌಶಿಕ್‌ರವರ ಲೇಖನಕ್ಕೆ ಧ್ವನಿಸುವುದಾದರೆ ಮಹಿಳೆಯರಿಂದ ಮೂಡಿ ಬರುತ್ತಿರುವ ಎಲ್ಲಾ ಪ್ರಕಾರದ ಸಾಹಿತ್ಯ ಕೃತಿಗಳು ಪರಿಪಕ್ವವಾಗಿವೆ ಎಂದು ಹೇಳಲಾಗುವುದಿಲ್ಲ.ಕಾವ್ಯರವರ ಅಭಿಪ್ರಾಯ ಭಾಗಶಃ ಒಪ್ಪುವಂತದ್ದು, ನಿಜ ಮಹಿಳೆಯರಿಂದ ಪರಿಪಕ್ವವಾದ ಸಾಹಿತ್ಯ ಬಾರದಿರುವುದಕ್ಕೆ ಕಾರಣವಿಷ್ಟೆ. ''ನೀನು ಹೆಣ್ಣು.... ಪತಿವ್ರತೆಯಾಗು... ಮಕ್ಕಳ ತಾಯಿಯಾಗು... ಅಡುಗೆ ಮನೆ ನಿನ್ನ ಕ್ಷೇತ್ರ....'' ಹೀಗೆ ಹೇಳುವ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ತನ್ನದೇ ಆದ ಸ್ವಂತಿಕೆಯನ್ನು ಬೆಳೆಸಿಕೊಳ್ಳಲು ಅವಕಾಶವಿಲ್ಲ. ಸಾಮಾಜಿಕ–ಸಾಹಿತ್ಯಕ

ಮೌಲ್ಯದತ್ತ ಅವಳ ನಿಗಾ ಹರಿಯಲಿಲ್ಲ. ಆದರೂ ಕೆಲವು ಮಹಿಳೆಯರು ಸಾಹಿತ್ಯಲೋಕಕ್ಕೆ ನುಗ್ಗಿ ಅದರ ಸತ್ವ–ಮೌಲ್ಯವನ್ನು ಕಾಣಲು ಹೊರಟರು. ಕಂತಿ ಅಭಿನವ ಪಂಪನಿಗೆ ಸರಿಸಾಟಿಯಾಗಿ ತಾರ್ಕಿಕ ಪದ್ಯ ರಚಿಸಿದರೆ, ಅತ್ತಿಮಬ್ಬೆ ರನ್ನನಂತಹ ಮಹಾಕವಿಯನ್ನು ಪೋಷಿಸಿ ಅವನ ಮೂಲಕ ವೀರೋಚಿತವಾದ 'ಗದಾ ಯುದ್ಧ'ವನ್ನು ಮೂಡಿಸಿದಳು. ಹೊನ್ನಮ್ಮ ಹೆಣ್ಣಿನ ಸ್ಥಾನದ ಮಹತ್ವ ಮತ್ತು ಗಂಡಿಗೆ ಹೆಣ್ಣು ಕಡಿಮೆಯಲ್ಲ ಎಂಬ ಭಾವವನ್ನು ವ್ಯಕ್ತ ಪಡಿಸಿ ಸಾಂಗತ್ಯ ಕಾವ್ಯ ರಚಿಸಿದಳು. ಅಂತೆಯೇ ಶೃಂಗಾಮ್ಮ ಹೆಳವನ ಕಟ್ಟೆ ಗಿರಿಯಮ್ಮ ವಚನಕಾರ್ತಿಯರು ಸಾಹಿತ್ಯಲೋಕದಲ್ಲಿ ದಿಟ್ಟ ಹೆಜ್ಜೆಯಿಟ್ಟು ಮಹಿಳೆಗೂ ಸಾಹಿತ್ಯ ರಚಿಸುವ ಪ್ರತಿಭೆ ಇದೆ ಎಂದು ತೋರಿಸಿದ ಉದಾಹರಣೆ ಅವರ ಕಾವ್ಯರಚನಾ ಚಮತ್ಕಾರವನ್ನು ಪ್ರತಿಬಿಂಬಿಸುವುದಲ್ಲದೇ ಅವಳಲ್ಲೂ ಸ್ವಂತಿಕೆಯಿದೆ ಎಂದು ಉದ್ಘರಿಸಿದರು. ಹಿಂದಿನ ಈ ಮಹಿಳೆಯರ ಸಾಹಿತ್ಯ ಕೃತಿ ಪರಾಮ ರ್ಶಿಸಿದಾಗ ಅದು ಅಡುಗೆ ಮನೆ ಸಾಹಿತ್ಯವಾಗಲಿಲ್ಲ.

ಕವನ ರಚನೆಯಲ್ಲಿ ಈಗಿನ ಮಹಿಳೆಯರು ರಚಿಸುತ್ತಿರುವ ಕವನ ಕೃತಿಗಳು ಮೆಚ್ಚುವಂತದ್ದು. ಈ ದೃಷ್ಟಿಯಲ್ಲೂ ಆಕೆ ಅಡುಗೆ ಮನೆ ಸಾಹಿತ್ಯ ಎಂಬ ಅಪವಾದದಿಂದ ಮುಕ್ತಳಾಗಿದ್ದಾಳೆ.

ಕಾದಂಬರಿ ಲೋಕದಲ್ಲಂತೂ ಲೇಖಕಿಯರು ಬಹಳ ಮುನ್ನಡೆದಿದ್ದಾರೆ. ಬಹುಶಃ ಕಾದಂಬರಿ ಎಂದರೆ ಅದು ಮಹಿಳೆಯರದು ಎಂದು ಹೇಳುವುದುಂಟು. ಆದರೆ ಇಲ್ಲಿ ನಾವು ಗಮನ ಹರಿಸಿದಾಗ ಬಂಡಾಯ ಪ್ರಜ್ಞೆ ಇದ್ದರೂ, ಪುನಃ ಹೆಣ್ಣಿನ ಸುತ್ತ ಹೆಣೆದಿರುವ ಅಂಶಗಳೇ, ಎಂದರೆ ದಾಂಪತ್ಯ, ದುಃಖ, ಸೇಡು, ಮೋಸ, ದುರಂತ, ತ್ಯಾಗ, ನಿರಾಶೆ.... ಇತ್ಯಾದಿ ವ್ಯಕ್ತಿತ್ವವನ್ನು ಚಿತ್ರಿಸುವರೇ ವಿನಹ ರಾಜಕಾರಣಿಯಾದ, ವಿಜ್ಞಾನಿಯಾಗಿರುವ, ವಿಮರ್ಶಕಳಾಗಿರುವ, ಹಾಸ್ಯಮಯವಾಗಿರುವ, ಪತ್ರ ಕರ್ತಳಾಗಿರುವ, ದೇಶ ಸೇವಕಳಾಗಿರುವ ಹೆಣ್ಣಿನ ಪಾತ್ರಗಳು ಮೂಡಿ ಬರುತ್ತಿಲ್ಲ. ಆದ್ದರಿಂದ ಅವಳು ಅಡುಗೆ ಮನೆ ಚೌಕಟ್ಟಿನಲ್ಲೇ ಇದ್ದಾಳೆ ಎಂದು ಅಭಿಪ್ರಾಯ ಪಡ ಬಹುದು.

ಪ್ರವಾಸ ಕಥನ ರಚನೆಯಲ್ಲೂ ಶಾಂತಾದೇವಿಯ ವರು ಬರೆದಿರುವ 'ಶ್ರೀಗಿರಿಯಿಂದ ಹಿಮಗಿರಿಗೆ' ಅಥವಾ ಅನುಪಮಾರವ 'ಐರೋಪ್ಯ ಪ್ರವಾಸಾನುಭವ' ಲೇಖನ ಬಿಟ್ಟರೆ ಅಂತಹ ಪರಿಪಕ್ವವಾದ ಪ್ರವಾಸಾನುಭವ ಕೃತಿಗಳು ಬಾರದಿರುವುದು ಈ ಅಪವಾದಕ್ಕೆ ಗುರಿಯಾಗಿದೆ. ಮತ್ತೆ ಶಿಕ್ಷಣ ಕ್ಷೇತ್ರದ ಅನುಭವ ಲೇಖನಗಳಷ್ಟೇ ಹೊರ ಬಂದಿವೆ. ಪ್ರಬಂಧ ಲೇಖನಗಳು ಬರೆಯುವುದರಲ್ಲಿ ಕೆಲವೇ ಲೇಖಕಿಯರೂ ಇತ್ತೀಚೆಗೆ ಪ್ರಯತ್ನಿಸುತ್ತಿರುವುದು ಮೆಚ್ಚಬಹುದು. ಐತಿಹಾಸಿಕ, ಪತ್ತೇದಾರಿ, ನಾಟಕ, ಹಾಸ್ಯ ಸಾಹಿತ್ಯ ಕೃತಿಗಳನ್ನು ನಾಲ್ಕಾರು ಲೇಖಕಿಯರನ್ನು ಬಿಟ್ಟರೆ, ಇತರೇ ಲೇಖಕಿಯರು ಮುನ್ನಡೆದಿಲ್ಲ. ಹಿಂದಿನ ಮಹಿಳೆಯರಿಗಿಂತ ಈ ಶತಮಾನದ ಮಹಿಳೆಯರಿಗೆ ಸಾಕಷ್ಟು ಅವಕಾಶವಿದೆ. ಮನಸ್ಸು ಮಾಡಿದರೆ ಸಾಹಸಮಯವಾದ ಕೃತಿಗಳನ್ನು ಮೂಡಿಸಬಹುದು. ಈ ಮೇಲಿನ ಪ್ರಕಾರ ಸಾಹಿತ್ಯ ಕೃತಿ ರಚನೆಯಲ್ಲಿ ಮಹಿಳೆಯರು ಮಾಡಿರುವ ಸಾಧನೆ ಪ್ರಶಂಸೆಗೆ ಪಾತ್ರರಾಗಲಾರರು. "ಅಡುಗೆ ಮನೆ ಸಾಹಿತ್ಯ ಪ್ರಶಸ್ತಿ"ಯನ್ನೂ ನಿರಾಕರಿಸಿ ನಿಲ್ಲುವ ಪ್ರಯತ್ನವಾಗಬೇಕು.

ಸಣ್ಣ ಕತೆಗಳ ರಚನೆಯಲ್ಲಿ, ಕಥಾಸಂಕಲನಗಳನ್ನು




ಬರೆಯುತ್ತಿರುವ ಲೇಖಕಿಯರು ಸಾಕಷ್ಟು ಮಂದಿ ಇದ್ದಾರೆ. ಮತ್ತೆ ಅಲ್ಲೂ ಹೆಣ್ಣಿನ ದಾರುಣ–ದುರಂತ ಚಿತ್ರಗಳೇ ಸೃಷ್ಟಿಯಾಗುತ್ತವೆ. ಆದರೂ ಸಣ್ಣ ಕತೆಗಳ ರಚನೆಯಲ್ಲಿ ಮಹಿಳೆಯರ ಪ್ರಯತ್ನ ಸಮಾಧಾನಕರ ವಾಗಿದೆ.

ಕಾವ್ಯ ಕೌಶಿಕ್‌ರವರು ಅಭಿಪ್ರಾಯ ಪಟ್ಟಿರುವಂತೆ 'ಅಡುಗೆ ಮನೆ ಸಾಹಿತ್ಯ' ಮಹಿಳೆಯರದು ಎಂದು ಮೂದಲಿಸುವ ಮಂದಿಗೆ ಮಹಿಳೆ ಬೊಬ್ಬೆಯಿಟ್ಟದ್ದು ಅಥವಾ ಅಲ್ಲಗಳೆದು ಸಮರ್ಥಿಸಿಕೊಳ್ಳುವುದು ನಿಜ! ಕೇವಲ ನಮ್ಮನ್ನು ಸಮರ್ಥಿಸಿಕೊಳ್ಳುವುದು ಹೆಚ್ಚುಗಾರಿಕೆ ಯಲ್ಲ. ಅದಕ್ಕಿಂತ ಲೇಖಕರು ರಚಿಸುವ ಸಾಹಿತ್ಯಕ್ಕೆ ಸರಿಸಾಟಿಯಾಗಿ ಅಥವಾ ಅದಕ್ಕೂ ಮಿಗಿಲಾಗಿ ರಚಿಸುವ ಸ್ಪರ್ಧಾ ಮನೋಭಾವ ಇದ್ದರೆ ಚೆನ್ನಾದೀತು. ಮಹಾಕಾವ್ಯ ಕೃತಿಗಳು ಸ್ತ್ರೀಯಿಂದ ಬಂದಿಲ್ಲ. ಅದರಿಂದ ಅಂಥಹ ಕೃತಿಗಳ ರಚನೆಗೆ ಮಹಿಳೆ ತೊಡಗಬೇಕು. ಆಗಲೇ 'ಅಡುಗೆ ಮನೆ ಸಾಹಿತ್ಯ' ಎಂಬ ಅಪವಾದದಿಂದ ಮುಕ್ತಳಾಗಬಲ್ಲಳು. ಕಾವ್ಯರವರ ಅಭಿಪ್ರಾಯದಂತೆಯೇ ಹೇಳುವುದಾದರೆ ಇದು ಸ್ತ್ರೀ ದ್ವೇಷವಲ್ಲ, ಸತ್ಯಾಂಶವಷ್ಟೇ.

ಇತ್ತೀಚೆಗೆ ಮಹಿಳೆಯರಿಗಾಗಿಯೇ ಅವರ ಕೃತಿಗಳಿಗಾಗಿ 'ಮಹಿಳಾ ಸಾಹಿತ್ಯ ಪ್ರಶಸ್ತಿ' ಗಳನ್ನೂ ಕೆಲವೇ ಸಂಸ್ಥೆಗಳು ನೀಡುವುದರಲ್ಲಿ ಕಾರ್ಯೋನ್ಮುಖಿ ವಾಗಿವೆ. ಇಂತಹ ಪ್ರೋತ್ಸಾಹ ಸಿಕ್ಕಿರುವಾಗ ಮಹಿಳೆಯರು ನಾನಾ ಪ್ರಕಾರ ಸಾಹಿತ್ಯ ಕೃತಿಗಳನ್ನು ರಚಿಸಿದ್ದೇ ಆದರೆ ಈ ಅಪವಾದವನ್ನು ತೊಡೆದು ಹಾಕಬಹುದು. ಆದರೆ ನೂರಕ್ಕೆ ನೂರರಷ್ಟು ಒಪ್ಪದಿದ್ದರೂ ಭಾಗಶಃ ಒಪ್ಪ ಬೇಕಾಗುವುದು. ಎರಡು ದೃಷ್ಟಿಯಲ್ಲೂ ವಿಮರ್ಶಿಸಿ ನೋಡಿದಾಗ ಕೆಲವೇ ಪ್ರಾಕಾರ ಸಾಹಿತ್ಯ ಕೃತಿಗಳನ್ನು ಒದಗಿಸಿದ್ದಾಳೆ. ಆದ್ದರಿಂದ ಅಡುಗೆ ಮನೆ ಸಾಹಿತ್ಯ ಎಂಬ ಮಾತನ್ನು ಅಲ್ಲಗಳೆದರೂ ಇನ್ನೂ ನೂತನ ಶೈಲಿಯ – ನಾನಾ ಪ್ರಕಾರ ಸಾಹಿತ್ಯ ಕೃತಿಗಳು ಲೇಖಕಿಯರಿಂದ ಬಂದರೆ ಮಾತ್ರ ಈ ಅಪವಾದದಿಂದ ದೂರ ಸರಿಯಬಹುದು. ಆದ್ದರಿಂದ ಪರಿಪೂರ್ಣವಾಗಿ ಮಹಿಳೆಯರು ರಚಿಸುವ ಸಾಹಿತ್ಯ ಅಡುಗೆ ಮನೆ ಸಾಹಿತ್ಯ ಎಂದು ಒಪ್ಪದಿದ್ದರೂ, ಭಾಗಶಃ ಒಪ್ಪ ಬೇಕಾಗುವುದು.

— ತುಂಕೂರು ಸುನಂದ



## ಪ್ರಗತಿ ಖಂಡಿತಾ ಸಾಧ್ಯ

ಕಾವ್ಯ ಕೌಶಿಕ್ ಅವರ ಅಡುಗೆ ಮನೆ ಸಾಹಿತ್ಯ ಎಂಬ ಲೇಖನದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀಯರು ರಚಿಸಿರುವ ಸಾಹಿತ್ಯದ ಇತಿಮಿತಿಗಳ ವಿವೇಚನೆ ತುಂಬಾ ಚೆನ್ನಾಗಿ ಮಾಡಿದ್ದಾರೆ. ಲೇಖಕಿಯವರು ಕನ್ನಡ ಸಾಹಿತ್ಯವಷ್ಟೇ ಅಲ್ಲದೆ ಪ್ರಪಂಚದ ಯಾವ ಭಾಷೆಯಲ್ಲೂ ಇದೇ ಪರಿಸ್ಥಿತಿ ಇರುವುದಾಗಿ ಪ್ರಸ್ತಾವ ಮಾಡುತ್ತಾರೆ.

ನಮಗೆ ಪರಿಚಿತವಾದ ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಪಂಪನಿಂದ ಕುವೆಂಪುವರಗೂ ಪುರುಷರೇ ಪ್ರಧಾನವಾಗಿದ್ದಾರೆ. ಅಕ್ಕ, ಹೊನ್ನಮ್ಮ ಎಂದು ಸ್ತ್ರೀ ಸಾಹಿತಿಗಳಿಂದ ರಚಿತವಾಗಿರುವ ಕೃತಿ ಬಲು ಅಪರೂಪ.

ಈ ಪರಿಸ್ಥಿತಿಗೆ (ಕನ್ನಡ ಸಾಹಿತ್ಯದಲ್ಲೇ ಆಗಲಿ ವಿಶ್ವದಲ್ಲೇ ಆಗಲಿ ಪ್ರಸಿದ್ಧ ಕೃತಿಗಳು ರಚಿತವಾಗದೆ ಇರುವುದಕ್ಕೆ) ಕಾರಣ ಏನು? ಸಾಹಿತ್ಯದ ಕೃಷಿಗೆ ಸ್ತ್ರೀಯರ ಕೊಡುಗೆ ಗಮನೀಯವಾಗಿಲ್ಲ ಏಕೆ ಎಂಬುದು ವಿವೇಚಿಸಿದಾಗ ಇದುವರೆಗೆ ಇದ್ದ ಸಾಮಾಜಿಕ ವ್ಯವಸ್ಥೆಯೇ ಇದಕ್ಕೆ ಕಾರಣ – ಶತ ಶತಮಾನಗಳಿಂದ ಸಮಾಜದಲ್ಲಿ ಪುರುಷ ಪ್ರಾಧಾನ್ಯತೆ ಒಪ್ಪಿ ಸ್ತ್ರೀಯು ಎರಡನೆಯ ದರ್ಜೆಯ ಪ್ರಜೆಗಳಾಗಿರುವುದು ಸರ್ವವಿದಿತ. ಸಮಾಜ ಎಂದ ಕೂಡಲೇ ಪುರುಷ ಮಾತ್ರವಲ್ಲ ಸ್ತ್ರೀಯರು ಸೇರುತ್ತಾರೆ. ಹೀಗಾಗಿ ಶೋಷಿತ ಪರಿಸ್ಥಿತಿಗೆ ಸ್ತ್ರೀಯೂ ಜವಾಬ್ದಾರಳು. ಪುರುಷನ ನೆರಳಲ್ಲಿ ಬಾಳುವುದರಲ್ಲಿ ತನ್ನ ಜೀವನದ ಸಾರ್ಥಕತೆ ಕಂಡುಕೊಂಡ ಸ್ತ್ರೀ ತನ್ನದೇ ಆದ ವ್ಯಕ್ತಿತ್ವ, ಆಸೆ, ಅಭಿವ್ಯಕ್ತಿಗಳನ್ನು ಬೆಳೆಸಿಕೊಳ್ಳ ಬೇಕೆಂಬ ಆಲೋಚನೆಯನ್ನೇ ಮಾಡಲಿಲ್ಲವೆನ್ನಬಹುದು.

ಸ್ತ್ರೀ ಸ್ವಾತಂತ್ರ್ಯ ವ್ಯಕ್ತಿತ್ವದ ಕಲ್ಪನೆಗಳು ಗರಿಗೆದರಿರುವುದು ಇತ್ತೀಚೆಗೆ. ವನಿತೆಯರು, ವಿದ್ಯಾಭ್ಯಾಸವನ್ನು (ಶಾಲಾ ಕಾಲೇಜುಗಳ ಮೆಟ್ಟಿಲು ಹತ್ತಿ) ಕಲಿಯಲಾರಂಭಿಸಿದ್ದು ಕೆಲವು ದಶಕಗಳಿಂದ ಮಾತ್ರ. ಸೀಮಿತ ಅವಧಿಯೇ ಆದರೂ ತನ್ನ ಆಲೋಚನೆಯನ್ನು ಸಾಹಿತ್ಯದಲ್ಲೂ ಅಭಿವ್ಯಕ್ತಗೊಳಿಸಲು ಪ್ರಾರಂಭಿಸಿದ್ದಾಳೆ. ಇಂದು ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರು

ಬರದ ಬರವಣಿಗೆಗಳು 'ಅಡುಗ ಮನ ಸಾಹಿತ್ಯ' ಎಂಬ [illegible] ವನ್ನು ಕಾಣಲಾರಂಭಿಸಿರುವ ಸ್ತ್ರೀಯು ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ವೃದ್ಧಾಪ್ಯದಲ್ಲಿ ಮಗ ಹೀಗ ಬಾಳಿನುದ್ದಕ್ಕೂ ಪುರುಷರ ನೆರಳಿನಲ್ಲಿ ಬಾಳಬೇಕೆಂಬ ಮೌಲ್ಯದಿಂದ ಬೇರೆಯಾಗಿ ತನ್ನ ವ್ಯಕ್ತಿತ್ವ ಬೆಳೆಸಿಕೊಂಡು ಅದನ್ನು ಅಭಿವ್ಯಕ್ತಗೊಳಿಸಲು ಕಾಲಾವಕಾಶ ಬೇಕು. ತಲೆ ತಲಾಂತರದಿಂದ ಹೆಣ್ಣನ್ನು ಕಾಣುತ್ತಿದ್ದ ಕಣ್ಣಿಗೂ, ಇಂದು ಸ್ತ್ರೀಯರನ್ನು ನೋಡುವ ದೃಷ್ಟಿಗೂ ವ್ಯತ್ಯಾಸವಿದೆ ಎಂಬುದು ನಿಜ. ಆದರೂ ಶತಮಾನಗಳಿಂದ ರೂಢಿಸಿ ಕೊಂಡು ಬಂದ ಮೌಲ್ಯಗಳು ಬದಲಾಗಲು ಹತ್ತಾರು ವರ್ಷ ಸಾಲದು. ಹೀಗಾಗಿ ಸೀಮಿತ ಕ್ಷೇತ್ರದಲ್ಲಿ ಕನ್ನಡ ಸ್ತ್ರೀ ಸಾಹಿತಿ ಅಭಿವ್ಯಕ್ತಗೊಳಿಸಿಕೊಳ್ಳಲು ಆರಂಭಿಸಿದ್ದಾಳೆ. ಆದರೆ ಲಲಿತವಾದ ಕಾದಂಬರಿ ಕ್ಷೇತ್ರಕ್ಕೆ ಸೀಮಿತಗೊಳ್ಳದೆ ಅವಳ ಅಭಿವ್ಯಕ್ತಿಯ ಕ್ಷೇತ್ರ ಕ್ರಮೇಣ ಕಾವ್ಯ, ಮಹಾಕಾವ್ಯ ವಿಮರ್ಶೆ, ಪ್ರವಾಸ ಕಥನ ಅಷ್ಟೇ ಅಲ್ಲದೆ ಶಾಸ್ತ್ರ ಗ್ರಂಥಗಳ ಕ್ಷೇತ್ರಕ್ಕೂ ಪ್ರವಹಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಸಾಹಿತ್ಯದ ಅಭಿವ್ಯಕ್ತಿಗೆ ಲಿಂಗಬೇಧ ತಪ್ಪಾದರೂ ಸ್ತ್ರೀ ಸಾಹಿತಿಗಳಿಂದ ಕಾಲಕ್ರಮೇಣ ಕನ್ನಡ ಸಾಹಿತ್ಯದ ಎಲ್ಲಾ ಕ್ಷೇತ್ರದಲ್ಲೂ ಪುರುಷರಿಗಿಂತ ಸ್ತ್ರೀಯರು ಸತ್ವದಲ್ಲೂ ಹಾಗೂ ಸಂಖ್ಯೆಯಲ್ಲೂ ಪ್ರಗತಿ ತೋರುವು ದರಲ್ಲಿ ಎಳ್ಳಷ್ಟು ಸಂಶಯವಿಲ್ಲ. (ಯಾವ ಪರೀಕ್ಷಾ ಫಲಿತಾಂಶದಲ್ಲೂ ಇಂದು ಬಾಲಕರಿಗಿಂತ ಬಾಲಕಿಯರದೇ ಮೇಲುಗೈ, ಆಗುತ್ತಿರುವುದು ನಮಗೆಲ್ಲಾ ವೇದ್ಯ ಹೀಗೆ ಮುಂದೆ ಸಾಹಿತ್ಯ ಕೃಷಿಯಲ್ಲೂ ಸ್ತ್ರೀಯರೇ ಕನ್ನಡ ಸಾಹಿತ್ಯದ ಪ್ರಗತಿಗೆ ಕಾರಣರಾಗುವರು.)

ಆದರೆ ಹತ್ತು ವರ್ಷಗಳ (ಕಾವ್ಯ ಕೌಶಿಕ್ ಅವರು ಹೇಳಿರುವ) ಮಿತಿಯಲ್ಲಿ ಈ ಪ್ರಗತಿ ಕಷ್ಟ ಸಾಧ್ಯವಾದರೂ ಹಲವು ದಶಕಗಳ ಅವಧಿಯಲ್ಲಿ ಈ ಪ್ರಗತಿಯನ್ನು ಕನ್ನಡ ಲೇಖಕಿಯರಿಂದ ನಿರೀಕ್ಷಿಸುವುದು ಖಂಡಿತಾ ಸಾಧ್ಯ.

— ಲಲಿತಾ ಶ್ರೀ.ಕಂಠಯ್ಯ




## ಬಿಡುಗಡೆ ಬಯಸದ ಅಪರಾಧಿ

ಜೈಲಿಗೆ ಹೋದವನು ಹೇಗಾದರೂ ಬಿಡುಗಡೆ ಯಾದರೆ ಸಾಕು ಎಂದು ಹಾತೊರೆಯುವುದು ವಾಡಿಕೆ. ಆದರೆ ಭುಜಬಲ ಎಂಬ ತರುಣ ಅದಕ್ಕೆ ಅಪವಾದ. ಇವನೊಬ್ಬ ಪದವೀಧರ, ನೌಕರಿಗಾಗಿ ಅಲೆದಾಟದಲ್ಲಿ ಹಸಿವು ತಾಳಲಾರದೆ ಒಮ್ಮೆ ಅಪರಾಧ ಮಾಡಿ ಜೈಲು ಸೇರಿದ. ಅಲ್ಲಿ ನಿಯಮಿತವಾಗಿ ಊಟ ದೊರೆಯುತ್ತದೆ ಎಂದು ತಿಳಿದ ಭುಜಬಲ್ ಬಿಡುಗಡೆಯಾಗುತ್ತಿದ್ದಂತೆ ಪುನಃ ಜೈಲು ಸೇರಲು ರಾಯಪುರದ ರೈಲ್ವೆ ಸ್ಟೇಷನಿನಲ್ಲಿ ಬೇಕೆಂದೇ ಒಂದು ಪುಟ್ಟ ಕಳ್ಳತನ ಮಾಡಿ ಸಿಕ್ಕಿಬಿದ್ದ. ಆದರೆ ಆತನ ತಂತ್ರ ನಿಷ್ಫಲವಾಯಿತು. ವಕೀಲನೊಬ್ಬ ಆತನಿಗೆ ಜಾಮೀನಿನ ಮೇಲೆ ಬಿಡು ಗಡೆಗೆ ಪ್ರಾರ್ಥಿಸಿದ. ಇದರಿಂದ ಕೋಪಗೊಂಡ ಭುಜಬಲ್ ತನ್ನನ್ನು ಜೈಲಿಗೆ ಕಳಿಸದಿದ್ದರೆ ಧರಣಿ ಸತ್ಯಾಗ್ರಹ ಹೂಡುವುದಾಗಿ ಬೆದರಿಸಿದ.

ವಿ.ಸೂ : ಈ ಶೀರ್ಷಿಕೆಗಾಗಿ ಪುನಃ ಹೊಸದಾಗಿ ಲೇಖನ ಕಳಿಸಬಾರದಾಗಿ ವಿನಂತಿ. ಕಳಿಸಿದರೂ ಗಮನಿಸ ಲಾಗುವುದಿಲ್ಲವೆಂದು ಸೂಚಿಸಬಯಸುತ್ತೇವೆ.

ಶಾಲೆಯಿಂದ ಬರುವ ಮಕ್ಕಳಿಗಾಗಿ ತಿಂಡಿಯ ತಯಾರಿಯಲ್ಲಿದ್ದ ಶಾಲಿನಿಗೆ ಕರೆಗಂಟೆಯ ಸದ್ದು ಕೇಳಿದಾಗ ತುಸು ಆಶ್ಚರ್ಯವೇ ಆಯ್ತು. ಈ ಅವೇಳೆಯಲ್ಲಿ ಬಂದವರಾರಿಬಹುದೆಂದು ಯೋಚಿಸುತ್ತ ಬಂದು ಬಾಗಿಲು ತೆರೆದವಳಿಗೆ ಮುಂದೆ ನಿಂತ ಗೆಳತಿ ವೇದಳನ್ನು ಕಂಡು ಸಂತೋಷವಾಯಿತು.

'ಒಳಗೆ ಬಾ ವೇದ' ಎಂದು ಅವಳನ್ನು ಸಂಭ್ರಮದಿಂದಲೇ ಬರಮಾಡಿಕೊಂಡಳು. ಬೆವರೊರೆಸಿಕೊಳ್ಳುತ್ತ ಕುಳಿತ ಗೆಳತಿಯನ್ನು ನೋಡಿ ಫ್ಯಾನ್ ಹಾಕಿದಳು. ಸುಧಾರಿಸಿಕೊಳ್ಳುವವಳಂತೆ ವೇದ ಎರಡು ಕ್ಷಣ ಫ್ಯಾನ್ ಗಾಳಿಗೆ ಮೈಯೊಡ್ಡಿ ಹಾಯಾಗಿ ಕುಳಿತಳು. ಅವಳ ಪಕ್ಕದಲ್ಲಿಯೇ ಕುಳಿತ ಶಾಲಿನಿ ಆತ್ಮೀಯವಾಗಿ ಕೇಳಿದಳು,

'ಏನು ವೇದ ಇಷ್ಟು ಅಪರೂಪವಾಗಿ ಬಂದೆಯಲ್ಲ. ಏನು ಸಮಾಚಾರ ? ನನಗಂತೂ ಮಕ್ಕಳು, ಮನೆ ಕೆಲಸದಲ್ಲಿ ಬಿಡುವೇ ಸಿಗುವುದಿಲ್ಲ. ನೀನಾದರೂ ಆಗಾಗ ಬರುತ್ತಿರಬಾರದೇ ?'

ಪ್ರತ್ಯಕ್ಷವಾಗಿ ಅಲ್ಲವಾದರೂ ಪರೋಕ್ಷವಾಗಿ 'ನಿನಗೇನು ಮಕ್ಕಳೇ, ಮರಿಯೇ ?' ಎಂಬ ಭಾವವನ್ನು ಗೆಳತಿಯ ಮಾತಿನಲ್ಲಿ ಗುರುತಿಸಿದ ವೇದಳಿಗೆ ಮನದಲ್ಲಿ ಅಸಮಾಧಾನವುಂಟಾದರೂ ತಾನೀಗ ಕೋಪಗೊಳ್ಳಬಾರದೆಂದು ತರ್ಕಿಸಿ,

'ಹಾಗೇನಿಲ್ಲ ಶಾಲಿನಿ. ಇತ್ತೀಚೆಗೆ ನನ್ನ ಮನಸ್ಸೇ ಸರಿಯಾಗಿಲ್ಲ. ಯಾವುದರಲ್ಲಿಯೂ ಆಸಕ್ತಿಯೇ ಇಲ್ಲದಂತಾಗಿದೆ. ಬದುಕಿಗೆ ಅರ್ಥವೇ ಇಲ್ಲವಾದಂತೆನಿಸಿದೆ. ನಾವಿಬ್ಬರೂ ದುಡಿಯುತ್ತೇವೆ. ಆಸ್ತಿ ಇದೆ ಎಲ್ಲಾ ಇದೆ. ಆದರೆ ಅದಕ್ಕೆ ವಾರಸುದಾರರು ಇಲ್ಲವಲ್ಲ ಎಂಬುದೇ ನಮಗೆ ಚಿಂತೆಯ ಕಾರಣವಾಗಿದೆ' ಎಂದಳು.

'ಯಾಕಿಷ್ಟು ಯೋಚನೆ ಮಾಡ್ತೀರಾ ? ಈಗ ವಿಜ್ಞಾನ ತುಂಬಾ ಮುಂದುವರಿದಿದೆ. ಅಲ್ಲದೆ ನಿಮಗೇನು ಅಂತಹ ವಯಸ್ಸಾಗಿರುವುದು ?. ಮುಂದೆ ಮಕ್ಕಳಾಗಲೂ ಬಹುದು.'

'ಅದು ಸಾಧ್ಯವಿಲ್ಲ. ನಾವು ಪೂರ್ಣವಾಗಿ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಂಡಿದ್ದೇವೆ. ದೋಷವಿರುವುದು ನನ್ನಲ್ಲಿಯೇ. ನಾನು ತಾಯಿಯಾಗಲೂ ಸಾಧ್ಯವಿಲ್ಲವೆಂದು ಡಾಕ್ಟರ್ ಹೇಳಿದ್ದಾರೆ. ನನ್ನ ದೆಸೆಯಿಂದ ಒಬ್ಬರೇ ಮಗನಾದ ಇವರ ವಂಶವೃಕ್ಷ ಇಲ್ಲಿಗೇ ನಿಲ್ಲುವುದು ನನಗಿಷ್ಟವಿಲ್ಲ. ಅವರೇನೋ ನನ್ನ ಸಮಾಧಾನಕ್ಕೆ ಮಕ್ಕಳಾಗದಿದ್ದರೂ ಪರವಾಗಿಲ್ಲ ಎನ್ನುತ್ತಾರೆ. ಆದರೆ ಮದುವೆಯಾದ ಈ ಹತ್ತು ವರ್ಷಗಳಲ್ಲಿ ಅವರ ಮನಸ್ಸೇನೆಂಬುದು ನನಗೆ ತಿಳಿದಿದೆ. ಆದ್ದರಿಂದ ನಾನು ಅವರ ಪ್ರೀತಿ, ಪ್ರೇಮದ ದುರುಪಯೋಗ ಮಾಡಿಕೊಳ್ಳದೇ ಅವರ ವಂಶ ಮುಂದುವರಿಯುವಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ.'

ಗೆಳತಿಯ ಅಳಲನ್ನು ಕಂಡು ಕರಗಿದ ಶಾಲಿನಿ ಕೇಳಿದಳು.

'ಈಗೇನು ಮಾಡಬೇಕೆಂದಿರುವೆ ವೇದ ?'

'ನಾನು ನನ್ನ ಗಂಡನಿಗೆ ಇನ್ನೊಂದು ಮದುವೆ ಮಾಡಬೇಕೆಂದಿದ್ದೇನೆ.'

'ಅದಕ್ಕೆ ಮೊದಲು ನಿಮ್ಮ ಡೈವೋರ್ಸ್ ಆಗಬೇಕಲ್ಲವೇ. ಅದೆಲ್ಲ ಅಷ್ಟು ಸುಲಭವಾಗಿ ಹಾಗೂ ಆತುರದಲ್ಲಿ ಆಗುತ್ತದೆಯೇ.'




"ಶಾಲನಿ, ಇಲ್ಲಿ ನಮ್ಮ ಡೈವೋರ್ಸ್‌ನ ಪ್ರಶ್ನೆಯೇ ಬರುವುದಿಲ್ಲ. ಅವರಿಗೆ ಎರಡನೆಯ ಹೆಂಡತಿಯಾಗಿ ಬರುವವಳೊಂದಿಗೆ ನಾನು ಹೊಂದಿಕೊಂಡು ಹೋಗುತ್ತೇನೆ. ಸುರೇಶ್‌ರನ್ನು ನಾನು ಕಷ್ಟಪಟ್ಟು ಒಪ್ಪಿಸಿದ್ದೇನೆ. ಈಗ ನಮಗೆ ಬೇಕಾಗಿರುವುದು ಒಂದು ಒಳ್ಳೆಯ ಹುಡುಗಿ. ಅವಳು ಓದಿರದಿದ್ದರೂ, ಬಡವರಿದ್ದರೂ ಪರವಾಗಿಲ್ಲ. ಈ ವಿಷಯದಲ್ಲಿ ನಿನ್ನ ಸಹಾಯ ಕೇಳಲು ನಿನ್ನ ಬಳಿಗೆ ಬಂದೆ. ನಿನಗೆ, ನಿಮ್ಮ ಯಜಮಾನರಿಗೆ ತುಂಬಾ ಜನರ ಪರಿಚಯವಿದೆಯಲ್ಲವೇ ? ನಮಗೆ ಹಳ್ಳಿಯ ಹುಡುಗಿಯಾದರೂ ಪರವಾಗಿಲ್ಲ. ಮದುವೆ ಸರಳವಾಗಿ ದೇವಸ್ಥಾನದಲ್ಲಿ ಆದರೆ ಸಾಕು. ಎಲ್ಲಾ ಖರ್ಚನ್ನೂ ನಾವೇ ವಹಿಸಿಕೊಳ್ಳುತ್ತೇವೆ."

ವೇದಳ ಮಾತು ಕೇಳಿದ ಶಾಲಿನಿ ಒಂದು ಕ್ಷಣ ಮಾತು ಹೊರಡದೇ ಕುಳಿತಳು. ಇಂತಹ ಹೆಂಗಸರೂ ಇದ್ದಾರೆಯೇ ಎಂದು ಅವಳಿಗೆ ಆಶ್ಚರ್ಯವಾಯ್ತು. ಗಂಡನಿಗಾಗಿ ತನ್ನ ಸುಖವನ್ನೂ ಲೆಕ್ಕಿಸದ ಸ್ನೇಹಿತೆಯ ಬಗೆಗೆ ಅಭಿಮಾನವೆನಿಸಿತು.

"ಅಲ್ಲ ವೇದ, ಯಾಕೆ ಸುಮ್ಮನೇ ಸರಾಗವಾಗಿ ನಡೆಯುತ್ತಿರುವ ಬದುಕಿನಲ್ಲಿ ಇಲ್ಲದ ಸಮಸ್ಯೆಗಳನ್ನು ಸೃಷ್ಟಿಸಿಕೊಳ್ಳುತ್ತೀಯ. ಅಷ್ಟು ಬೇಕಾದರೆ, ಯಾವುದಾದರೊಂದು ಅನಾಥ ಮಗವನ್ನು ದತ್ತು ತೆಗೆದುಕೊಂಡರಾಯ್ತು." ಶಾಲಿನಿ ತನ್ನ ಅಭಿಪ್ರಾಯ ತಿಳಿಸಿದಳು.

'ವಿಷಯ ಹಾಗಿಲ್ಲ ಶಾಲಿನಿ, ನಮಗೆ ನಮ್ಮದೇ ಆದ ಮಗು ಬೇಕೆಂಬ ಆಸೆ ಇದೆ. ಕುಲ ಗೋತ್ರ ತಿಳಿಯದ ಯಾವುದೋ ಮಗು ನಮ್ಮ ವಂಶ ಮುಂದುವರೆಸಿಕೊಂಡು ಹೋಗುವುದು ನಮಗೆ ಬೇಕಿಲ್ಲ. ದಯವಿಟ್ಟು ಈ ವಿಷಯದಲ್ಲಿ ಸಹಾಯ ಮಾಡು.'

ವೇದಳ ಮಾತಿನಲ್ಲೂ ಒಂದು ರೀತಿಯ ಅರ್ಥ

ಇದೆ ಎನಿಸಿತು ಶಾಲಿನಿಗೆ. ಅವಳು ಯೋಚನೆಗೊಳಗಾದಳು. ವಾಸ್ತವಕ್ಕೂ, ಭಾವನೆಗಳಿಗೂ ಅವರದೇ ಆದ ಅರ್ಥ, ಸ್ಥಾನ ಇವೆ. ಇವರು ವಾಸ್ತವವನ್ನು ಎದುರಿಸಲಾರದಷ್ಟು ಭಾವ ಜೀವಿಗಳು. ಇವರ ಸಂವೇದನೆಗೂ ಬೆಲೆ ಕೊಡಬೇಕು ಎಂದುಕೊಂಡಳು. ನಂತರ ಪ್ರಕಟವಾಗಿ ಹೇಳಿದಳು.

'ರಾತ್ರಿ ಮನೋಹರ ಬರಲಿ. ಅವರಿಗೂ ವಿಷಯ ತಿಳಿಸುತ್ತೇನೆ. ನಾನೂ ಕೆಲವರನ್ನು ವಿಚಾರಿಸುತ್ತೇನೆ.'

'ಸದ್ಯ ಇದೊಂದು ಉಪಕಾರ ಮಾಡು, ಜೀವನ ಪೂರ್ತಿ ನಿನಗೆ ಋಣಿಯಾಗಿರುತ್ತೇವೆ. ಇನ್ನೂ ಕೆಲವರಿಗೆ ವಿಷಯ ತಿಳಿಸಿದ್ದೇವೆ. ಆದಷ್ಟು ಬೇಗ ಮದುವೆ ಮುಗಿಯಬೇಕೆಂಬುದೇ ನಮ್ಮ ಇಚ್ಛೆ.'

'ನೀನು ಯೋಚನೆ ಮಾಡಬೇಡ. ನಮ್ಮ ಪ್ರಯತ್ನ ನಾವು ಪ್ರಾಮಾಣಿಕವಾಗಿ ಮಾಡುತ್ತೇವೆ.'

'ಸರಿ ಹಾಗಿದ್ದರೆ ನಾನು ಬರುತ್ತೇನೆ. ವಿಷಯ ತಿಳಿಸಿ ನನ್ನ ಮನಸ್ಸು ಹಗುರ ಮಾಡಿಕೊಳ್ಳೋಣವೆಂದು ನಿನ್ನಲ್ಲಿಗೆ ಬಂದೆ. ನಿನ್ನ ಮಾತು ಕೇಳಿ ನನ್ನ ಕೆಲಸವಾಗುತ್ತದೆಯೆಂಬ ನಂಬಿಕೆ ನನಗೆ ಬರುತ್ತಿದೆ' ಎಂದ ವೇದ ಹೊರಡಲು ಅನುವಾದಳು.

'ಅರೆ ನಿಲ್ಲು. ಹಾಗೇ ಹೇಗೆ ಹೋಗುತ್ತೀಯಾ? ಇಷ್ಟು ಅಪರೂಪವಾಗಿ ಬಂದಿದ್ದೀಯಾ. ಸ್ವಲ್ಪ ತಿಂಡಿ ತಿಂದುಕೊಂಡು ಹೋಗುವೆಯಂತೆ' ಎಂದ ಶಾಲಿನಿ ಗೆಳತಿಯನ್ನು ಬಲವಂತವಾಗಿ ಸೋಫಾದಲ್ಲಿ ಕೂಡಿಸಿ ಅಡಿಗೆ ಮನೆಗೆ ಹೋಗಿ, ಅವಲಕ್ಕಿ, ರವೆ ಉಂಡೆಯ ತಟ್ಟೆಯೊಂದಿಗೆ ಬಂದಳು. ಶಾಲಿನಿಯ ಬಲವಂತಕ್ಕೆ ತಿಂಡಿ, ಕಾಫಿ ಮುಗಿಸಿದ ವೇದ ಹೋಗುವ ಮುನ್ನ ಶಾಲಿನಿಗೆ ಹುಡುಗಿಯ ಬಗ್ಗೆ ಮತ್ತೊಮ್ಮೆ ಜ್ಞಾಪಿಸಲು ಮರೆಯಲಿಲ್ಲ. ಆದರ ಅವಶ್ಯಕತೆಯಿಲ್ಲವೆಂಬಂತೆ ಹಾರ್ದಿಕವಾಗಿ ನಕ್ಕು ಗೆಳತಿಯನ್ನು ಬೀಳ್ಕೊಟ್ಟಳು ಶಾಲಿನಿ.

ರಾತ್ರಿ ಅಡಿಗೆ ಮನೆಯ ಕೆಲಸ ಮುಗಿಸಿ ಮಕ್ಕಳಿಬ್ಬರನ್ನೂ ಅವರ ಕೋಣೆಯಲ್ಲಿ ಮಲಗಿಸಿ ಗಂಡನ ಬಳಿ ಶಾಲಿನಿ ಬಂದಾಗ ಮನೋಹರ ಯಾವುದೋ ಮ್ಯಾಗಜೀನನ್ನು ಕೈಲಿ ಹಿಡಿದು ಓದುತ್ತಾ ಕುಳಿತಿದ್ದ. ಕೈಯಲ್ಲಿದ್ದ ಪುಸ್ತಕವನ್ನು ತೆಗೆದು ಪಕ್ಕಕಿಟ್ಟ ಶಾಲಿನಿ,

"ನಿಮ್ಮೊಂದಿಗೆ ಒಂದು ವಿಷಯದ ಬಗ್ಗೆ ಮಾತನಾಡಬೇಕು' ಎಂದಳು.

"ಏನಂತಹ ಗಹನವಾದ ವಿಷಯ?" ಎಂದ ಮನೋಹರ ಆಶ್ಚರ್ಯದಿಂದ.

"ವಿಷಯವೇ ಹಾಗಿದೆ, ಕೇಳಿದರೆ ನಿಮಗೂ ಆಶ್ಚರ್ಯವಾಗಬಹುದು."

'ಪೀಠಿಕೆ ಸಾಕು. ವಿಷಯ ಏನು ಅಂತ ಬೇಗ ಬೇಗ ಹೇಳಬಾರದೇ?' ಕುತೂಹಲ ತಡೆಯಲಾರದೇ ಕೇಳಿದ ಮನೋಹರ.

ಗಂಡನಿಗೆ ಎಲೆ ಅಡಿಕೆ ಮಡಿಸಿಕೊಡುತ್ತ ಶಾಲಿನಿ ಹೇಳಿದಳು.

'ಸಂಜೆ ವೇದ ಬಂದಿದ್ದಳು. ಅವಳು ಮಗುವಿಗಾಗಿ ಗಂಡನಿಗೆ ಇನ್ನೊಂದು ಮದುವೆ ಮಾಡಲು ಹೊರಟಿದ್ದಾಳೆ.'

"ನಿನ್ನ ಸ್ನೇಹಿತೆಗೆ ಹುಚ್ಚೇನಾದರೂ ಹಿಡಿದಿದೆಯಾ, ತನ್ನ ಅವಿವೇಕತನದಿಂದ ಸುಂದರವಾಗಿ ನಡೆಯುತ್ತಿರುವ ಬದುಕನ್ನು ಹಾಳು ಮಾಡಿಕೊಳ್ಳುವ ಯೋಚನೆಯಾದರೂ ಅವರಿಗೆ ಹೇಗೆ ಬಂದಿತು? ಅವರ ಗಂಡ ಸುರೇಶ್‌ನ ಅಭಿಪ್ರಾಯವೂ ಅದೇನಾ ಹೇಗೆ?"

"ಇವಳೇ ಅವರನ್ನೂ ಕಷ್ಟಪಟ್ಟು ಒಪ್ಪಿಸಿರುವುದಾಗಿ ಹೇಳಿದಳು."

"ಅವರಿಗೆ ಇನ್ನೊಂದು ಮದುವೆ ಮಾಡಿಸಿ ಇವರೆಲ್ಲಿ ಹೋಗುತ್ತಾರಂತೆ? ಸನ್ಯಾಸಿನಿಯಾಗಿ ಮಠ ಸೇರಿಕೊಳ್ಳುತ್ತಾರಂತೇನು?" ಎಂದ ಮನೋಹರ ಕುಚೋದ್ಯದಿಂದ.

"ಅದೆಲ್ಲಾ ಏನಿಲ್ಲಾರಿ. ಇಬ್ಬರೂ ಹೊಂದಿಕೊಂಡು ಒಟ್ಟಿಗೇ ಇರುತ್ತಾರಂತೆ" ಎಂದಳು ಶಾಲಿನಿ ರಾಗವಾಗಿ.

'ಹ್ಞಾಂ' ಎಂದ ಮನೋಹರ ಸರಿಯಾಗಿ ಎದ್ದು ಕುಳಿತ.

"ಅದೇನೋ ಸರಿ. ಆದರೆ ಅವನಿಗೆ ಹೆಣ್ಣು ಕೊಡಲು ಯಾರು ಕಾದು ಕುಳಿತುಕೊಂಡಿದ್ದಾರಂತೆ? ಅವರಿಗೂ ವಯಸ್ಸು ನಲವತ್ತರ ಹತ್ತಿರವಾಗಿರಬೇಕು."

"ಅವಳು ಅದಕ್ಕೇ ನನ್ನ ಬಳಿಗೆ ಬಂದಿದ್ದು. ಯಾವುದಾದರೂ ಮದುವೆಗಿರುವ ಹೆಣ್ಣು ಅವರಿಗೆ ಬೇಕಂತೆ. ಅವಳು ಓದದಿದ್ದರೂ, ಬಡವಳಾಗಿದ್ದರೂ ಪರವಾಗಿಲ್ಲವಂತೆ. ಮದುವೆಯನ್ನು ಸರಳವಾಗಿ ಯಾವುದಾದರೂ ದೇವಸ್ಥಾನದಲ್ಲಿ ಮಾಡಿಕೊಟ್ಟರೂ ಸಾಕಂತೆ. ಎಲ್ಲಾ ಖರ್ಚನ್ನೂ ಅವರೇ ವಹಿಸಿಕೊಳ್ಳಲು ತಯಾರಿದ್ದಾರಂತೆ. ನೋಡಿ ನಿಮಗೆ ಪರಿಚಯದವರು ಯಾರಾದರೂ ವಿಚಾರಿಸಿ."

ಮಡದಿಯ ಮಾತುಗಳನ್ನು ಕೇಳಿದ ಮನೋಹರ ಸ್ವಲ್ಪ ಹೊತ್ತು ಯೋಚಿಸಿ ಹೇಳಿದ.

"ಹಾಗೆ ನೋಡಿದರೆ ನಾವು ಅವರಿಗೆ ಸಹಾಯ ಮಾಡಬಹುದು ಎನಿಸುತ್ತದೆ. ನಮ್ಮ ಹಳ್ಳಿಯಲ್ಲಿ ನಮ್ಮ ಪರಿಚಯದವರೊಬ್ಬರಿದ್ದಾರೆ. ಅವರ ಹೆಸರು ಶಾಮಣ್ಣ ಅಂತ. ಅವರು ತುಂಬಾ ಬಡವರು, ಅವರಿಗೆ ಸ್ವಲ್ಪ ಜಮೀನಿದೆ ವ್ಯವಸಾಯ ಮಾಡಿಕೊಂಡಿದ್ದಾರೆ. ಅವರಿಗೆ ಮೂರು ಮಕ್ಕಳಿದ್ದಾರೆ. ಮದುವೆಗಿರುವ ತಂಗಿಯೊಬ್ಬಳು ಮನೆಯಲ್ಲಿದ್ದಾಳೆ. ಅವಳ ಮದುವೆ ಹೇಗೆ ಮಾಡುವುದೆಂಬುದೇ ಅವರಿಗೆ ಹಗಲಿರುಳೂ ಚಿಂತೆಯಾಗಿದೆ. ಮೊನ್ನೆ ಯಾವುದೋ ಜಮೀನಿನ ವಿಷಯವಾಗಿ ನಮ್ಮ ಆಫೀಸಿಗೆ ಬಂದಾಗ ಇದೇ ವಿಷಯವಾಗಿ ಪೇಚಾಡಿಕೊಂಡರು."

"ಹಾಗಿದ್ದ ಮೇಲೆ ನೀವು ಅವರನ್ನು ವಿಚಾರಿಸಿ, ಹುಡುಗಿಯನ್ನು ಕರೆದುಕೊಂಡು ಬಂದು ನಮ್ಮ ಮನೆಯಲ್ಲಿಯೇ ತೋರಿಸೋಣ" ಎಂದಳು ಶಾಲಿನಿ ಉತ್ಸಾಹದಿಂದ. ಅವಳಿಗೆ ಹೇಗಾದರೂ ಮಾಡಿ ವೇದಳಿಗೆ ಈ ವಿಷಯದಲ್ಲಿ ಸಹಾಯ ಮಾಡಬೇಕು ಎನಿಸಿತ್ತು.

"ಸರಿ ಹಾಗೆಯೇ ಮಾಡೋಣ." ಎಂದ ಮನೋಹರ. ನಿಶ್ಚಯಿಸಿದಂತೆ ಒಂದು ದಿನ ಶಾಮಣ್ಣನವರ ತಂಗಿ ತಾರಾಳನ್ನು ಶಾಲಿನಿಯವರ ಮನೆಗೆ ಕರೆತಂದು ವೇದ ಹಾಗೂ ಅವಳ ಗಂಡ ಸುರೇಶನಿಗೆ ತೋರಿಸುವ ಶಾಸ್ತ್ರವಾಯ್ತು. ಇಪ್ಪತ್ತೂರು ವರ್ಷದ ತಾರಾ ಬಡತನದಲ್ಲಿ ಬೆಳೆದಿದ್ದಳಾದರೂ ಸಹಜ ಸುಂದರಿಯಾಗಿದ್ದಳು. ಸಂತೋಷದಿಂದ ಈ ಮದುವೆ ನಿಶ್ಚಯವಾಯ್ತು. ದೂರದ ಒಂದು ಹಳ್ಳಿಯ ದೇವಸ್ಥಾನದಲ್ಲಿ ತಾರಾ, ಸುರೇಶರ ಮದುವೆ ಸರಳವಾಗಿ ನಡೆಯಿತು. ಹುಡುಗಿಯ ಕಡೆಯವರಾಗಿ ಅವಳ ಅಣ್ಣ ಅತ್ತಿಗೆ ಹಾಗೂ ಹುಡುಗನ ಕಡೆಯವರಾಗಿ ಶಾಲಿನಿ ಮತ್ತು ಮನೋಹರ ಭಾಗವಹಿಸಿದ್ದರು. ಅಲ್ಲಿಂದಲೇ ತಾರಾಳನ್ನು ತಮ್ಮೊಂದಿಗೆ ಬೆಂಗಳೂರಿಗೆ ಕರೆತಂದರು ವೇದ ಮತ್ತು ಸುರೇಶ. ತಾರಾಳಿಗೂ ಬಡತನದಿಂದ ಬಿಡುಗಡೆ ದೊರೆತುದಕ್ಕೆ ಸಂತೋಷವಾಗಿತ್ತು. ಹಳ್ಳಿಯ ವಾತಾವರಣದಲ್ಲಿ ಬೆಳೆದ ತಾರಾ ತುಂಬಾ ಸರಳ ಮನಸ್ಸಿನವಳಾಗಿದ್ದು ತನ್ನ ಮದುವೆಯ ಬಗ್ಗೆ, ಎರಡನೆಯ ಹೆಂಡತಿಯಾದುದಕ್ಕೆ ಏನೂ ಗಂಭೀರವಾಗಿ ತೆಗೆದುಕೊಂಡಂತಿರಲಿಲ್ಲ. ತನ್ನ ಮದುವೆಯೇ ಆಗುವುದಿಲ್ಲವೆಂದುಕೊಂಡಿದ್ದ ಅವಳಿಗೆ ಮದುವೆಯಾದದ್ದೇ ದೊಡ್ಡ ಭಾಗ್ಯ ಸಿಕ್ಕಿದಂತಾಗಿತ್ತು.

ತಾರಾ ಮತ್ತು ಸುರೇಶರ ವೈವಾಹಿಕ ಜೀವನ ಎರಡು ತಿಂಗಳು ಸುಂದರವಾಗಿಯೇ ಕಳೆಯಿತು. ವೇದ, ಸುರೇಶ್ ಮತ್ತು ತಾರಾ ಏಕಾಂತಕ್ಕೆ ಅಡ್ಡಿ ಬರುತ್ತಿರಲಿಲ್ಲ. ತಾನಾಗಿಯೇ ತಮ್ಮ ಮಲಗುವ ಕೋಣೆಯಿಂದ ಬೇರೊಂದು ಕೋಣೆಗೆ ತನ್ನ ವಾಸ್ತವ್ಯವನ್ನು ಬದಲಾಯಿಸಿಕೊಂಡಿದ್ದಳು. ಹೆಣ್ಣಿಗೆ ಸಹಜವಾದ ಮತ್ಸರವನ್ನೂ ಬಹು ಎಚ್ಚರಿಕೆಯಿಂದ ನಿಗ್ರಹಿಸಿಕೊಂಡಿದ್ದಳು. ಅದಕ್ಕಾಗಿ ಅವಳು ಪಟ್ಟ ಮಾನಸಿಕ ವ್ಯಥೆ ಅಷ್ಟಿಷ್ಟಲ್ಲ. ವೇದ ಮತ್ತು ಸುರೇಶ್ ಕೆಲಸಕ್ಕೆ ಹೋದ ನಂತರ ಮನೆಗೆಲ್ಲಾ ತಾರಾಳೇ ರಾಣಿಯಂತಿದ್ದಳು. ತನ್ನ ಹಿಂದಿನ ಬದುಕಿಗೂ, ಈಗಿನ ಬದುಕಿಗೂ ಹೋಲಿಸಿಕೊಂಡು ಸ್ವರ್ಗಸುಖವೆಂದರೆ ಇದೇ ಇರಬೇಕೆಂದುಕೊಂಡಳು. ಮದುವೆಯಾಗಿ ಮೂರು ತಿಂಗಳಾಗುತ್ತಿದ್ದಂತೆಯೇ ತಾರಾ ಗರ್ಭವತಿಯಾದಳು. ವೇದ, ಸುರೇಶ್‌ರ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ದೊಡ್ಡ ಡಾಕ್ಟರರೊಬ್ಬರಲ್ಲಿ ಅವಳನ್ನು ಪರೀಕ್ಷಿಸಿ ಗರ್ಭವತಿಯೆಂಬುದನ್ನು ಖಚಿತ ಪಡಿಸಿಕೊಂಡರು.

## ಬೇಕು ಛಾತಿ

ಪಟ್ಟಣದೊಳಗೊಂದು ಮನೆಯ ಮಾಡಿ
ಪಡ್ಡೆ ಹುಡುಗರಿಗಂಜಿದೊಡೆಂತಪ್ಪಾ?
ಚಿತ್ರಮಂದಿರಗಳ ನಡುವೆ ಶಾಲೆಯ ಮಾಡಿ
ಮಕ್ಕಳ ಹಿಡಿದಿಡುವೆನೆಂಬರೆಂತಪ್ಪಾ?
ಚರಂಡಿಗಳ ಮೇಲೆ ಮನೆಯ ಕಟ್ಟಿ
ಸೊಳ್ಳೆಗೆ ಅಂಜಿದೊಡೆಂತಪ್ಪಾ?
ಊರ ತುಂಬ ಹಂದಿಗಳ ಬೆಳೆಸಿ
ಬೇನೆಗೆ ಅಂಜಿದೊಡೆಂತಪ್ಪಾ?
ಮಹಡಿಗೂಡಿನಲ್ಲಿ ಬಾಡಿಗೆ ಮಾಡಿ
ಜಗಳಕ್ಕಂಜಿದೊಡೆಂತಪ್ಪಾ?
ಬಸ್ಸು, ರಿಕ್ಷಾಗಳಲಿ ಕುರಿಯೊಲು ತುಂಬಿ
ಅಪಘಾತಕ್ಕಂಜಿದೊಡೆಂತಪ್ಪಾ?
ಮುಂಜಿ, ಮದುವೆ, ಸಭೆಗಳ ಮಾಡಿ
ಮೈಕಿಗೆ ಅಂಜಿದೊಡೆಂತಪ್ಪಾ?
ಇದು ನೋಡು ಪಟ್ಟಣದ ಸೊಬಗಿನ ಸ್ಥಿತಿ
ಇಲ್ಲಿದ್ದೂ ಬದುಕಿ ಬಾಳುವೆನೆಂಬವಗೆ
ಬೇಕು ಛಾತಿ!

—ಶಾಂತಾ ನಾಡಿಗೀರ, ಹುಬ್ಬಳ್ಳಿ
(ಅಕ್ಕನ ಕ್ಷಮೆಕೋರಿ)

## ನಾಟ್ಯ ಕಲಾರಾಣಿ
## ಶ್ರೀಮತಿ ಉಷಾ ರವೀಂದ್ರನಾಥ್

ಕರ್ನಾಟಕ ರಾಜ್ಯದಲ್ಲಿ ಶ್ರೀಮತಿ ಉಷಾ ಸುಪ್ರಸಿದ್ಧ ನೃತ್ಯಗಾತಿ. ಸುಮಾರು ಐದು ವರ್ಷದಲ್ಲಿ ಇದ್ದಾಗಲೇ ಶ್ರೀಮಾನ್ ನಾಟ್ಯಾಚಾರ್ಯ ಶ್ರೀ ಸುಬ್ರಮಣ್ಯ ಕೌಶಿಕ್ ರವರ ಬಳಿ ನಾಟ್ಯವನ್ನು ಕಲಿಯಲು ಆರಂಭಿಸಿದರು. ಆ ಬಳಿಕ ಮದ್ರಾಸ್ ಕಲಾಕ್ಷೇತ್ರದಲ್ಲಿ ಶ್ರೀ ಕೆ. ಲಕ್ಷ್ಮಣ್ ರವರ ಬಳಿ ಬಹಳ ವರ್ಷಗಳ ಕಾಲ ನಾಟ್ಯ ಶಿಕ್ಷಣವನ್ನು ಪಡೆದರು. ಶ್ರೀಮತಿ "ವಸಂತ ವೇದಂ" ಎಂಬುವರ ನಾಟ್ಯವನ್ನು ನೋಡಿ ಅವರ ಕಲಾ ನೈಪುಣ್ಯತೆ, ಸಂಪೂರ್ಣ ವ್ಯಕ್ತಿತ್ವವನ್ನು ಹಾಗೂ ಅವರ ನಾಟ್ಯ ಪ್ರಾವೀಣ್ಯತೆಯನ್ನು ಬಹಳ ಮೆಚ್ಚಿಕೊಂಡಿದ್ದಾರೆ ಉಷಾ. ಶ್ರೀಮತಿ ಉಷಾ ಸಂಸ್ಕೃತದ "ಕೋವಿದ ಪರೀಕ್ಷೆ" ಯಲ್ಲಿ ಪ್ರಥಮ ಸ್ಥಾನವನ್ನು ಗಳಿಸಿದ್ದಾರೆ. ಉಷಾ ರವೀಂದ್ರನಾಥ ಬಹಳ ಕಡೆಗಳಲ್ಲಿ ತಮ್ಮ ನಾಟ್ಯ ಪ್ರದರ್ಶನವನ್ನು ಪ್ರದರ್ಶಿಸಿದ್ದಾರೆ. ಹಾಗೂ NDDB ಯ ಸಮಾರಂಭದಲ್ಲಿ 3 ಗಂಟೆಗಳ ಕಾಲ ನಾಟ್ಯ ಪ್ರದರ್ಶನವನ್ನು ನೀಡಿ ಜನರ ಮೆಚ್ಚಿಗೆಯನ್ನು ಗಳಿಸಿದ್ದಾರೆ. ಈ ಶುಭ ಸಮಾರಂಭಕ್ಕೆ ಶ್ರೀ ವಿ. ವಿ. ಗಿರಿ (ರಾಷ್ಟ್ರಪತಿ) ಅಧ್ಯಕ್ಷತೆಯನ್ನು ವಹಿಸಿದ್ದರು. "ತಿರುಮಲ ತಿರುಪತಿ ದೇವಾಲಯದಲ್ಲಿ ಪ್ರತಿ ವರುಷ ನಡೆಯುವ ಬ್ರಹ್ಮೋತ್ಸವದಲ್ಲಿ ನಾಟ್ಯ ಪ್ರದರ್ಶನವನ್ನು ಮಾಡಿದ್ದಾರೆ. ಹಾಗೆಯೇ 3 ವರ್ಷಗಳ ಕಾಲ ಅಣ್ಣಮಾಚಾರ್ಯ ಉತ್ಸವದಲ್ಲಿಯೂ ಭಾಗವಹಿಸಿದ್ದರು. ನೃತ್ಯರೂಪದಲ್ಲಿ "ಕೋರಿಯೋಗ್ರಫಿ" ಮಾಡಿದ್ದಾರೆ. ಉಷಾರವರ ನಡೆಸಿದ ನೃತ್ಯರೂಪಕದ ಬಗೆಗಳು ಅನೇಕ. "ದಶಾವತಾರಂ", "ಮೀನಾಕ್ಷಿ ಕಲ್ಯಾಣಂ", "ಕೃಷ್ಣಕರ್ಣಾಮೃತಂ", "ನಾರಾಯಣೀಯಂ" "ಮಂಗ ವಿಲಾಸಂ" ಇತ್ಯಾದಿ. ಮೈಸೂರಿನಲ್ಲಿ ನಡೆದ ದಸರಾ ಉತ್ಸವದಲ್ಲಿ ಹಾಗೂ "ಅಂತರ ರಾಷ್ಟ್ರೀಯ ಹಾಡುಗಾರಿಕೆಯ ಸಮ್ಮೇಳನದಲ್ಲಿ ಬಹಳಷ್ಟು ನೃತ್ಯ ಪ್ರದರ್ಶನವನ್ನು ಕೊಟ್ಟಿದ್ದಾರೆ. ಇವರ "ಮೋಹಿನಿ ಭಸ್ಮಾಸುರ", "ಶಾಂತಲ", "ಕಾಳಿದಾಸ ಕೃತಿದರ್ಶನಂ" ನೃತ್ಯ ರೂಪಕದಲ್ಲಿ ಶ್ರೀಮತಿ ಉಷಾ ಇವುಗಳಲ್ಲಿ ಮುಖ್ಯ ಪಾತ್ರಧಾರಿಣಿ.

ಶ್ರೀಮತಿ ಉಷಾರವರ ನೃತ್ಯ ಪ್ರದರ್ಶನದ ಕಲಾ ಚಾತುರ್ಯವನ್ನು, ಕಲಾ ನೈಪುಣ್ಯತೆಯಲ್ಲಿ ಕಂಡು ಕರ್ನಾಟಕದ ನೃತ್ಯ ಆಕಾಡೆಮಿಯು ಇವರನ್ನು ನಟುವಾಂಗ ಹಾಗೂ ಕೋರಿಯೋಗ್ರಫಿ ಶಿಕ್ಷಣಕ್ಕೆ ಆಯ್ಕೆ ಮಾಡಿದರು. ಅಹಮದಬಾದಿನಲ್ಲಿ ಶ್ರೀಮತಿ ಮೃಣಾಲಿನಿ ಸಾರಭಾಯಿ ನಡೆಸುತ್ತಿರುವ "ದರ್ಪಣ ಆರ್ಟ್ಸ್ ಆಕಾಡೆಮಿ" ಯಲ್ಲಿ ಇವರು ಕೂಚಿಪೂಡಿ ನೃತ್ಯವನ್ನು ಅಭ್ಯಾಸ ಮಾಡಿದರು. ಇವರ ಗುರುಗಳು ಸಿ. ಆರ್. ಆಚಾರ್ಯಲು, ಉಷಾರವರ ವಿದ್ಯಾಭ್ಯಾಸ ಬಿ. ಎಸ್ ಸಿ ಯವರೆಗೆ ನಡೆಯಿತು. ಅನಂತರ ಹೆಚ್. ಎ. ಎಲ್. ನಲ್ಲಿ 10 ವರ್ಷಗಳ ಕೆಲಸ ಮಾಡಿದ್ದಾರೆ.



ಉಷಾರವರ ತಾಯಿಯ ಕುಟುಂಬದವರೆಲ್ಲ ಸಂಗೀತ ವಿದ್ವಾಂಸರು. ಇವರ ಚಿಕ್ಕಮ್ಮ ಮೈಸೂರಿನಲ್ಲಿ ವೀಣಾ ಪ್ರೊಫೆಸರ್ ಆಗಿದ್ದಾರೆ. ಶ್ರೀಮತಿ ಉಷಾರವರಿಗೆ ನಾಲ್ಕು ಜನ ಅಕ್ಕತಂಗಿಯರು. ಈ ನಾಲ್ವರು ವೀಣೆ, ಸಂಗೀತ, ನೃತ್ಯ ಇವುಗಳಲ್ಲಿ ಪರಿಣತಿಯನ್ನು ಹೊಂದಿದವರು. ಇವರ ಕುಟುಂಬವೇ ನಾಟ್ಯ, ಸಂಗೀತ ಪ್ರೇಮಿಗಳು ಪ್ರಸ್ತುತದಲ್ಲಿ ಉಷಾ ಬಿಷಪ್ ಕಾಟನ್ ಬಾಲಕಿಯರ ಶಾಲೆಯಲ್ಲಿ ವಾರಕ್ಕೆ ಎರಡು ಸಾರಿ ನೃತ್ಯವನ್ನು ಮಕ್ಕಳಿಗೆ ಕಲಿಸುತ್ತಿದ್ದಾರೆ. ಇವರ ಸಹೋದರಿ ಕುಮಾರಿ ಶೈಲಶ್ರೀ (ಬಿ. ಎ.) ನೃತ್ಯದ ಜೊತೆಗೆ, ಕರಾಟೆಯಲ್ಲಿ (Brown Belt) ಪಡೆದಿದ್ದಾರೆ. ಹಾಗೂ ಉಷಾರವರ ಜೊತೆಗೂಡಿ ನೃತ್ಯ ಪ್ರದರ್ಶನವನ್ನು ನೀಡಿದ್ದಾರೆ.

**— ಸುಧಾಮಣಿ**

---

ಒಂದು ದಿನ ಎಂದಿನಂತೆ ತಾರಾ ರಾತ್ರಿ ಮಲಗುವ ಕೋಣೆಗೆ ಹೋಗುತ್ತಿದ್ದಾಗ ಅರ್ಧದಲ್ಲಿಯೇ ಅವಳನ್ನು ತಡೆದ ವೇದ, "ತಾರಾ ನೋಡು, ಇನ್ನು ಮೇಲೆ ನೀನು ತುಂಬಾ ಹುಷಾರಾಗಿರಬೇಕೆಂದು ವಿಶ್ರಾಂತಿ ತೆಗೆದುಕೊಳ್ಳಬೇಕೆಂದೂ ಡಾಕ್ಟರ್ ಹೇಳಿದ್ದಾರೆ. ಆದ್ದರಿಂದ ಇನ್ನು ಮೇಲೆ ಮೇಲೆ ಹತ್ತಿ, ಇಳಿದು ಆಯಾಸ ಮಾಡಿಕೊಳ್ಳಬೇಡ ಕೆಳಗಿನ ಕೋಣೆಯಲ್ಲಿಯೇ ಮಲಗು ಎಂದು ನಯವಾಗಿಯೇ ಹೇಳಿ ತಾರಾಳನ್ನು ಸುರೇಶ್‌ನಿಂದ ಬೇರ್ಪಡಿಸಿದಳು.

ಕಪಟವರಿಯದ ತಾರಾ, ಅಕ್ಕನಿಗೆ ತನ್ನ ಬಗೆ ಎಷ್ಟೊಂದು ಕಾಳಜಿ ಇದೆ ಎಂದು ತಿಳಿದು,

'ಸರಿಯಕ್ಕ ಹಾಗೇ ಮಾಡುತ್ತೇನೆ' ಎಂದಳು.

ಸುರೇಶನೂ ವೇದಳ ಮಾತನ್ನು ಅನುಮೋದಿಸಿದನು.

ನಂತರದ ದಿನಗಳಲ್ಲೂ ತಾರಾಳಿಗೆ ಗಂಡನ ಸಾನಿಧ್ಯವೊಂದನ್ನು ಬಿಟ್ಟು ಇನ್ನೆಲ್ಲಾ ಚೆನ್ನಾಗಿಯೇ ಇತ್ತು. ವೇದ, ಸುರೇಶ್ ಅವಳ ಊಟೋಪಚಾರದಲ್ಲಿ ಯಾವ ಕೊರತೆಯನ್ನು ಮಾಡಲಿಲ್ಲ, ಇಂತಹ ಗಂಡ, ಅಕ್ಕ ದೊರೆತುದು ತನ್ನ ಪೂರ್ವಜನ್ಮದ ಪುಣ್ಯ ಎಂದು ಮನದಲ್ಲಿಯೇ ಬೀಗಿದಳು ತಾರಾ. ಅವಳಿಗೆ ತನ್ನ ವೈಭವದಲ್ಲಿ ತವರಿನವರ ನೆನಪೇ ಆಗಲಿಲ್ಲ. ತಂಗಿಯ ಸ್ಥಿತಿವಂತಿಕೆಯನ್ನು ಮೊದಲೇ ನೋಡಿದ್ದ ಶಾಮಣ್ಣನವರು ತಮ್ಮ ಪರಿಸ್ಥಿತಿ ನೆನೆದು ಮತ್ತೊಮ್ಮೆ ತಂಗಿಯ ಮನೆಗೆ ಕಾಲಿಡುವ ಸಾಹಸ ಮಾಡಲಿಲ್ಲ. ಹೇಗೋ ತಂಗಿಯ ಜವಾಬ್ದಾರಿ ಕಳೆದುಕೊಂಡು ಅವರು ಹಗುರಾಗಿದ್ದರು.

ದಿನ ತ[illegible]ಹಾಗ ನಗರದ ಒಂದು ದೇವಸ್ಥ




# ವಿಷಾದ ಪತ್ರ

ಹೀರಾ. ಗಾಂಜಿ

ನರ್ಸಿಂಗ್‌ಹೋಮ್‌ನಲ್ಲಿ ತಾರಾಳ ಹೆರಿಗೆಯ ವ್ಯವಸ್ಥೆ ಮಾಡಿದ್ದರು ಸುರೇಶ್, ವೇದ. ತಾರ ಗಂಡು ಮಗುವಿಗೆ ಜನ್ಮವಿತ್ತಾಗ, ಸುರೇಶ್, ವೇದರ ಆನಂದಕ್ಕೆ ಪಾರವೇ ಇಲ್ಲದಂತಾಯ್ತು.

ಈ ಮಧ್ಯೆ, ಮದುವೆಯ ನಂತರ ಶಾಲಿನಿ ಮನೋಹರರಿಂದ ಕೊಂಚ ದೂರವಾದವರಂತೆ ವರ್ತಿಸತೊಡಗಿದ್ದರು ವೇದ ಮತ್ತು ಸುರೇಶ್, ಸ್ವಾಭಿಮಾನಿಯಾದ ಶಾಲಿನಿಯೂ ತಾನಾಗಿಯೇ ಮೇಲೆ ಬಿದ್ದು ಅವರ ಮನೆಗೆ ಹೋಗಲಿಲ್ಲ. ಹೀಗಾಗಿ ಎರಡು ಕುಟುಂಬಗಳ ನಡುವೆ ಸಂಬಂಧವೇ ಇಲ್ಲದಂತಾಯ್ತು. ರಸ್ತೆಯಲ್ಲಿ ಎದುರಿಗೆ ಸಿಕ್ಕರೂ ಮಾತನಾಡಿಸದ ಸ್ಥಿತಿಗೆ ಪರಿಸ್ಥಿತಿ ಹೋದಾಗ ಶಾಲಿನಿಗೆ ಎಲ್ಲೋ, ಏನೋ ತಪ್ಪಾಗಿದೆಯೆಂದೆನಿಸತೊಡಗಿತು. ಗಂಡನೊಂದಿಗೆ ತನ್ನ ಅನುಮಾನವನ್ನು ಹೇಳಿಕೊಂಡಾಗ ಮನೋಹರ,

"ಹೋಗಲಿ ಬಿಡು. ನಮ್ಮ ಚಿಂತೆ, ಸಮಸ್ಯೆಗಳೇ ನಮಗೆ ಬೇಕಾದಷ್ಟು ಇರುವಾಗ ಬೇರೆಯವರ ಬಗ್ಗೆ ಯಾಕೆ ತಲೆ ಕೆಡಿಸಿಕೊಳ್ಳಬೇಕು. ಏನೋ ನಮ್ಮಿಂದ ಒಂದು ಹೆಣ್ಣಿಗೆ ತಾಳಿಭಾಗ್ಯ ದೊರೆಯಿತಲ್ಲ. ಅಷ್ಟೆ ಸಂತೋಷ" ಎಂದು ಸಮಾಧಾನಪಡಿಸಿದನು.

ಸ್ವಲ್ಪದಿನ ಈ ವಿಷಯವನ್ನೇ ಮರೆತವರಂತೆ ಅವರಿಬ್ಬರು ತಮ್ಮ ಕೆಲಸ ಕಾರ್ಯಗಳಲ್ಲಿ ಮುಳುಗಿ ಹೋಗಿದ್ದರು. ಆಗ ಒಂದು ದಿನ ತಾರಾಳಿಗೆ ಗಂಡು ಮಗುವಾದ ವಿಷಯ ವೇದಳ ಕೆಲಸದವಳಿಂದ ತಿಳಿದಾಗ, ಇಷ್ಟು ದೊಡ್ಡ ವಿಷಯವನ್ನು ತಿಳಿಸಲು ತನ್ನ ಮನೆಗೆ ಬಾರದ ಗೆಳತಿಯ ಬಗ್ಗೆ ಶಾಲಿನಿಗೆ ಜಿಗುಪ್ಸೆಯಾಯಿತು. ಜೀವನ ಪೂರ್ತಿ ಋಣಿಯಾಗಿರುತ್ತೇವೆ ಎಂದವಳು ತನ್ನ ಕೆಲಸವಾದ ತಕ್ಷಣ ತನ್ನನ್ನು ಮರೆತಳಲ್ಲ ಎನಿಸಿ ಬೇಸರವಾಯ್ತು. ಯಾವ ಹುತ್ತದೊಳಗೆ ಯಾವ ಹಾವೋ, ಎಲ್ಲರೂ ಮೇಲೆ ಕಾಣುವಷ್ಟು ಹಾಗೂ ಮಾತುಗಳನ್ನು ಆಡುವಷ್ಟು ಮನಸ್ಸಿನಿಂದ ಸರಳವಾಗಿರುವುದಿಲ್ಲ ಎಂದುಕೊಂಡಳು.

ಇದಾಗಿ ಎರಡು ಮೂರು ತಿಂಗಳುಗಳಾಗಿರಬಹುದು. ಒಂದು ದಿನ ಇದ್ದಕ್ಕಿದ್ದಂತೆ ಶಾಮಣ್ಣನವರು ಹಳ್ಳಿಯಿಂದ ಬಂದಿಳಿದಾಗ ಶಾಲಿನಿ ಮನೋಹರರಿಗೆ ಆಶ್ಚರ್ಯವಾಯಿತು. ಆದರೂ ಪ್ರಕಟಪಡಿಸದೇ ಮನೋಹರ "ಏನು ಶಾಮಣ್ಣನವರೇ ಇಷ್ಟು ದೂರ ಬಂದಿದಿರಿ" ಎಂದು ವಿಚಾರಿಸಿದ.

ಆ ಮಾತಿಗೇ ಕಾದಿದ್ದವರಂತೆ ಶಾಮಣ್ಣ 'ಗೊಳೋ' ಎಂದು ಅಳತೊಡಗಿದರು.

"ಯಾಕೆ ಏನಾಯ್ತು" ಗಾಬರಿಯಿಂದ ಕೇಳಿದಳು ಶಾಲಿನಿ.

"ಏನು ಹೇಳಲಿ ತಾಯಿ, ನನ್ನ ತಂಗಿಗೆ ಬಹು ದೊಡ್ಡ ಮೋಸವಾಯ್ತು ತಾರಾ ಈಗ ನಮ್ಮ ಹಳ್ಳಿಯಲ್ಲಿದ್ದಾಳೆ. ಅವಳ ಮಗುವನ್ನು ತಮ್ಮ ಬಳಿ ಇಟ್ಟುಕೊಂಡು ಅವರಿಬ್ಬರೂ ಅವಳನ್ನು ನಮ್ಮ ಊರಿನ ಬಸ್ಸು ಹತ್ತಿಸಿ ಕಳುಹಿಸಿ ಬಿಟ್ಟಿದ್ದಾರೆ. ಅವಳಿಗೆ ಆಪರೇಶನ್ ಮಾಡಿ ಮಗು ತೆಗೆದಿದ್ದರಿಂದ ಅವಳಿನ್ನೂ ಚೇತರಿಸಿಕೊಂಡಿಲ್ಲ, ತುಂಬಾ ಸುಸ್ತಾಗಿದ್ದಾಳೆ. ಅವಳ ಕೈಲಿ ಯಾವ ಕೆಲಸವೂ ಆಗುವುದಿಲ್ಲ. ಒಂದು ರೀತಿ ಮಂಕುಬಡಿದವಳಂತೆ ಒಂದೇ ಕಡೆ ಕುಳಿತಿರುತ್ತಾಳೆ. ಅವಳ ಸೇವೆ ಮಾಡಲು ನನ್ನ ಹೆಂಡತಿ ತಯಾರಿಲ್ಲ. ಊಟಕ್ಕೆ ಇನ್ನೊಂದು ಬಾಯಿ ಹೆಚ್ಚಾದುದರಿಂದ ಅವಳಿಗೆ ಕೋಪ ಬಂದಿದೆ. ನಮ್ಮ ಬಡತನದ ವಿಷಯ ನಿಮಗೆ ತಿಳಿಯದುದೇ. ಆದ್ದರಿಂದ ಹೇಗಾದರೂ ಮಾಡಿ ನನ್ನ ತಂಗಿಯನ್ನು ವಾಪಾಸು ಕರೆಯಿಸಿಕೊಳ್ಳುವಂತೆ ಕೇಳಲು ಈ ದಿನ ಬೆಳಿಗ್ಗೆ ಸುರೇಶ್ ಅವರ ಮನೆಗೆ ಹೋಗಿದ್ದೆ. ಆದರೆ ಅವರಿಬ್ಬರೂ ನನ್ನ ಪರಿಚಯವೇ ಇಲ್ಲದವರಂತೆ ವರ್ತಿಸಿದರು. 'ನೀವು ಯಾರೋ, ತಾರಾ ಯಾರೋ ನಮಗೆ ತಿಳಿಯದು' ಎಂದುಬಿಟ್ಟರು. ಈಗ ನಾನೇನು ಮಾಡಲಿ ತಾರಾಳ ಜೀವನ ಮುಂದೆ ಹೇಗೆ? ನನಗೊಂದೂ ತೋಚುತ್ತಿಲ್ಲ. ಆದ್ದರಿಂದ ನಿಮ್ಮ ಸಹಾಯವನ್ನು ಪಡೆಯೋಣವೆಂದು ಇಲ್ಲಿಗೆ ಬಂದೆ. ನೀವಾದರೂ ಅವರಿಗೆ ಹೇಳಿ" ಎಂದು ತಲೆ ಮೇಲೆ ಕೈ ಹೊತ್ತು ಕುಳಿತ ಶಾಮಣ್ಣನವರನ್ನು ನೋಡಿ ಇಬ್ಬರಿಗೂ ಕನಿಕರವೆನಿಸಿತು. ವೇದ, ಸುರೇಶ್ ತಮ್ಮಿಂದ ದೂರವಾದುದರ ಗುಟ್ಟು ಅವರಿಗೆ ತಿಳಿಯಿತು.

ಗಂಡ ಹೆಂಡತಿ ಸ್ವಲ್ಪ ಹೊತ್ತು ತಮ್ಮಲ್ಲಿಯೇ ಚರ್ಚಿಸಿ, ಯಾರಾದರೊಬ್ಬ ಒಳ್ಳೆಯ ವಕೀಲರ ಸಲಹೆಯನ್ನು ಪಡೆಯಬೇಕೆಂದು ನಿಶ್ಚಯಿಸಿದರು. ನಂತರ ಸಿದ್ಧವಾಗಿ ಶಾಮಣ್ಣನವರನ್ನೂ ತಮ್ಮೊಂದಿಗೆ ಕರೆದುಕೊಂಡು ವಕೀಲ ರಾಮಸ್ವಾಮಿಯವರ ಮನೆಗೆ ಬಂದರು.

ಪೂರ್ಣವಾಗಿ ವಿಷಯ ತಿಳಿದುಕೊಂಡ ವಕೀಲರು, ಈ ಮದುವೆಯೇ ಕಾನೂನುಬದ್ಧವಾಗಿಲ್ಲ ಎಂದರು. ಮೊದಲನೆಯ ಹೆಂಡತಿ ಇರುವಾಗಲೇ ಎರಡನೆಯ ಮದುವೆಯಾಗುವುದು ಸಾಧ್ಯವಿಲ್ಲ. ಅದನ್ನು ಯಾವ ಕಾನೂನು ಒಪ್ಪುವುದಿಲ್ಲ. ಅಲ್ಲದೇ ಮದುವೆಯಾಗಿರುವುದಕ್ಕೆ ಯಾವ ಪುರಾವೆಯೂ ಇಲ್ಲ. ಎಲ್ಲಿಯೂ ಮದುವೆ ರಿಜಿಸ್ಟರ್ಡ್ ಆಗಿಲ್ಲ, ಲಗ್ನಪತ್ರಿಕೆ ಪ್ರಿಂಟ್ ಮಾಡಿಸಿಲ್ಲ, ಹೋಗಲಿ ಎಂದರೆ ಮದುವೆಯ ಒಂದು ಫೋಟೋ ಕೂಡ ಅವರ ಬಳಿ ಇಲ್ಲ. ಇನ್ನು ಸಾಕ್ಷಿಯಾಗಿದ್ದವರು ಕೇವಲ ನಾಲ್ಕು ಜನ. ಆದರೂ ಅವರ ಮಾತು ಯಾವ ಕೋರ್ಟಿನಲ್ಲಿಯೂ ನಡೆಯುವಂತಿರಲಿಲ್ಲ. ವೇದ, ಸುರೇಶ್ ಅಕ್ಕಪಕ್ಕದವರಿಗೆ ತಾರಾ ತಮ್ಮ ದೂರದ ಸಂಬಂಧಿ ಎಂದೂ, ಅವಳ ಬಡತನದ ಕಾರಣದಿಂದ ಆ ಮಗುವನ್ನು ತಾವು ದತ್ತು ತೆಗೆದುಕೊಂಡಿರುವುದಾಗಿ ಹೇಳಿಕೊಂಡಿದ್ದರು. ಆದ್ದರಿಂದ ಯಾವ ಲಾಯರು ಈ ವಿಷಯದಲ್ಲಿ ಸಹಾಯ ಮಾಡುವಂತಿರಲಿಲ್ಲ.

ಹೀಗಾಗಿ ಕಾಲ ಮಿಂಚಿಹೋಗಿತ್ತು. ವೇದ, ಸುರೇಶ್ ಸುಲಭವಾಗಿ ತಮ್ಮದೇ ಆದ ಮಗುವನ್ನು ಪಡೆದುಕೊಂಡಿದ್ದರು. ತಮ್ಮ ಕೆಲಸವಾದ ನಂತರ ತಾರಾಳನ್ನು ನಿವಾರಿಸಿಕೊಂಡಿದ್ದರು. ಇಂತಹ ಒಂದು ಸಂಚಿನ ಸುಳಿವನ್ನೂ ತಿಳಿಯದೆ, ಅಮಾಯಕಳಾಗಿ ಶಾಲಿನಿ ತಾನೂ ಈ ಅಕಾರ್ಯದಲ್ಲಿ ಭಾಗಿಯಾದುದಕ್ಕೆ ಮನದಲ್ಲಿಯೇ ಬಹುವಾಗಿ ಕೊರಗಿದಳು.

*****

ಪಚ್ಚೆ ಪೈರಿನ ಹರವಿನಲ್ಲೇ ಕಬ್ಬಿನ ಸಿಹಿಗೆ ಹೆಸರಾದ ಮಂಡ್ಯ ಜಿಲ್ಲೆ ಸಹಕಾರಿ ಕ್ಷೇತ್ರದಲ್ಲೂ ಗಣನೀಯ ಪ್ರತಿಷ್ಠೆಯ ಸ್ಥಾನವನ್ನು ಗಳಿಸಿದೆ.

ಸಹಕಾರ ಕ್ಷೇತ್ರವು ಕೇವಲ ಸಕ್ಕರೆ ಹಾಗೂ ಖಾದಿ ಗ್ರಾಮೋದ್ಯೋಗಕ್ಕೆ ಮೀಸಲಾಗದೆ ಗ್ರಾಮೀಣ ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರ್ಯವನ್ನು ತಂದು ಕೊಡುವಲ್ಲಿ ಮಂಡ್ಯ ಜಿಲ್ಲಾ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ. ಲಿ. ಪ್ರಾಥಮಿಕ ಹಂತದಲ್ಲಿ ಯಶಸ್ಸು ಗಳಿಸಿ ಪ್ರಗತಿ ಪಥದತ್ತ ದಾಪುಗಾಲು ಹಾಕುತ್ತಿದೆ.

1988–89ರ ಸಾಲಿನಲ್ಲಿ ಶ್ರೀರಂಗ ಪಟ್ಟಣದ ಶಾಸಕಿ ಶ್ರೀಮತಿ ದಮಯಂತಿ ಬೋರೆಗೌಡರ ದೂರದರ್ಶಿತ್ವ ಹಾಗೂ ಸಾಮಾಜಿಕ ಕಳಕಳಿಯಿಂದ ಗ್ರಾಮೀಣ ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿಸುವ ಸಲುವಾಗಿ ಹುಟ್ಟು ಪಡೆದ ಈ ಸಂಸ್ಥೆ, ಕಳೆದ 3 ವರ್ಷಗಳಲ್ಲಿ ಗಣನೀಯ ಪ್ರಗತಿ ಸಾಧಿಸಿ ಸುಮಾರು 1240 ಗ್ರಾಮೀಣ ಮಹಿಳೆಯರನ್ನು ಸದಸ್ಯರನ್ನಾಗಿಸಿಕೊಂಡು ಸಂಸ್ಥೆಯು 66,600 ರೂ. ದೇಣಿಗೆಯನ್ನು ಸಂಗ್ರಹಿಸಿದೆ.

ಪ್ರಸ್ತುತ ಈ ಸಂಘಕ್ಕೆ ಪ್ರತಿಯೊಂದು ತಾಲ್ಲೂಕಿನಿಂದ ಒಬ್ಬೊಬ್ಬ ಮಹಿಳೆಯನ್ನು ನಿರ್ದೇಶಕರನ್ನಾಗಿ ಆಯ್ಕೆ ಮಾಡಿಕೊಂಡು ಪ್ರತಿ ತಾಲ್ಲೂಕಿನಲ್ಲಿ ತನ್ನ ಕಾರ್ಯ ಕ್ಷೇತ್ರವನ್ನು ವಿಸ್ತರಿಸುತ್ತಿದ್ದಾರೆ. ಈ ಸಂಸ್ಥೆಯ ಅಧ್ಯಕ್ಷರಾದ ಬಿ.ಕೆ. ಸಾವಿತ್ರಮ್ಮ ಹಾಗೂ ಸಂಸ್ಥೆಯ ಮ್ಯಾನೇಜರ್ ಆದ ಕು|| ವೈ.ಎಚ್. ಭಾರತಿಯವರ ಸತತ ಪರಿಶ್ರಮದಿಂದ ಕಳೆದೆರಡು ವರ್ಷಗಳಿಂದ ಈ ಸಂಸ್ಥೆಯು ಲಾಭ ಗಳಿಸುತ್ತಿದೆ.









ಕು|| ಭಾರತಿ

ಸಂಸ್ಥೆಯು ಸಮಾಜ ಕಲ್ಯಾಣ ಇಲಾಖೆಯು ನೀಡುವ ಹೊಲಿಗೆ ತರಬೇತಿ ಶಿಬಿರಗಳನ್ನು ಗ್ರಾಮಾಂತರ ಮಹಿಳೆಯರಿಗೆ ಹೊಲಿಗೆ ತರಬೇತಿಯಲ್ಲಿ ತರಬೇತಿ ನೀಡಿ, ಸ್ವಂತ ಉದ್ಯೋಗ ಕೈಗೊಂಡು ಸ್ವಾವಲಂಬಿಗಳಾಗಲು ಸಹಕಾರ ನೀಡುತ್ತಿದೆ.

ಕಳೆದ ಎರಡು ವರ್ಷಗಳಿಂದಲೂ ಈ ಸಂಸ್ಥೆಯ ಅಧ್ಯಕ್ಷರಾದ ಬಿ.ಕೆ. ಸಾವಿತ್ರಮ್ಮನವರು ಜಿಲ್ಲಾ ಪರಿಷತ್ ಸದಸ್ಯರಾಗಿರುವುದರಿಂದ, ಜಿಲ್ಲಾ ಪರಿಷತ್ತು ವ್ಯಾಪ್ತಿಯಲ್ಲಿ ಬರುವ ವಿದ್ಯಾಭ್ಯಾಸದ ಯೋಜನೆಯಡಿಯಲ್ಲಿ ಶಾಲಾ ಸಮವಸ್ತ್ರ ತಯಾರಿಕೆಯ ಯೋಜನೆಯನ್ನು ತಮ್ಮ ಸಂಸ್ಥೆಗೆ ಪಡೆದುಕೊಂಡು ಸುಮಾರು 60 ಮಂದಿ ಗ್ರಾಮೀಣ ಮಹಿಳೆಯರಿಗೆ 90–120 ದಿವಸಗಳ ಕೆಲಸವನ್ನು ನೀಡಿ 600–2000 ರೂ.ಗಳ ಗಳಿಕೆಯನ್ನು ಗಳಿಸಲು ಸಾಧ್ಯವಾಗುವಂತೆ ಕಾರ್ಯಕ್ರಮವನ್ನು ರೂಪಿಸಿಕೊಂಡು, ಶಾಲಾ ಸಮವಸ್ತ್ರಗಳನ್ನು ಹೊಲೆಸಿ, ಸಾಗಾಣಿಕೆಯನ್ನು ನಡೆಸಿಕೊಂಡು ಬರುವುದಲ್ಲದೆ, ಸಂಸ್ಥೆಯ ಬೆಳವಣಿಗೆಗೆ ಪೂರಕವಾಗುವಂತೆ ಬಂಡವಾಳವನ್ನು ಮಾಡಿಕೊಂಡು ಸಂಸ್ಥೆಯು ಶಕ್ತಿಯುತವಾಗುವಂತೆ ಕಾರ್ಯ ನಡೆಸಿಕೊಂಡು ಹೋಗುತ್ತಿದ್ದಾರೆ.

ಕರ್ನಾಟಕ ಚರ್ಮೋದ್ಯೋಗ ನಿಗಮದ ಸಹಕಾರದಿಂದ 91ರ ಸಾಲಿನಲ್ಲಿ ಸುಮಾರು 24 ಪರಿಶಿಷ್ಟ ಜನಾಂಗದ ಮಹಿಳೆಯರಿಗೆ ಚರ್ಮೋದ್ಯೋಗದಲ್ಲಿ ಪರ್ಸ್, ಬ್ಯಾಗಗಳನ್ನು ತಯಾರಿಸಲು ತರಬೇತಿ ನೀಡಲಾಯಿತು.

1991–92ನೇ ಸಾಲಿನಲ್ಲಿ ರಾಜ್ಯ ಸರ್ಕಾರ ರೂಪಿಸಿರುವ ವಿಶ್ವ ಕಾರ್ಯಕ್ರಮದಡಿಯಲ್ಲಿ ಸಿದ್ಧ ಉಡುಪು ತಯಾರಿಕಾ ಘಟಕವನ್ನು ಸ್ಥಾಪಿಸಲಾಗಿದೆ. ಈ ಘಟಕವನ್ನು ರಾಜ್ಯ ವಿಧಾನ ಸಭೆಯ ಉಪಾಧ್ಯಕ್ಷಣಿಯವರಾದ ಶ್ರೀಮತಿ ನಾಗಮ್ಮ ಕೇಶವಮೂರ್ತಿಯವರು ಉದ್ಘಾಟಿಸಿದರು. ಸಮಾರಂಭಕ್ಕೆ ರಾಜ್ಯ ತೋಟಗಾರಿಕಾ ಸಚಿವರಾದ ಎಂ.ಎಸ್. ಆತ್ಮಾನಂದರವರು, ಮಳವಳ್ಳಿಯ ಶಾಸಕಿ ಕು|| ಮಲ್ಲಾಜಮ್ಮ ಹಾಗೂ ಶ್ರೀರಂಗಪಟ್ಟಣದ ಶಾಸಕಿ ಶ್ರೀಮತಿ ದಮಯಂತಿ ಬೋರೇಗೌಡರು ಹಾಜರಿದ್ದರು. ಹಾಗೂ ಜಿಲ್ಲೆಯ ಎಲ್ಲಾ ಅಧಿಕಾರಿಗಳು ಉಪಸ್ಥಿತರಿದ್ದರು.

ಸಂಸ್ಥೆಗೆ ಕರ್ನಾಟಕ ಹಣಕಾಸು ಸಂಸ್ಥೆಯು ಕೈಗಾರಿಕಾ ಶೆಡ್‌ನ್ನು ನೀಡಿದೆ ಅಲ್ಲದೆ ಜಿಲ್ಲೆಯ ಸಣ್ಣ ಕೈಗಾರಿಕಾ ಸಂಸ್ಥೆಯ ಹಿರಿಯ ಅಧಿಕಾರಿಗಳು ಹಾಗೂ ಸಮಾಜ ಕಲ್ಯಾಣ ಇಲಾಖೆ ಮತ್ತು ವಿದ್ಯಾ ಇಲಾಖೆಗಳು ತಮ್ಮ ಸಹಾಯ ಹಸ್ತದ ನೆರವನ್ನು ಹಾಗೂ ಮಾರ್ಗದರ್ಶನವನ್ನು ನೀಡುತ್ತಾ, ಸಹಕರಿಸುತ್ತಾ ಬರುತ್ತಿವೆ.

ಯಾವುದೇ ಸಹಕಾರಿ ಸಂಸ್ಥೆ ಯಶಸ್ವಿಯಾಗಬೇಕಾದರೆ ಸಂಸ್ಥೆಯ ಸಿಬ್ಬಂದಿ ವರ್ಗ ಹಾಗೂ ಸರಕಾರಿ ಇಲಾಖೆಗಳ ಸಮನ್ವಯತೆ ಅತಿ ಮುಖ್ಯ. ಈ ದೆಸೆಯಲ್ಲಿ ಸಂಸ್ಥೆಯ ಪ್ರಮುಖ ಚೇತನವಾದ ಸಾವಿತ್ರಮ್ಮನವರಿಗೆ ಸಂಸ್ಥೆಯ ಪ್ರಗತಿಯ ಬಗ್ಗೆ ಇರುವ ಕಳಕಳಿ ಹಾಗೂ ಮ್ಯಾನೇಜರ್ ಭಾರತಿಯವರ ಕಠಿಣ ಪರಿಶ್ರಮವಲ್ಲದೆ ಇವರೆಲ್ಲರ ಕಾರ್ಯಕ್ಕೆ ಸಹಕಾರಿಯಾಗುತ್ತಿರುವ ಖಜಾಂಚಿ ಶ್ರೀಮತಿ ಶಾಂತ ಶಿವಶಂಕರಪ್ಪ ಮಾತ್ರವಲ್ಲದೆ ಇದರ ಸದಸ್ಯರ ಪರಿಪೂರ್ಣ ಸಹಕಾರ ದೊಂದಿಗೆ ಪ್ರಗತಿಯ ಮುನ್ನಡೆಯನ್ನು ಸಾಧಿಸುತ್ತಾ ಸಹಕಾರಿ ಕ್ಷೇತ್ರದಲ್ಲಿ ಒಂದು ಮಿನುಗುತಾರೆಯಾಗಿ ಈ ಸಂಸ್ಥೆಯು ಮಂಡ್ಯ ಜನತೆಗೆ ತನ್ನ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ.

ವೈ.ಹೆಚ್. ಕುಮುದ
ಬೆಂಗಳೂರು

# ಮಹಿಳೆಯರ ಕೈಚೀಲಗಳು

ವ[illegible] ಅವಶ್ಯಕತೆಗಳಿಗನು ಗುಣವಾಗಿ ಮಹಿಳೆಯರ ಕೈಚೀಲಗಳೂ ತಲೆ ಎತ್ತಿವೆ. ಈ ಕೈಚೀಲಗಳನ್ನು ಈಗ ಅವರ [illegible] ಅವಿಭಾಜ್ಯ ಅಂಗವೆಂದೇ ಹೇಳ ಬಹುದು. ಇದಕ್ಕೆ ಕಾರಣವಿಷ್ಟೆ. ಅವಳ ಅಗತ್ಯ ಗಳನ್ನು ಅದು ಪೂರೈಸಬಲ್ಲುದು. ಈ ಧಾರಕಗಳಲ್ಲಿ ನಾನಾ ರೂಪ, ಆಕಾರ, ವಸ್ತುವಿನ್ಯಾಸ, ಕಲೆ, ರಂಗು, ಇವುಗಳನ್ನು ಕಾಣಬಹುದು.

ಈ ಕೈಚೀಲಗಳ ಉದಯ ಯಾವಾಗ ಎಂದು ಸ್ಪಷ್ಟವಾಗಿ ಹೇಳಲು ಬರುವಂತಿಲ್ಲ. ವೇದ ಮತ್ತು ಪುರಾಣಗಳಲ್ಲಿ ಮಹಿಳೆಯರ ಆಭರಣಗಳ ಪೆಟ್ಟಿಗೆಗಳ ಉಲ್ಲೇಖವಿದೆಯಾದರೂ ಕೈಚೀಲಗಳ ಬಗ್ಗೆ ಯಾವುದೂ ಮಾಹಿತಿ ದೊರೆತಿಲ್ಲ. ಆದ್ದ ರಿಂದ ಕೆಲವು ಶತಮಾನಗಳಿಂದೀಚೆಗೆ ಈ ಕೈಚೀಲ ಗಳ ಉಗಮ ಆಯಿತೆಂಬ ನಿರ್ಧಾರಕ್ಕೆ ಬರ ಬಹುದು.

ಆಂಗ್ಲರ ಆಕ್ರಮಣದಿಂದ ಭಾರತೀಯರ ಸಾಮಾಜಿಕ ಜನ ಜೀವನದಲ್ಲಿ ಸಾಕಷ್ಟು ಬದಲಾ ವಣೆಗಳು ಉಂಟಾದವು. ಉಡಿಗೆ ತೊಡಿಗೆ, ಆಹಾರ ಪಾನೀಯ, ನಡವಳಿಕೆ, ಮೊದಲಾದವುಗಳು ಆಧುನಿಕೀಕರಣಗೊಂಡವು. ಅಂತೂ ಇಂಗ್ಲಿಷ್ ಜನರ ರೀತಿ ನೀತಿಗಳನ್ನು ನಮ್ಮವರು ತಮ್ಮ ದಿನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡರು. ವಿದೇಶೀ ಮಹಿಳೆಯರು ತಮ್ಮ ಕೈಗಳಲ್ಲಿ ಈ ಚೀಲಗಳನ್ನು ತೂಗು ಹಾಕಿಕೊಂಡು ಬಂದರೆಂದು ಕಾಣುತ್ತದೆ. ಅವರುಗಳು ತಮ್ಮ ಮುಖಗಳಿಗೆ ಉಪಯೋಗಿಸುವ ಪ್ರಸಾಧನ, ಕೂದಲನ್ನು ಸರಿಪಡಿಸಿಕೊಳ್ಳಲು ಬಾಚಣಿಗೆ ಮೊದಲಾದವು ಗಳನ್ನು ಇಟ್ಟುಕೊಳ್ಳುತ್ತಿದ್ದರು. ಭಾರತೀಯರು ಅದನ್ನೂ ಅನುಸರಿಸಿದರೆಂದು ಕಾಣುತ್ತದೆ.

ನಮ್ಮ ಸಂಪ್ರದಾಯಗಳಲ್ಲಿ ತಾಂಬೂಲ ನೀಡುವುದು. ಸೇವನೆ ಇವುಗಳು ಪ್ರಮುಖ ಪಾತ್ರ ವಹಿಸಿವೆ. ಶ್ರೀಮಂತರ ಮನೆಗಳಲ್ಲಿ, ರಾಜಮಹಾ ರಾಜರು. ರಾಣೀವಾಸದವರು ಪ್ರತ್ಯೇಕವಾಗಿ ಸೇವಕರನ್ನು ಸೇವಕಿಯನ್ನು ನೇಮಿಸಿಕೊಂಡು ತಾಂಬೂಲ ಕಾರ್ಯವನ್ನು ಮಾಡಿಕೊಳ್ಳುತ್ತಿದ್ದರು. ಗಂಡಸರು ತಾಂಬೂಲ ಸಾಮಗ್ರಿಗಳನ್ನು ಒಂದು ಪೆಟ್ಟಿಗೆಯುಲ್ಲಿಟ್ಟುಕೊಳ್ಳುತ್ತಿದ್ದರು. ಹೆಂಗಸರು ಚೀಲ ಗಳಲ್ಲಿ ಇಟ್ಟುಕೊಳ್ಳುತ್ತಿದ್ದರೆಂದು ಅಭಿಪ್ರಾಯ ಪಡಬಹುದು. ಇದಕ್ಕೆ ಒಳ್ಳೆಯ ಉದಾಹರಣೆ ಹಿಂದೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಊಳಿಗದವಳಾಗಿದ್ದ ಕವಯಿತ್ರಿ ಸಂಚಿಯ ಹೊನ್ನಮ್ಮ. ಸಂಚಿ ಎಂದರೆ ಎಲಡಿಕೆಯ ಚೀಲ ಎಂದು ಅರ್ಥ. ಅದು ಗ್ರಾಮಕ್ಕೆ ತಿರುಗಿ ಚಂಚಿ ಎಂದೂ ಸಹ ಆಗಿ ಹೋಗಿದೆ. ಇದೊಂದು ಬಟ್ಟೆಯ ನಾಲ್ಕೈದು ಪದರವಿರುವ ಪುಟ್ಟ ಚೀಲ, ಹಳ್ಳಿಯವರು ಇದರಲ್ಲಿ ತಾಂಬೂಲದ ಇತರ ಚರ್ವಣಗಳಾದ ಹೊಗೆಸೊಪ್ಪು, ಕಾಚು, ಗೋಟ ಅಡಿಕೆ, ಪುಟ್ಟ ಡಬ್ಬಿಯುಲ್ಲಿ ಸುಣ್ಣ, ಇಟ್ಟುಕೊಂಡಿರು ತ್ತಾರೆ. ಗೆಳತಿಯರೆಲ್ಲಾ ಸೇರಿಕೊಂಡಾಗ ಎಲೆ ಅಡಿಕೆ ಹಾಕಿಕೊಂಡು ವಿನೋದವಾಗಿ ಮಾತನಾಡು ವುದೂ ಉಂಟು. ಇದನ್ನು ಸದಾ ಉಡಿಯಲ್ಲಿ [illegible]ಸಿಕೊಂಡೇ ಇರುತ್ತಾರೆ. ಸೊಂಟದ ನೆರಿಗೆ ಯ[illegible] ಒಳಮುಖವಾಗಿ ಸಿಕ್ಕಿಸಿಕೊಳ್ಳುವ ಬದಲು ಅದ[illegible] ಹೊರಕ್ಕೆ ತಂದು ಸಣ್ಣದಾಗಿ ಸುರುಳಿ ಸುತ್ತಿ [illegible] ನೆರಿಗಿನ ಮೇಲ್ಪದರದೊಳಗೆ ಸುತ್ತಿ [illegible] [illegible]ಕಾಯಿ ಮಾಡಿಕೊಂಡು



ಎಲಡಿಕೆಯ ಸಂಚಿ

ಅದರಲ್ಲೂ ದುಡ್ಡು ಎಲಡಿಕೆ ಎಲ್ಲವನ್ನೂ ಹಿಡಿ ದಿಟ್ಟು ಕೊಳ್ಳುತ್ತಿದ್ದರು. ಇದೊಂದು ಸರಳವಿಧಾನ. ಹಿಂದಿನ ಕಾಲದಲ್ಲಿ ಮಹಿಳೆಯರು ಮನೆಯಲ್ಲೇ ಇರುತ್ತಿದ್ದರು. ಆದ್ದರಿಂದ ಅವರಿಗೆ ಚಿಲ್ಲರೆ ದುಡ್ಡು, ಅಲಂಕಾರ ಪ್ರಸಾಧನಗಳನ್ನು ಎಲ್ಲೆಂದರಲ್ಲಿಗೆ ಒಯ್ಯುವ ಪ್ರಮೇಯಗಳೇ ಇರಲಿಲ್ಲ. ಅವರ ಅಲಂಕಾರವೆಲ್ಲಾ ಮನೆಯುಲ್ಲೇ ನಡದು ಹೋಗು ತ್ತಿದ್ದಿತು. ಹೆಚ್ಚೆಂದರೆ ಅವರುಗಳು ನೆಂಟರಿಷ್ಟರ ಮನೆಗೆ ಯಾವಾಗಲಾದರೊಮ್ಮೆ ಹೋಗುತ್ತಿದ್ದು ದುಂಟು. ಅವರ ಆವಶ್ಯಕತೆಗಳು ಅತಿಥೇಯರ ಮನೆಯಲ್ಲಿಯೇ ನಡದು ಹೋಗುತ್ತಿದ್ದಿತು.

ತೂಗುಚೀಲ





ಗೂಚಿ ಚೀಲ





ಈ ಹೆಂಗಸರ ಕೈಚೀಲಗಳಿಗೆ ಇಂಗ್ಲೀಷಿನಲ್ಲಿ ವ್ಯಾನಿಟಿಬ್ಯಾಗ್ ಎನ್ನುತ್ತಾರೆ. ಅದೇ ರೂಢಿಯಲ್ಲಿರುವ ಪದ. ಆಧುನೀಕತೆಯ ಪರಮಾವಧಿ. ಆಧುನಿಕ ಮಹಿಳೆಯನ್ನು ಚಲನಚಿತ್ರದಲ್ಲೋ ಅಥವಾ ಕುಂಚದಲ್ಲೋ ಬಿಡಿಸಬೇಕಾದರೆ ಎತ್ತರವಾದ ಹೆರಳನ್ನು ಸುತ್ತಿ, ಕಾಲಿಗೆ ಎತ್ತರದ ಹಿಮ್ಮಡಿ ಚಪ್ಪಲಿಗಳನ್ನು ಹಾಕಿ, ಕಣ್ಣಿಗೆ ಕಪ್ಪುಕನ್ನಡಕ ಹಾಕಿ ಕೈಗೆ ಒಂದು ವ್ಯಾನಿಟಿಬ್ಯಾಗನ್ನು ಕೊಟ್ಟರೆ ಅವಳೇ ಆಧುನಿಕ ಮಹಿಳೆ. ಬ್ಯಾಗ್ ಫ್ಯಾಶನ್‌ನ ಒಂದು ಸಂಕೇತ. ಇದು ಸುಮಾರು 20 ವರ್ಷಗಳ ಹಿಂದಿನ ಮಾತಾಯಿತು.

ಈಗ ಕಾಲ ಬದಲಾಗಿದೆ. ಮಹಿಳೆ ದುಡಿಯುವ ಪ್ರಪಂಚಕ್ಕೂ ಕಾಲಿಟ್ಟಿದ್ದಾಳೆ. ಈಗ ಈ ಬ್ಯಾಗ್ ಫ್ಯಾಶನ್ನಿನ ಸಂಕೇತವಲ್ಲದೆ ಅಗತ್ಯದ ಪರಿಕರಗಳನ್ನು ಕೊಂಡೊಯ್ಯುವ ಒಂದು ಪ್ರಮುಖ ಸಾಧನವಾಗಿದೆ. ದುಡಿಯುವ ಮಹಿಳೆಯರು ವಿವಿಧರೀತಿಯ ಬ್ಯಾಗುಗಳನ್ನು ಉಪಯೋಗಿಸುತ್ತಾರೆ. ಅದರಲ್ಲಿ ಊಟದ ಡಬ್ಬಿ, ಕರವಸ್ತ್ರ, ಮನೆಯ ಬೀಗದ ಕೈ, ವಿಳಾಸಗಳ ಕಿರುಪುಸ್ತಕ, ಪೆನ್ನು, ಪೆನ್ಸಿಲ್, ಬಿಡುವಿನ ವೇಳೆಯಲ್ಲಿ ಓದಲು ಯಾವುದಾದರೊಂದು ನಿಯತಕಾಲಿಕೆ, ಅಥವಾ ಕಾದಂಬರಿ. ಕೆಲವು ಹವ್ಯಾಸೀ ಮಹಿಳೆಯರು ಕಸೂತಿ, ಕ್ರೋಷೆ, ಸ್ವೆಟರ್ ಹಾಕುವ ಪರಿಕರಗಳು ಮತ್ತು ಓಡಾಟಕ್ಕೆ ಬೇಕಾಗುವಷ್ಟು ಚಿಲ್ಲರೆ ಹಣ, ಕನ್ನಡಕ, ಇವಿಷ್ಟನ್ನೂ ಹಿಡಿಸುವಂತಹ ಬ್ಯಾಗುಗಳನ್ನು ಉಪಯೋಗಿಸುತ್ತಾರೆ. ಈ ಬ್ಯಾಗಿಗೆ ಅನೇಕ ವಿಭಾಗಗಳಿದ್ದು ಕೆಲವು ಚಿಕ್ಕದು ಮತ್ತು ಕೆಲವು ದೊಡ್ಡದೂ ಇದ್ದು ಒಂದೊಂದು ವಿಭಾಗದಲ್ಲಿ ಒಂದೊಂದು ಸಾಮಾನುಗಳನ್ನು ಇಡುವ ಪರಿಪಾಠ ಮಾಡಿಕೊಂಡರೆ ಸಾಮಾನುಗಳನ್ನು ಹುಡುಕಲು ತಡಕಾಡಬೇಕಾಗಿರುವುದಿಲ್ಲ. ಚಿಲ್ಲರೆ ಹಣವನ್ನು ಒಂದು ಪುಟ್ಟ ಪರ್ಸ್‌ನೊಳಗಿಟ್ಟುಕೊಂಡು ಅದನ್ನು ಬ್ಯಾಗ್‌ನಲ್ಲಿ ಹಾಕಿದರೆ ಬೇಕೆಂದಾಗ ತೆಗೆದುಕೊಳ್ಳಬಹುದು.

ಚಿಕ್ಕಮಕ್ಕಳ ತಾಯಂದಿರು ತಮ್ಮ ಮಕ್ಕಳಿಗೆ ಬೇಕಾಗುವ ಸಾಮಾನುಗಳನ್ನು ಕೊಂಡೊಯ್ಯಲು ಅನುಕೂಲವಾದ ಬ್ಯಾಗುಗಳು ಈಗ ಮಾರುಕಟ್ಟೆಯಲ್ಲಿ ಲಭ್ಯ. ಮಗುವಿನ ಫೀಡಿಂಗ್‌ಬಾಟಲ್, ಸಣ್ಣ ಬಿಸ್ಕತ್‌ನ ಪ್ಯಾಕೆಟ್, ಪುಟ್ಟ ಆಟಿಕೆ, 4–5 ಡ್ರಾಪರ್‌ಗಳು, ಮಗುವಿನ ಅಂಗವಸ್ತ್ರ, ಸ್ವೆಟರ್, ಹಾಲಿನ ಡಬ್ಬ, ತೊಳೆಯಲು ಬ್ರಷ್, ಎಲ್ಲವನ್ನೂ ಇಟ್ಟುಕೊಂಡಿರುತ್ತಾರೆ. ಹಿಂದಿನ ಕಾಲದಲ್ಲಿ ಚಿಕ್ಕ ಮಕ್ಕಳ ತಾಯಂದಿರು ಮಗುವಿಗೆ ಮೊಲೆಯೂಡಿಸುವ ಪರಿಪಾಠವಿಟ್ಟುಕೊಂಡಿದ್ದರಿಂದಲೂ ಮತ್ತು ಅವರು ಹೆಚ್ಚು ತಿರುಗಾಟ ಮಾಡದೇ ಇದ್ದುದರಿಂದಲೂ ಅವರಿಗೆ ಬ್ಯಾಗುಗಳ ಅವಶ್ಯಕತೆ ಇರಲಿಲ್ಲ.

ಹೆಗಲಿಗೆ ನೇತುಹಾಕಿಕೊಳ್ಳುವ ಬ್ಯಾಗುಗಳು ದುಡಿಯುವ ಮಹಿಳೆಯರನ್ನು ಬಹುಮಟ್ಟಿಗೆ ಆಕರ್ಷಿಸಿವೆ. ಬಸ್‌ನಲ್ಲಿ ಆಗಲಿ, ಆಟೋದಲ್ಲಿಯಾಗಲೀ ಪಯಣಿಸುವಾಗ, ಓಡಾಡುವಾಗ ಈ ತೂಗು ಬ್ಯಾಗು ಬಹು ಸೌಕರ್ಯವೆನಿಸಿದೆ. ಇನ್ನು ಕೆಲವು ಬ್ಯಾಗುಗಳ ಹಿಡಿಗಳನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಉದ್ದ, ಗಿಡ್ಡ ಮಾಡಿಕೊಳ್ಳಬಹುದು. ಹಿಡಿಯುಲ್ಲದವುಗಳನ್ನು ಕಂಕುಳಲ್ಲೋ, ಕೈಯಲ್ಲೋ ಹಿಡಿದುಕೊಳ್ಳ ಬೇಕಾಗುವುದು. ಚಿಕ್ಕ ಹಿಡಿಗಳಿದ್ದರೆ ಮೊಳಕೈಯಲ್ಲಿನ ತೂಗು ಹಾಕಿಕೊಳ್ಳಬಹುದು. ಹೊರಗಡೆ ಓಡಾಡುವಾಗ ಹ್ಯಾಂಡ್ ಬ್ಯಾಗ್‌ಗಳಿಗಿಂತ ಶೋಲ್ಡರ್ ಬ್ಯಾಗ್ ಹೆಚ್ಚು ಸಹಕಾರಿ. ಈ ಶೋಲ್ಡರ್ ಬ್ಯಾಗುಗಳಲ್ಲಿ ಹೆಚ್ಚು ಸಾಮಾನುಗಳನ್ನೂ ತುಂಬಿಸಬಹುದು.

ಈ ಬ್ಯಾಗುಗಳನ್ನು ದಾರದಿಂದ, ಮಣಿ ಮತ್ತು ದಾರದ ಮಿಶ್ರಣದಲ್ಲಿ, ಉಲ್ಲನ್, ಪ್ಲಾಸ್ಟಿಕ್ ತಂತಿಗಳಿಂದ, ಬಟ್ಟೆಗಳಿಂದ, ವೈರುಗಳಿಂದ, ತಯಾರಿಸಿಕೊಳ್ಳಬಹುದು. ಆದರೆ ಹೆಚ್ಚು ತಾಳಿಕೆ, ಬಾಳಿಕೆಯುಳ್ಳವು ಹಿಡಿತಕ್ಕೆ ಸೌಕರ್ಯವೂ, ಹಗುರವೂ ಆದವು ಎಂದರೆ ಚರ್ಮದ ಚೀಲಗಳು. ಮಳೆಯಲ್ಲಿ ನೆನೆಯುವುದಿಲ್ಲ. ಹೆಚ್ಚು ಸಾಮಗ್ರಿಗಳು ಹಿಡಿಯುವುವು. ದೂರದ ಪ್ರಯಾಣಕ್ಕೂ ಒಯ್ಯಬಹುದು.

ಈ ಬ್ಯಾಗುಗಳನ್ನು ಮನೆಯಲ್ಲೇ ತಯಾರಿಸಿಕೊಳ್ಳುವುದೂ ಒಂದು ಕುಶಲಕಲೆ. ಇದಕ್ಕೆ ಮಾರು[illegible] ವಿಧವಾದ ಉಪಕರಣಗಳು ಬೇಕು[illegible]ಯುವುವು. ಉದಾಹರಣೆಗೆ ಹಿಡಿಗಳು, ಗುಂಡಿಗಳು, ಜಿಪ್‌ಗಳು, ಅಲಂಕಾರಕ್ಕಾಗಿ ಅಂಟಿಸುವ ಸ್ಟಿಕ್ಕರ್‌ಗಳು, ಕನ್ನಡಿ ಚೂರುಗಳು, ಕುಚ್ಚುಗಳು ಮೊದಲಾದವುಗಳು. ಇವುಗಳನ್ನು ಉಪಯೋಗಿಸುವುದರಿಂದ ಆಕರ್ಷಕ ರೀತಿಯಲ್ಲಿ ಬಿಡುವಿನ ಸಮಯದಲ್ಲಿ ಕೈಚೀಲಗಳನ್ನು ತಯಾರಿಸಬಹುದು. ಮನೆಯಲ್ಲೇ ತಯಾರಿಸಿಕೊಂಡರೆ ಅತಿ ಸುಲಭ ದರದಲ್ಲಿಯೂ ಆಗಿ ಹೋಗುತ್ತದೆ. ಹುಟ್ಟಿದ ಹಬ್ಬದಲ್ಲಿ ಗೃಹಪ್ರವೇಶದಲ್ಲಿ ಅಥವಾ ಇನ್ನಾವುದೇ ಸಮಾರಂಭಗಳಲ್ಲಿ ಉಡುಗರೆಯಾಗಿಯೂ ಕೊಡಬಹುದು.

ಅನೇಕ ಸಂಘ ಸಂಸ್ಥೆಗಳಲ್ಲಿ ಕೈ ಚೀಲಗಳನ್ನು ತಯಾರಿಸುವ ತರಗತಿಗಳನ್ನು ಮಹಿಳೆಯರಿಗೆ ನಡೆಸಲಾಗುತ್ತಿದೆ. ಕೆಲವು ಕಡೆ ರಾಷ್ಟ್ರೀಕೃತ ಬ್ಯಾಂಕುಗಳು ಈ ಕುಶಲಕಲೆಯಲ್ಲಿ ನಿರುದ್ಯೋಗಿಗಳಿಗೆ ತರಬೇತಿ ನೀಡಿ ಅವರಿಗೆ ಧನಸಹಾಯ ನೀಡಿ ವಸ್ತುಗಳನ್ನು ತಯಾರಿಸಿಕೊಳ್ಳಲು ನೆರವು ನೀಡಿದ್ದಾರೆ. ಇದಕ್ಕೆ ಪೂರಕವಾಗಿ ಸರ್ಕಾರ ಮುಂದೆ ಒಂದು ಇಂತಹ ಕರಕುಶಲ ವಸ್ತುಗಳನ್ನು ಕೊಳ್ಳುತ್ತಿದ್ದಾರೆ. ಪ್ರತಿಯೊಂದು ರಾಜ್ಯಗಳಲ್ಲಿಯೂ ಸಹ ಒಂದೊಂದು ಕರಕುಶಲ ನಿಗಮಗಳನ್ನು ಏರ್ಪಡಿಸಿ ಅದರಲ್ಲಿ ಆಯಾ ರಾಜ್ಯಗಳಲ್ಲಿ ತಯಾರಾಗುವ ವಸ್ತುಗಳನ್ನು ಮಾರಾಟಮಾಡುತ್ತಾರೆ. ವಿದೇಶೀ ಪ್ರವಾಸಿಗರಿಗೆ ಇದರ ಮೇಲೆ ಅತಿಯಾದ ವ್ಯಾಮೋಹ. ವಿದೇಶಗಳಿಗೂ ರಫ್ತು ಮಾಡುತ್ತಿದ್ದಾರೆ. ಇವುಗಳು ಹೇರಳವಾದ ವಿದೇಶೀ ವಿನಿಮಯ ಗಳಿಸಿಕೊಡುತ್ತಿವೆ.

ಈ ಕೈಚೀಲಗಳ ಸಿದ್ಧಪಡಿಸಿದ ಚೌಕಟ್ಟುಗಳು ಮತ್ತು ಅವರ ಹಿಡಿಕೆಗಳೂ, ಅದಕ್ಕೆ ಹೊಂದುವ ಗುಂಡಿಗಳು, ಕುಚ್ಚುಗಳೂ ದೊರೆಯುತ್ತವೆ. ಆಗ ತಯಾರಿಸುವುದು ಸುಲಭ. ಚೌಕಟ್ಟಿನ ಒಳಗಿರುವ ಕಡ್ಡಿಗಳಿಗೆ ದಾರವನ್ನೋ, ಉಲ್ಲನ್, ಅಥವಾ ಪ್ಲಾಸ್ಟಿಕ್ ವೈರುಗಳನ್ನು ತೂರಿಸಿ, ಜೋಡಿಸಿ ಕುಚ್ಚುಗಳನ್ನು ಕಟ್ಟಿ ಹಿಡಿಕೆಗಳನ್ನು ಇಟ್ಟು ಹೊಲೆದರೆ ಬ್ಯಾಗ್ ತಯಾರಾಯಿತು.

ನಮ್ಮ ಉಡುಪುಗಳಿಗೆ ಹೊಂದಿಕೆಯಾಗುವಂತಹ ಬ್ಯಾಗುಗಳನ್ನು ತೂಗಿ ಹಾಕಿಕೊಂಡರೆ ಆಧುನಿಕತೆಯ ಪರಮಾವಧಿಯನ್ನು ತಲುಪಿದಂತೆ ಆಗುತ್ತದೆ. ಮಕಮಲ್ ಬಟ್ಟೆಯ ಮೇಲೆ ಚುಮುಕಿ ಕೆಲಸಮಾಡಿದ ಬ್ಯಾಗ್‌ಗಳು ಮೊಘಲ್ ಶೈಲಿಯಿಂದ ಕೂಡಿರುತ್ತವೆ. ಅದೇ ರೀತಿಯ ವೇಸ್ಟ್‌ಕೋಟು, ಚಪ್ಪಲಿಗಳೂ ದೊರೆಯುತ್ತದೆ.

ಸುಮಾರು 5 ರೂ.ನಿಂದ ಹಿಡಿದು 750, 800 ರೂ. ವರೆಗಿನ ತರಹೇ ವಾರಿ ಬ್ಯಾಗುಗಳು ಇಂದು ಮಾರುಕಟ್ಟೆಯಲ್ಲಿ ಲಭ್ಯ.

ವಿದೇಶದಲ್ಲಿ 'ಗೂಚಿ' ಬ್ಯಾಗುಗಳನ್ನು ಹಿಡಿದುಕೊಂಡು ಸಭೆಗೆ ಬಂದ ಹೆಂಗಸಿಗೆ ಅಸಾಧಾರಣ ಗೌರವ ದೊರೆಯುತ್ತದೆ. ಇದರ ಬೆಲೆ ಸುಮಾರು 300 ಡಾಲರ್. (ಒಂದು ಡಾಲರ್ 26 ರೂ. ಸಮ.) ಅದರ ಬೆಲೆಯನ್ನು ನೀವೇ ಲೆಕ್ಕಹಾಕಿಕೊಳ್ಳಿ.

ಹೀಗೆ ಮಹಿಳೆಯರು ತಮ್ಮ ತಿರುಗಾಟಕ್ಕೆ ಸೌಕರ್ಯವಾಗುವಂತಹ ಬ್ಯಾಗುಗಳನ್ನು ರೂಪಿಸಿಕೊಂಡು ಉಪಯೋಗಿಸುತ್ತಿದ್ದಾರೆ.

— ಶಾರದಾ ಶಾಮಣ್ಣ

# ಸ್ವರ ಕೋಕಿಲ, ಸಂಗೀತ ಶಾರದೆ
# ಜಾಹ್ನವಿ ಜಯಪ್ರಕಾಶ್

‘ರಘುಸುತ’

‘ಕರ್ಣ’ ನಾಟಕದಲ್ಲಿ ಕೃಷ್ಣನ ಪಾತ್ರದಲ್ಲಿ ಜಾಹ್ನವಿ

ನಾಟಕ ತರಬೇತಿಯ ದೃಶ್ಯವೊಂದರಲ್ಲಿ

ಡಾ। ಬಾಲಮುರಳಿಕೃಷ್ಣ ಅವರಿಂದ ಸನ್ಮಾನಿತರಾದಾಗ

**ಹಾ**ಸನ ಜಿಲ್ಲೆಯ ಗೋರೂರು ಸುಂದರ ಪ್ರಕೃತಿ ದೃಶ್ಯಾವಳಿಯ ಕೇಂದ್ರ. ಬಳಿಯಲ್ಲೆ ಹರಿಯುವ ಹೇಮಾವತಿಯ ಸಲಿಲವಾಹಿನಿಯ ಮಂಜುಳ ನಿನಾದ, ರಾಗ ಲಯ ಬದ್ಧ ಚಲನೆಯು ಯಾರಿಗಾದರೂ ಸ್ಫೂರ್ತಿದಾಯಕ. ಇಂತಹ ಪ್ರಕೃತಿ ದೇವಿಯ ಮಡಿಲಿನಲ್ಲಿ ರೂಪುಗೊಂಡವರೇ ಕೋಗಿಲೆ ಕಂಠಧ್ವನಿಯ ಜಾಹ್ನವಿ ಜಯಪ್ರಕಾಶ್.

ಈಕೆಯ ಕಂಠ ಸಿರಿಯನ್ನು ಆಲಿಸುವುದೇ ಒಂದು ಸುಮಧುರ ಅನುಭವ. ಅದು ಕೇಳುಗರ ಹೃದಯಗಳಿಗೆ ಶಾಂತಿ, ಸಾಂತ್ವನಗಳನ್ನೆ ನೀಡುವಂತಹುದು.

ಈ ಕಂಠಸಿರಿಯ ಮಾಧುರ್ಯವು ದೈವದತ್ತವಾದುದು.

ನೃತ್ಯ ಪ್ರದರ್ಶನಗಳಿಗೆ ಈಕೆಯ ಕಂಠಸಿರಿ ಹೇಳಿ ಮಾಡಿಸಿದಂತಿದೆ. ಭರತನಾಟ್ಯ ಕೂಚ್ಚುಪುಡಿ, ಭಜನ್ ಯಾವುದೇ ನೃತ್ಯ ಪ್ರಾಕಾರವಾಗಿರಲಿ ಈಕೆಯ ಹಾಡುಗಾರಿಕೆ ಆ ಪ್ರದರ್ಶನಕ್ಕೆ ಚಿನ್ನದ ಚೌಕಟ್ಟಿನಂತೆ ಮೆರುಗು ನೀಡುವಂತಹುದು. ನೃತ್ಯ ಮಾಡುವವರಿಗೂ ಸ್ಫೂರ್ತಿದಾಯಕ, ಚೈತನ್ಯ ದಾಯಕ. ಹಾಡಿನ ಸಾಹಿತ್ಯವನ್ನು ಅರ್ಥ ಮಾಡಿಕೊಂಡು, ಮೂಲ ಸೊಗಸು, ಅರ್ಥಗಳನ್ನು ಮನನ ಮಾಡಿಕೊಂಡು ಭಾವನಾತ್ಮಕವಾಗಿ ಹಾಡುವರು. ಈಕೆಯ ಹೃದಯಾಂತರಾಳದಿಂದ ಮೂಡಿ ಬರುವ ಸ್ವರ ಭಾವಗಳು ಕೇಳುಗರ ಹೃದಯದ ಮೇಲೆ ಅಚ್ಚಳಿಯದ ಪ್ರಭಾವ ಬೀರುತ್ತವೆ. ಇಂತಹ ಭಾವನಾತ್ಮಕ ಹಾಡುಗಾರಿಕೆ ಅಲ್ಲದೆ ವಿದೇಶಗಳಿಂದಲೂ ಈಕೆಯ ಹಾಡುಗಾರಿಕೆಗೆ ನಿರಂತರ ಬೇಡಿಕೆ ಇರುವುದು. ಇಷ್ಟೇ ಅಲ್ಲದೆ ಈಕೆ ಉತ್ತಮ ಮಟ್ಟದ ಸಂಗೀತ ಕಚೇರಿಗಳನ್ನು ನೀಡಿದ್ದಾರೆ. ಈಕೆ ಸಂಗೀತ ಕಲಾವಿದೆ ಆಗಿರುವುದರೊಂದಿಗೆ ನೃತ್ಯ ಸಂಯೋಜಕರು, ನೃತ್ಯಾಂಶಗಳಿಗೆ ಸಂಗೀತ ದಿಗ್ದರ್ಶಕರೂ, ಈ

ಜಾಹ್ನವಿ ಜಯಪ್ರಕಾಶ್



ನಿಟ್ಟಿನಲ್ಲಿ ಉತ್ತಮ ಮಟ್ಟದ ಸಂಶೋಧಕರು ಆಗಿದ್ದಾರೆ.

ಈಕೆ ಇಂದು ಪ್ರಕಾಶಿಸುತ್ತಿರುವುದು ಕರ್ನಾಟಕ, ಭಾರತಗಳಲ್ಲಿಯೇ ಅಲ್ಲದೆ ವಿದೇಶಗಳಲ್ಲಿ, ಅದರಲ್ಲೂ ಅಮೇರಿಕದಲ್ಲಿ.

ಇಂತಹ ಕಲಾವಿದೆಯು ಇತ್ತೀಚೆಗಷ್ಟೇ ನಿಧನರಾದ ಡಾ।। ಗೋರೂರರ ತಮ್ಮನ ಮಗಳು.

ಗೋರೂರ್‌ರವರು ತಮ್ಮಂದಿರಾದ ಜಿ.ಎಸ್. ರಾಘವಾಚಾರ್ಯ ಹಾಗೂ ರುಕ್ಮಿಣಿಯಮ್ಮನವರುಗಳ ಪುತ್ರಿಯಾಗಿ 5-4-1952 ರಂದು ಜಾಹ್ನವಿಯವರು ಗೋರೂರಿನಲ್ಲಿ ಜನಿಸಿದರು. ಅಡ್ವೋಕೇಟ್‌ರವರಾಗಿದ್ದ ರಾಘವಾಚಾರ್ ಗೋರೂರಿನ ಚೇರ್ಮನ್ ಕೂಡ ಆಗಿದ್ದರು. ಇವರಿಗೆ ಸಂಗೀತದಲ್ಲಿ ತುಂಬಾ ಆಸಕ್ತಿ. ಸಾಹಿತ್ಯ ಕಲೆಗಳಲ್ಲಿಯಂತೂ ಬಹಳಷ್ಟು ಪ್ರೀತಿ, ಅಭಿಮಾನ. ಐವರು ಸಹೋದರಿಯರಲ್ಲಿ ಜಾಹ್ನವಿಯವರು ನಾಲ್ಕನೆಯವರು. ಇವರ ಇಬ್ಬರು ಅಕ್ಕಂದಿರಿಗೂ ಸಂಗೀತದಲ್ಲಿ ಆಸಕ್ತಿ. ಆರು ವರ್ಷದವಳಾಗಿರುವಾಗಲೇ ಈಕೆಯು ತಾನೂ ಸಂಗೀತ ಕಲಿಯಬೇಕೆಂದು ತಂದೆಯ ಬಳಿ ಹಠ ಹಿಡಿದಳು.

ಅದೇ ಸಮಯಕ್ಕೆ ಹೆಚ್.ವಿ. ವೆಂಕಟೇಶಯ್ಯ ಎನ್ನುವ ಸಂಗೀತ ವಿದ್ವಾಂಸರು ಗೋರೂರಿಗೆ ಬಂದರು. ಅವರದ್ದೊಂದು ಕಚೇರಿಯೂ ಅಲ್ಲಿ ನಡೆಯಿತು. ಅವರ ವಿದ್ವತ್ತು ಜಿ.ಎಸ್. ರಾಘವಾಚಾರ್ಯರನ್ನು ಆಕರ್ಷಿಸಿತು. ಅಂತೆಯೇ ಜಾಹ್ನವಿಯವರ ಸಂಗೀತಾಭ್ಯಾಸ ಅವರಲ್ಲಿ ಪ್ರಾರಂಭವಾಯಿತು.

ಆದರೆ ಸೂಕ್ಷ್ಮಗ್ರಹಣ ಶಕ್ತಿಯುಳ್ಳ ಜಾಹ್ನವಿಯವರಿಗೆ ಕಲಿಕೆಯ ದಾಹ ಹೆಚ್ಚಾಗಿತ್ತು. ಅಂತೆಯೇ ಇವರು ತಮ್ಮ ಸಾಧನೆಯ ಮಾರ್ಗದಲ್ಲಿ ಮುಂದುವರೆದರು. ಅದರ ಕಲಿಕೆಯಲ್ಲಿ ತಮ್ಮ ತನು ಮನಗಳನ್ನು ಅರ್ಪಿಸಿದರು. ಪ್ರೈಮರಿ, ಮಿಡಲ್‌ಸ್ಕೂಲ್ ವಿದ್ಯಾಭ್ಯಾಸವನ್ನು ಗೋರೂರಿನಲ್ಲಿಯೇ ಮುಗಿಸಿದ ಇವರು, ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಹಾಸನದಲ್ಲಿ ಮುಂದುವರಿಸಿದರು.

ತಮ್ಮ 12ನೇ ವಯಸ್ಸಿನಲ್ಲಿಯೇ ಒಂದು ಗಣೇಶೋತ್ಸವದಲ್ಲಿ ಕಚೇರಿ ನಡೆಸಿ, ತಮ್ಮ ಸಂಗೀತ ಜೀವನಕ್ಕೆ 'ಶ್ರೀ ಗಣೇಶ' ಹಾಡಿದರು. ಇದು ಜಾಹ್ನವಿಯವರಲ್ಲಿ ಆತ್ಮಸ್ಥೈರ್ಯವನ್ನು ಹೆಚ್ಚಿಸಿತು. ಎಸ್.ಎಸ್.ಎಲ್.ಸಿ. ಮುಗಿಯುವಷ್ಟು ಹೊತ್ತಿಗೆ ಕರ್ನಾಟಕ ಸಂಗೀತದ ಇಲಾಖಾ ಪರೀಕ್ಷೆಯ ಸೀನಿಯರ್‌ನಲ್ಲಿ ಉತ್ತೀರ್ಣರಾಗಿದ್ದರು. ಜ್ಯೂನಿಯರ್‌ನಲ್ಲೂ ರ‍್ಯಾಂಕ್, ಅಂತೆಯೇ ಸೀನಿಯರ್‌ನಲ್ಲೂ ರ‍್ಯಾಂಕ್ ಗಳಿಸಿದ್ದರು.

ಶಕ್ತಿ ಸ್ಕೂಲ್ ಆಫ್ ಡ್ಯಾನ್ಸ್ ಅಂಡ್ ಮ್ಯೂಸಿಕ್‌ನ ಸಹ ಕಲಾವಿದರೊಂದಿಗೆ



ಅಭಿನಯ ತರಗತಿಯ ಹಾಡುಗಾರರಾಗಿ ಕುಳಿತಿರುವವರು (ಎಡದಿಂದ ಬಲಕ್ಕೆ) ವಸಂತಲಕ್ಷ್ಮಿ, ಕಮಲಾದೇವಿ ಚಟ್ಟೋಪಾಧ್ಯಾಯ, ಜಾಹ್ನವಿ ಜಯಪ್ರಕಾಶ್, ಡಾ।। ವೆಂಕಟಲಕ್ಷಮ್ಮ, ಲಲಿತಾ ಶ್ರೀನಿವಾಸನ್, ರಾಧಾ ಶ್ರೀಧರ್





ಮುಂದೆ?

ಸಂಗೀತವನ್ನು ವಿಶೇಷ ವಿಷಯವನ್ನಾಗಿ ಆರಿಸಿಕೊಂಡು ವಿದ್ಯಾಭ್ಯಾಸ ಮುಂದುವರಿಸುವುದಾಗಿ ಜಾಹ್ನವಿಯವರು ಹಠ ಹಿಡಿದರು. ತಂದೆಯವರು ಇದಕ್ಕೆ ಒಪ್ಪಲೇ ಬೇಕಾಯಿತು. ಈ ವಿದ್ಯಾಭ್ಯಾಸದ ಅನುಕೂಲವಿದ್ದುದು ಮೈಸೂರಿನಲ್ಲಿ. ಆದರಿಂದ ಮೈಸೂರಿಗೆ ಹೋಗಬೇಕಾಯಿತು. ಪಿ.ಯು.ಸಿ. ನಂತರ ಸಂಗೀತದಲ್ಲಿ ಬಿ.ಎ. ಶಿಕ್ಷಣವನ್ನು ಮುಂದುವರಿಸಿದರು.

ಬಾಲ್ಯದಿಂದಲೂ ನಾಟಕಗಳೆಂದರೆ ಜಾಹ್ನವಿಯವರಿಗೆ ತುಂಬಾ ಇಷ್ಟ. ಹೀಗಾಗಿ ಶಾಲಾ ಮಟ್ಟದಲ್ಲಿ ಕೆಲವೊಂದು ನಾಟಕಗಳಲ್ಲಿ ಭಾಗವಹಿಸಿದ್ದರು. ಈಗ ಅದರ ಕ್ರಮ ಬದ್ಧ, ಶಾಸ್ತ್ರೀಯ ಅಭ್ಯಾಸಕ್ಕೂ ಕಾಲ ಕೂಡಿ ಬಂದಿತು. ಹೀಗಾಗಿ ಬಿ.ಎ. ನಲ್ಲಿ ಸಂಗೀತ ಮೇಜರ್, ಡ್ರಮಾಟಿಕ್ಸ್ ಮೈನರ್ ಆಗಿ ತೆಗೆದುಕೊಂಡು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಅನೇಕ ನಾಟಕಗಳಲ್ಲಿ ಅಭಿನಯಿಸಿದ ಇವರು ಎರಡನೇ ಬಿ.ಎ. ನಲ್ಲಿದ್ದಾಗ ಬಿ.ವಿ. ಕಾರಂತ ಹಾಗೂ ಗಿರೀಶ ಕಾರ್ನಾಡರೊಂದಿಗೆ ವಸಂತಸೇನೆಯಾಗಿ 'ವಸಂತಸೇನೆ' ನಾಟಕದಲ್ಲಿನ ಅಭಿನಯ ಚಿರಸ್ಮರಣೀಯವೆಂದು ಈಗಲೂ ನೆನೆಸುತ್ತಾರೆ. ಇದೇ ರೀತಿಯಲ್ಲಿ 'ಕರ್ಣ' ನಾಟಕದಲ್ಲಿ ಈಕೆ ಅಭಿನಯಿಸಿದ ಕೃಷ್ಣನ ಪಾತ್ರವು ಅಪಾರ ಮೆಚ್ಚುಗೆ ಗಳಿಸಿತು.

1975 ರಲ್ಲಿ ಬಿ.ಎ.ನಲ್ಲಿ ಈಕೆ ಉತ್ತೀರ್ಣರಾದರು. ಸಂಗೀತ ಮತ್ತು ನಾಟಕ ಎರಡರಲ್ಲೂ ವಿಶ್ವ ವಿದ್ಯಾಲಯದ ಚಿನ್ನದ ಪದಕ ಗಳಿಸಿದರು. ಎಂ.ಎ.(ಸಂಗೀತ) ಯನ್ನು ಮುಂದುವರಿಸಲು ಈಕೆ ತೀರ್ಮಾನಿಸಿದರು. ಆದರೆ ಅದುವರೆವಿಗೂ ಬಹಳ ದಿನಗಳಿಂದ ಮನೆಯವರು ಕಾಯ್ದಿರಿಸಿಕೊಂಡಿದ್ದ ಶುಭ ವಿವಾಹ ಕಾರ್ಯಕ್ರಮವೂ ಮುಗಿಯಿತು. ಬಿ.ಇ. ಎಲೆಕ್ಟ್ರಿಕಲ್ ಎಂಜಿನಿಯರಿಂಗ್‌ನ ಜಯಪ್ರಕಾಶ್‌ರೊಂದಿಗೆ ಇವರ ವಿವಾಹವು ನೆರವೇರಿತು. ಆದರೆ ಈಕೆಯ ವಿಚಾರದಲ್ಲಿ 'ವಿವಾಹೇ ವಿದ್ಯ ನಾಶಾಯ' ಆಗಲಿಲ್ಲ. ಮೈಸೂರಿನಲ್ಲಿಯೇ ಈಕೆಯು ತಮ್ಮ ಸ್ನಾತಕೋತ್ತರ ವಿದ್ಯಾಭ್ಯಾಸವನ್ನು ಮುಂದುವರಿಸಿದರು.

1977 ರಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ಎಂ.ಎ. ನಲ್ಲಿ ಪ್ರಪ್ರಥಮರಾಗಿದ್ದಕ್ಕಾಗಿ ಹಾಗೂ ಫ್ಯಾಕಲ್ಟಿಯಲ್ಲಿ ಪ್ರಪ್ರಥಮರಾಗಿದ್ದಕ್ಕಾಗಿ ಹೀಗೆ ಎರಡು ಚಿನ್ನದ ಪದಕಗಳನ್ನು ಇವರು ಪಡೆದರು.

ಹೀಗೆ ಸ್ನಾತಕೋತ್ತರ ಪದವಿಯನ್ನು ಪಡೆಯುತ್ತಿದ್ದಂತೆಯೇ ಭಾರತ ಸರ್ಕಾರದ ಎರಡು ವರ್ಷಗಳ ಸಾಂಸ್ಕೃತಿಕ (ಸಂಗೀತದ) ಶಿಷ್ಯವೇತನ ದೊರೆಯಿತು. ಗಾನ ಕಲಾ ಭೂಷಣ ಟಿ. ಪುಟ್ಟಸ್ವಾಮಯ್ಯನವರ ಬಳಿ ಎರಡು ವರ್ಷಗಳ ಉನ್ನತ ವ್ಯಾಸಂಗ ಮುಂದುವರಿಯಿತು. ಈ ಎಲ್ಲ ಶಿಕ್ಷಣಗಳು ಜಾಹ್ನವಿಯವರನ್ನು ಪುಟವಿಟ್ಟ ಚಿನ್ನದಂತೆ ಮಾಡಿದುವು. ಪರಿಣಾಮ ನಮಗೆ ಅನುಪಮ ವಿದುಷಿ ದೊರೆತರು.



ಮಲ್ಲಾಡಿಹಳ್ಳಿ ಸ್ವಾಮಿಗಳಿಂದ ಸನ್ಮಾನಿತರಾದಾಗ

ಶಂಕರಯ್ಯ ಹಾಲ್‌ನಲ್ಲಿ ಕರ್ನಾಟಕ ಗಾನಕ್ಕೂ ಪರಿಷತ್ತಿನ ಆಶ್ರಯದಲ್ಲಿ ಕೆ. ವೆಂಕಟಲಕ್ಷಮ್ಮನವರಿಂದ 1971 ರಲ್ಲಿ ಅಭಿನಯ ಡೆಮಾನ್‌ಸ್ಟ್ರೇಷನ್ ಪ್ರೋಗ್ರಾಂ ನಡೆಯಿತು. ಈ ಸಂಬಂಧದಲ್ಲಿ ನಾಟ್ಯಾಭಿನಯಕ್ಕೆ ಜಾಹ್ನವಿ ಹಾಡಿದರು. ಕಾರ್ಯಕ್ರಮವು ತುಂಬಾ ಅಚ್ಚುಕಟ್ಟಾಗಿ, ಸೊಗಸಾಗಿ ಮೂಡಿ ಬಂದಿತು. ಅಲ್ಲಿಂದೀಚೆಗೆ ನೃತ್ಯ ಕಾರ್ಯಕ್ರಮಗಳಿಗೆ ಹಾಡಲು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಅನೇಕ ನೃತ್ಯ ಕಾರ್ಯಕ್ರಮಗಳಿಗೆ ಹಾಡಿದ್ದಾರೆ.



ಪ್ರಸಿದ್ಧ ನೃತ್ಯ ಗುರುಗಳನೇಕರು ಇವರ ಹಾಡುಗಾರಿಕೆಯನ್ನು ಇಷ್ಟ ಪಡುತ್ತಿದ್ದರು. ಕಾರಣ ರಿಹರ್ಸಲ್‌ನಲ್ಲಿ ತುಂಬಾ ಚೆನ್ನಾಗಿ ಸಹಕರಿಸುತ್ತಿದ್ದರಲ್ಲದೆ; ಹಿರಿಯರು, ಕಿರಿಯರು ಎನ್ನದೆ ಎಲ್ಲರ ಸಲಹೆ, ಸೂಚನೆಗಳನ್ನೂ ಸ್ವೀಕರಿಸುತ್ತಿದ್ದರು. ನೃತ್ಯಾಂಶಗಳಲ್ಲಿ ಏನಾದರೂ ಲೋಪ ದೋಷಗಳು ಕಂಡು ಬಂದರೆ ಅವನ್ನು ತಿದ್ದಿ ಸಹಕರಿಸುತ್ತಿದ್ದರು. ನೃತ್ಯ ಗುರುಗಳು ಯಾವ ಪರಿಣಾಮವನ್ನು ನಿರೀಕ್ಷಿಸುವರೋ, ಅದು ಕೈಗೂಡುವಂತೆ ಮಾಡುತ್ತಿದ್ದರು. ಹಾಡುಗಾರಿಕೆಯಲ್ಲಿ ಅವರುಗಳು ಯಾವುದೇ ಬದಲಾವಣೆ, ಅಭಿವೃದ್ಧಿಯನ್ನು ಸೂಚಿಸುತ್ತಿದ್ದರೂ ಸ್ವೀಕರಿಸುತ್ತಿದ್ದರು. ಬಹಳ ಬೇಗ ಸಾಹಿತ್ಯ ರಾಗ, ತಾಳಗಳನ್ನು ಗ್ರಹಿಸಿ, ರಿಹರ್ಸಲ್‌ಗೆ ತಪ್ಪದೆ ಹಾಜರಾಗುತ್ತಿದ್ದರು. ಯಾವುದೇ ಹತ್ತಿರ, ದೂರದ ಊರುಗಳಿಗೆ ಹೋಗಬೇಕೆಂದರೂ ಗೊಣಗದೆ, ಬೇಸರಿಸದೆ ಸಹಕಾರ ನೀಡುತ್ತಿದ್ದರು. ನೃತ್ಯ ಪ್ರದರ್ಶನದಲ್ಲಿ ಅತ್ಯುತ್ತಮವಾಗಿ ಹಾಡಿ, ಪ್ರದರ್ಶನಕ್ಕೆ ಕಳೆ ಕಟ್ಟುವಂತೆ ಮಾಡುತ್ತಿದ್ದರು.

ಇದರಿಂದ ಎಲ್ಲ ನೃತ್ಯಗಾರರಿಗೂ, ನೃತ್ಯ ಕಾರ್ಯಕ್ರಮಗಳಿಗೂ ಜಾಹ್ನವಿಯವರೇ ಬೇಕಾಗುತ್ತಿತ್ತು. ಹೀಗಾಗಿ ಜಾಹ್ನವಿಯವರು ಕರ್ನಾಟಕ ನೃತ್ಯ ಜಗತ್ತಿನ ಅವಿಭಾಜ್ಯ ಅಂಗವಾದರು.

ಹೀಗೆಂದ ಕೂಡಲೇ ಇವರು ಸಂಗೀತ ಕಚೇರಿ ಕಾರ್ಯಕ್ರಮಗಳನ್ನು ಬಿಟ್ಟು ಬಿಟ್ಟರು ಎಂಬರ್ಥವಲ್ಲ. ಸಮಯ ದೊರೆತಾಗಲೆಲ್ಲಾ ಸಂಗೀತ ಕಚೇರಿಗಳನ್ನು ನೀಡಿದ್ದಾರೆ. ಅಂತೆಯೇ ಹೆಸರಾಂತ

ಉತ್ಸವಗಳು, ಸಮ್ಮೇಳನಗಳಲ್ಲಿ ಇವರ ಕಾರ್ಯ ಕ್ರಮಗಳು ನಡೆಟವೆ.

ನೃತ್ಯ ಕಾರ್ಯಕ್ರಮಗಳಿಗ ಹಾಡುಗಾರಿಕೆ, ಸಹಕಾರ ನೀಡುವುದರೊಂದಿಗೆ ಅನೇಕ ನೃತ್ಯಾಂಶ ಗಳಿಗೆ ಸಂಗೀತ ದಿಗ್ದರ್ಶನ ಮಾಡಿ, ನೃತ್ಯ ಸಂಯೋಜನೆಗಳನ್ನು ಮಾಡಿ ಕೊಟ್ಟಿದ್ದಾರೆ. ಗುರು ಪದ್ಮಿನಿ ರಾಮಚಂದ್ರನ್‌ರವರ ಅನೇಕ ನೃತ್ಯ ನಾಟಕಗಳಿಗೆ ಇವರದ್ದೇ ಸಂಗೀತ ದಿಗ್ದರ್ಶನ ಹಾಗೂ ನೃತ್ಯ ಸಂಯೋಜನೆ. ಗೋವಿನ ಕಥೆ, ರಾಮಾಯಣ, ಮಹಾಭಾರತ, ಶಂಕರಾ ಚಾರ್ಯರ ಭಜಗೋವಿಂದಂ ಹಾಗೂ ಮೋಹ ಮುದ್ಗರ ಇತ್ಯಾದಿಯವುಗಳು ಇವುಗಳಲ್ಲಿ ಮುಖ್ಯ ವಾದುವು.

ಯು.ಎಸ್.ಎ.ನಲ್ಲಿನ ಶಕ್ತಿ ಫೌಂಡೇಷನ್ನಿನ ಶ್ರೀಮತಿ ವಿಜಿ ಪ್ರಕಾಶ್‌ರವರಿಗೆ ಜಾಹ್ನವಿಯವರ ಕಲೆಯ ಬಗ್ಗ ತಿಳಿಯಿತು. ಅಂತೆಯೇ ಕಲಾವಿದ ಯನ್ನಾಗಿ ಜಾಹ್ನವಿಯವರನ್ನು ಆಹ್ವಾನಿಸಿದರು.

ಈ ಶಕ್ತಿ ಫೌಂಡೇಷನ್ನಿಗೆ ಜಗದ್ವಿಖ್ಯಾತ, ಪಾಶ್ಚಾತ್ಯ ಸಂಗೀತಜ್ಞರಾದ ಜುಬಿನ್ ಮೆಹ್ತಾರವರ ತಂದೆಯವರಾದ ಮಲ್ಲಿ ಮೆಹ್ತಾರವರು ಉಪಾಧ್ಯಕ್ಷ ರಾಗಿಯೂ, ಖ್ಯಾತ ಸಿತಾರಾ ಪಟು ರವಿ ಶಂಕರ್‌ರವರು ಅಧ್ಯಕ್ಷರಾಗಿಯೂ ಕಾರ್ಯ ನಿರ್ವ ಹಿಸುತ್ತಿದ್ದಾರೆ.

ಇಂತಹ ಪ್ರತಿಷ್ಠಿತ ಸಂಸ್ಥೆಯಿಂದ ಬಂದ ಆಹ್ವಾನ ವನ್ನು ಜಾಹ್ನವಿ ಸ್ವೀಕರಿಸಿದರು. ಇದರ ಪ್ರಕಾರ 1986 ರಲ್ಲಿ ಲಾಸ್ ಏಂಜಲೀಸ್ ನಲ್ಲಿ ನಡೆದ ಫೆಸ್ಟಿವಲ್ ಆಫ್ ಇಂಡಿಯಾದಲ್ಲಿ ಭಾಗ ವಹಿಸಿದರು. ನಂತರ ಯು.ಎಸ್.ಎ.ನ ಎಲ್ಲ ರಾಜ್ಯ ಗಳಲ್ಲೂ ಫೌಂಡೇಶನಿನಲ್ಲೇ ಈಕೆ ನಿರ್ದೇಶಿಸಿದ 'ಗೋವಿನ ಕಥೆ'ಯನ್ನು ಮಾಡಿದ್ದರು. ಇದು ಅನೇಕರನ್ನು ಆಕರ್ಷಿಸಿತು. ಒಂದು ದಿನವಂತೂ ಇದರ ಮೂರು ಪ್ರದರ್ಶನಗಳಾದದ್ದು ಇದರ ಜನಪ್ರಿಯತೆಯನ್ನು ತೋರಿಸುತ್ತದೆ. ಈ ಫೌಂಡೇಷನ್ನಿನ ಆಶ್ರಯದಲ್ಲಿಯೇ ಕೆನಡಾದಲ್ಲೂ ಇವರು ಪ್ರವಾಸ ಕೈಗೊಂಡರು.

ಐದು ತಿಂಗಳ ಈ ಪ್ರವಾಸದಲ್ಲಿ ನೃತ್ಯ ಕಾರ್ಯಕ್ರಮಗಳಿಗೆ ಹಾಡಿದ್ದೇ ಅಲ್ಲದೆ ಸಂಗೀತ ಕಚೇರಿಗಳನ್ನೂ ನೀಡಿದರು.

ಮತ್ತೆ ಮಾರ್ಚ್ 1987 ರಲ್ಲಿ ನೃತ್ಯ ಗುರು ಪದ್ಮಿನಿ ರಾಮಚಂದ್ರನ್‌ರವರೊಂದಿಗೆ ಸಿಂಗಾ ಪೂರ್ ಪ್ರವಾಸವನ್ನು ಕೈಗೊಂಡರು. ಅಲ್ಲಿ ಟಿ.ವಿ.ಯಲ್ಲಿ ಕು|| ಕನ್ಯಾ ರಾಮಚಂದ್ರನ್‌ರವರ ನೃತ್ಯ ಕಾರ್ಯಕ್ರಮಕ್ಕೆ ಹಾಡಿದರು. ಅಂತೆಯೇ ಸಂಗೀತ ಕಚೇರಿಗಳನ್ನು ನೀಡಿ, ರಸಿಕರ ಮನ ಗೆದ್ದರು.

ಕಳೆದ ವರ್ಷದ ಅಕ್ಟೋಬರ್‌ನಲ್ಲಿ ಮತ್ತೆ ಅಮೇರಿಕಾದ ಶಕ್ತಿ ಫೌಂಡೇಷನ್ನಿನ ಆಹ್ವಾನದಂತೆ ಜಾಹ್ನವಿಯವರು ಅಮೇರಿಕಾಕ್ಕೆ ಹೋಗಿ ಬಂದರು. ಮತ್ತೆ ಅಮೇರಿಕಾದ ಶಕ್ತಿ ಫೌಂಡೇಷನ್ ನವರಿಂದ ಆಹ್ವಾನ ಬಂದಿತು. ಆದರೆ ಈ ಸಲದ ಆಹ್ವಾನ ಅದರ ನೃತ್ಯ ಪ್ರದರ್ಶನಗಳ ಶಾಶ್ವತ ಹಾಡು ಗಾರರಾಗಿ. ಎರಡೂವರೆ ವರ್ಷಗಳಿಂದಲೂ ಈಕೆಯು ಲಾಸ್ ಏಂಜಲೀಸ್ ಶಕ್ತಿ ಸ್ಕೂಲ್ ಆಫ್ ಭರತನಾಟ್ಯಂನ ಸಂಗೀತ ವಿದುಷಿಯಾಗಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಸಂಗೀತ ತರಗತಿಗಳನ್ನೂ ಪ್ರಾರಂಭಿಸಿ, ಮುಂದುವರಿಸುತ್ತಿದ್ದಾರೆ. ಈಚೆಗೆಷ್ಟೇ ಕೆಲವು ತಿಂಗಳುಗಳವರೆಗೆ ಇರಲು ಬೆಂಗಳೂರಿಗೆ ಬಂದಿದ್ದರು.

ಅಲ್ಲಿ ಈಕೆ ನೀಡುವ ಪಾಠ ಪ್ರವಚನಗಳು ಅತ್ಯಂತ ಮಹತ್ವದ್ದಾಗಿದೆ. ರವಿ ಶಂಕರ್‌ರವರ ಪ್ರಾಧಾನ್ಯತೆಯ ಪರಿಣಾಮವಾಗಿ ಹಿಂದೂಸ್ತಾನಿ ಸಂಗೀತವಷ್ಟೇ ಭಾರತೀಯ ಸಂಗೀತ ಎನ್ನುವ ಭಾವನೆ ಬಂದಿತ್ತು. ಆದರೆ ಜಾಹ್ನವಿಯವರ ಪ್ರವೇಶದ ನಂತರ ಕರ್ನಾಟಕ ಸಂಗೀತವು ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಅದರಲ್ಲೂ ಪಾಶ್ಚಿಮಾತ್ಯ ಯು.ಎಸ್.ಎ. ನಲ್ಲಿ ಈ ಬದಲಾವಣೆ ಸ್ಪಷ್ಟವಾಗಿ ಕಂಡು ಬರುತ್ತಿದೆ. ಅಮೇರಿಕನ್ನರಲ್ಲಿ ಕರ್ನಾಟಕ ಸಂಗೀತದ ಬಗ್ಗೆ ಒಂದು ವಿಶೇಷ ಆಕರ್ಷಣೆ ಕಂಡು ಬರುತ್ತಿದೆ.

ಡಾಕ್ಟರುಗಳು, ಎಂಜಿನಿಯರುಗಳು, ಸಮಾಜದ ಉನ್ನತ ವರ್ಗದ ನಾಗರಿಕರು ಜಾಹ್ನವಿಯವರ ವಿದ್ಯಾರ್ಥಿಗಳಾಗಿ ಕರ್ನಾಟಕ ಸಂಗೀತವನ್ನು ಕಲಿತಿರುವರು, ಕಲಿಯತೊಡಗಿದ್ದಾರೆ. ಅಲ್ಲಿನ ವಿದ್ಯಾರ್ಥಿಗಳಲ್ಲಿ ಈ ಕಲೆಯನ್ನು ಅಭ್ಯಸಿಸಬೇಕು ಎನ್ನುವ ಶ್ರದ್ಧಾ ಭಕ್ತಿಗಳು ಇವೆ.

ಇತ್ತೀಚೆಗಷ್ಟೇ ಅಮೇರಿಕಾದ ಹರಿದಾಸ ತರಂಗಿಣಿಯ ಆಶ್ರಯದಲ್ಲಿ 'ಮೀರಾ' ನೃತ್ಯ ನಾಟಕ ಪ್ರದರ್ಶಿತವಾಯಿತು. ಇದರಲ್ಲಿ ಕರ್ನಾಟಕ ಸಂಗೀತ ವಿಭಾಗದ ದಿಗ್ದರ್ಶನ ಹಾಗೂ ನೃತ್ಯ ಸಂಯೋಜನೆಗಳು ಜಾಹ್ನವಿಯವ ರದ್ದೇ ಆಗಿತ್ತು.

—ಚಿತ್ರಗಳು: ಜಿ. ಶ್ರೀನಿವಾಸ ಮೂರ್ತಿ

**ಆಯ್ಕೆಯಾದ ಕಥೆಗಳಿಗೆ ಚಿತ್ರ ಹಾಕಿ ಪ್ರಕಟಿಸುವುದು ವಾಡಿಕೆ. ಈಗ ಲೇಖಕಿ ಯರಿಗೆ ಇಲ್ಲಿ ಚಿತ್ರವೊಂದನ್ನು ಕೊಟ್ಟಿದ್ದೇವೆ. ಈ ಚಿತ್ರಕ್ಕೆ ಸೂಕ್ತ ಕಥೆಯನ್ನು . ಬರೆದು ಕಳಿಸಲು ಈ ಮೂಲಕ ಕೋರುತ್ತಿದ್ದೇವೆ. ಕಥೆ ಎರಡು ಫೂಲ್‌ಸ್ಕೇಪ್ ಹಾಳೆಯ ಒಳಗಿರ ಬೇಕಾದುದು ಅಗತ್ಯ. ಆಯ್ದ ಮೂರು ಕಥೆಗಳನ್ನು ಪ್ರಕಟಿಸಲಾಗುವುದು. ಪ್ರಕಟಿತ ಪ್ರತಿಯೊಂದು ಕಥೆಗೂ 50/– ರೂ. ಸಂಭಾವನೆ ಇದೆ. ಕಥೆಗಳನ್ನು ಹಿಂದಿರುಗಿಸ ಲಾಗುವುದಿಲ್ಲವಾದುದರಿಂದ ಅಂಚೆ ಚೀಟಿ ಗಳನ್ನು ಅಂಟಿಸಿ ಕಳಿಸಬಾರದಾಗಿ ಕೋರ ಲಾಗಿದೆ.**

**ಕಥೆಗಳು ಬಂದು ತಲುಪುವ ಕೊನೆಯ ದಿನಾಂಕ 20- 9 –1992.**



# ಹುಟ್ಟಿದ ಹಬ್ಬ

ವಿಖ್ಯಾತ ಹೆಗಡೆ : 14–9–1991
ತಾಯಿ : ಶಶಿಕಲಾ ವಿ. ಹೆಗಡೆ, ಬೆಂಗಳೂರು





ಚಿ। ಶ್ರೀನಿಧಿ : 12–9–1991
ತಾಯಿ : ಸುಮ, ಬೆಂಗಳೂರು



ಅನಿತಾ ಆರ್. ರಾವ್ : 4–9–1991
ತಾಯಿ : ಸುಮಾ ರಾಮಕೃಷ್ಣರಾವ್, ಮೈಸೂರು

ನಂದಕುಮಾರ, 6–9–1991
ತಾಯಿ : ಮೀನಾ ಸುಧೀಂದ್ರ, ಲಕ್ಷ್ಮೇಶ್ವರ





ನಮಿತ್ ಜೈನ್ : 14–9–1991
ತಾಯಿ : ರೇಖಾ ಬಿ.ಜೆ.ಎಸ್. ಜೈನ್, ಮೈಸೂರು



ರಿಹಾನ್ : 12–9–1991
ತಾಯಿ : ಅಲಿಷಾ ಸುಭಾಷ್, ಬಳ್ಳಾರಿ



ಸ್ವಾತಿ : 2–9–1991
ತಾಯಿ : ಉಷಾ ರಘು, ಬೆಂಗಳೂರು



ಸುಳ್ಯದ ಜಯನಗರ ಜ್ಯೋತಿ ಯುವತಿ ಮಂಡಳಿಯವರು ಇತ್ತೀಚೆಗೆ ನಡೆದ ರಾಜ್ಯ ಮಟ್ಟದ ಯುವಜನ ಮೇಳದಲ್ಲಿ ಕೋಲಾಟದಲ್ಲಿ ಪ್ರಥಮ ಬಹುಮಾನ ಗಳಿಸಿದರು.

ಅರಸೀಕೆರೆ ಸೀತಾ ಮಹಿಳಾ ಸಂಘದ ಆಶ್ರಯದಲ್ಲಿ ಇತ್ತೀಚೆಗೆ ಫ್ಯಾಬ್ರಿಕ್ ಪೇಯಿಂಟಿಂಗ್ ತರಗತಿಯನ್ನು ಶ್ರೀಮತಿ ಉಮಾ ಶಂಕರ್ ನಡೆಸಿಕೊಟ್ಟರು.



ದಕ್ಷಿಣ ಕನ್ನಡ ಜಿಲ್ಲೆಯ ಸಸಿಹಿತ್ಲು ಗ್ರಾಮದ ಯುವತಿ ಮಂಡಲದವರು ಇತ್ತೀಚೆಗೆ ಪುತ್ತೂರಿನಲ್ಲಿ ನಡೆದ ರಾಜ್ಯಮಟ್ಟದ ಯುವಜನ ಮೇಳದಲ್ಲಿ ಪ್ರಥಮ ಸ್ಥಾನ ಗಳಿಸಿದರು.



ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಕದ್ರಾ ಕಾಲೊನಿಯ ಮಹಿಳಾ ಬಳಗ ಇತ್ತೀಚ್ಗೆ ತನ್ನ ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಿತು.






ಹಾವೇರಿ ಇನ್ನರ್ ವ್ಹೀಲ್ ಕ್ಲಬ್‌ಗೆ 317ನೇ ಡಿಸ್ಟ್ರಿಕ್ಟ್‌ನ ಚೇರ್ಮನ್‌ರಾದ ಆ್ಯನೆ ಮಾಣಿಕ್ ಜಾಧವ್‌ರವರು ಇತ್ತೀಚೆಗೆ ಭೇಟಿ ನೀಡಿದರು.



ಹಾವೇರಿ ಇನ್ನರ್ ವ್ಹೀಲ್ ಕ್ಲಬ್‌ನ 1992–93ರ ಅಧ್ಯಕ್ಷಿಣಿಯಾಗಿ ರೋಟರಿ ಅನ್ ಶ್ರೀಮತಿ ದಾಕ್ಷಾಯಿಣಿ ಗಾಣಿಗೇರ ಅಧಿಕಾರ ಸ್ವೀಕರಿಸಿದರು.



ದಿ. 22–7–1992ರಂದು ಬೆಂಗಳೂರಿನ ವಿಮಾನಪುರದ ಅಶ್ವಿನಿ ಮಹಿಳಾ ಸಮಾಜವು ತನ್ನ 10ನೇ ವಾರ್ಷಿಕೋತ್ಸವವನ್ನು ಆಚರಿಸಿತು.



ನಂಜನಗೂಡಿನ ಮಹಿಳಾ ಸಮಾಜವು ಚಿನ್ನದ ಹಬ್ಬದ ಸವಿನೆನಪಿಗಾಗಿ ಇತ್ತೀಚೆಗೆ ಹೊಸ ಕಟ್ಟಡವನ್ನು ಉದ್ಘಾಟಿಸಿತು. ಜನಪ್ರಿಯ ಲೇಖಕಿ ಆರ್ಯಾಂಬ ಪಟ್ಟಾಭಿಯವರು ಉದ್ಘಾಟನೆಯನ್ನು ನೆರವೇರಿಸಿದರು.

ಸುರತ್ಕಲ್ ಜ್ಯೂನಿಯರ್ ಚೇಂಬರ್ ಜೇಸಿರೆಟ್ಸ್ ವಿಭಾಗದವರು ಏರ್ಪಡಿಸಿದ್ದ ಇನ್‌ಸೆಸ್–92' ವಿಮೆ ಮತ್ತು ಸ್ವ–ಉದ್ಯೋಗ ಯೋಜನೆ ವಿಚಾರ ಸಂಕಿರಣ ನಡೆಸಿದರು.




ಜೋಗದ ಕೆ.ಇ.ಬಿ. ಮಹಿಳಾ ಮಂಡಳಿಯ ಸದಸ್ಯೆಯರಿಗೆ ಶ್ರೀಮತಿ ಮಹಾಲಕ್ಷ್ಮಿ ಶೆಟ್ಟಿ ಇವರು ಸೇಬಿನ ದಾರ ಹಾಗೂ ತೆಂಗಿನ ಕತ್ತದ ಹಗ್ಗದಿಂದ ಕರಕುಶಲ ಸಾಮಗ್ರಿ ತಯಾರಿಸುವ ಮತ್ತು ಹಲವು ರೀತಿಯ ನೇಯ್ಗೆ ತರಬೇತಿ ನೀಡಿದರು.





ಇತ್ತೀಚೆಗೆ ಮೂಡಿಗೆರೆ ಸಮೀಪದ ಬೆಳಗೊಳದ ಸಮೀಪದ ಖಾದಿ ಮತ್ತು ಗ್ರಾಮೋದ್ಯೋಗ ಸಂಘದ ಆಶ್ರಯದಲ್ಲಿ ಅಗರಬತ್ತಿ ಉತ್ಪಾದನಾ ಶಿಕ್ಷಣ ಶಿಬಿರವನ್ನು ನಡೆಸಲಾಯಿತು.



ಸುರತ್ಕಲ್ ಜ್ಯೂನಿಯರ್ ಚೇಂಬರ್‌ನ (ಜೇಸಿರೆಟ್ ವಿಭಾಗ) ಜೇಸಿರೆಟ್‌ಯಮುನಾ ಪಿ. ರಾವ್ ಅವರು ಭಾರತೀಯ ಜ್ಯೂನಿಯರ್ ಚೇಂಬರ್ ವಲಯ 15ರ ಜೇಸಿರೆಟ್ ವಿಭಾಗಗಳ ಸಂಯೋಜಕಿಯಾಗಿ ಆಯ್ಕೆಯಾಗಿದ್ದಾರೆ.



ಬೆಂಗಳೂರಿನ ಹನುಮಂತ ನಗರದ 'ಸ್ಫೂರ್ತಿ' ಮಹಿಳಾ ಸಮಾಜದವರು ಇತ್ತೀಚೆಗೆ ಬಡ ಶಾಲಾ ಮಕ್ಕಳಿಗೆ ಶಾಲಾಪುಸ್ತಕ ವಿತರಣೆ ಮಾಡಿದರು.



ಜೋಗ ಜಲಪಾತ ಶರಾವತಿ ಮಹಿಳಾ ಸಮಾಜದಲ್ಲಿ ಮಹಿಳೆಯರಿಗಾಗಿ ಯೋಗಾಸನ ಶಿಬಿರ ನಡೆಸಲಾಯಿತು.



ಮೈಸೂರು ಜಯಲಕ್ಷ್ಮೀಪುರಂ ಮಹಿಳಾ ಮಂಡಲಿಯು ಇತ್ತೀಚೆಗೆ ಖ್ಯಾತ ಸಮಾಜ ಕಾರ್ಯಕರ್ತೆ ಡಾ। ಕಮಲಾ ರಾಮನ್‌ರ ಅಧ್ಯಕ್ಷತೆಯಲ್ಲಿ ತನ್ನ 3ನೇ ವಾರ್ಷಿಕೋತ್ಸವವನ್ನು ಆಚರಿಸಿತು.



ತುಮಕೂರಿನ ವಾಸವಿ ಮಹಿಳಾ ಮಂಡಲಿಯವರು ಇತ್ತೀಚೆಗೆ ತನ್ನ ಇಪ್ಪತ್ತನೆಯ ವಾರ್ಷಿಕೋತ್ಸವವನ್ನು ಆಚರಿಸಿತು.

ಧಾರಾವಾಹಿ

# ಸಪ್ತಸ್ವರ

—ಗೀತಾ ಸೀತಾರಾಮ್

ಇಂದು ಮಧ್ಯಾಹ್ನ ಊಟದ ಸಮಯದಲ್ಲಿ ಕವಿತಾ ಲೊಚಗುಟ್ಟಿದಳು. — "ಛೇ! ಪಾಪ! ಬದುಕು ಎಷ್ಟೆಲ್ಲಾ ಪರೀಕ್ಷೆ ಮಾಡುತ್ತೆ ಮನುಷ್ಯರನ್ನ ಅನ್ನೋದು ವಿಶ್ವಾಸರ ಜೀವನ ನೋಡಿದಾಗ ಅನ್ಸತ್ತೆ. ನೆನ್ನೆ ಅವರ ಟೇಬಲ್ ಬಳಿ ಲಂಚ್ ಅವರ್‌ನಲ್ಲಿ ಹೋಗಿದ್ದೆ ಯಾವುದೋ ಲೆಡ್ಜರ್ ನೋಡೋಕೇಂತ. ಸಣ್ಣದೊಂದು ಡಬ್ಬಿಯಲ್ಲಿ ಮೊಸರನ್ನ — ಉಪ್ಪಿನಕಾಯಿ ತಿನ್ನುತ್ತಿದ್ದರು. ನಾನು ತಡೆಯಲಾರದೆ ಕೇಳಿದೆ 'ಇಷ್ಟೆ ಇಷ್ಟು ಮೊಸರನ್ನ ತಂದಿದ್ದೀರಲ್ಲಾ ಸರ್, ಹೊಟ್ಟೆ ತುಂಬುತ್ತಾ?' ಅವರು ಒಂದು ಶುಷ್ಕ ನಗೆಯೊಂದಿಗೆ ನಿಟ್ಟುಸಿರು ಹೊರಚೆಲ್ಲಿ ಹೇಳಿದರು 'ಏನು ಮಾಡೋದು ಮೇಡಂ, ನಿತ್ಯ ಇದೇ ಮೊಸರನ್ನ ತಿನ್ನಬೇಕಲ್ಲ. ಆ ಬೇಜಾರಿಗೆ ಸ್ವಲ್ಪವೇ ತರುತ್ತೇನೆ. ನನಗೆ, ನನ್ನ ಮಗಳಿಗೆ ಈ ಸಪ್ಪೆ ಊಟ ಸುಮಾರು ವರ್ಷಗಳಿಂದ ರೂಢಿಯಾಗಿದೆಯಲ್ಲ. ಬ್ಯಾಂಕಿಗೆ ಬರುವ ಅವಸರದಲ್ಲಿ ನನಗೇನೂ ಮಾಡಲು ಆಗುವುದಿಲ್ಲ. ಬ್ರೇಕ್‌ಫಾಸ್ಟ್‌ಗೆ ಬ್ರೆಡ್—ಜಾಮ್ ಇದ್ದೇ ಇದೆ. ಊಟಕ್ಕೆ ಮೊಸರನ್ನ. ಸಂಜೆ ಬ್ಯಾಂಕಿನಿಂದ ಹಿಂತಿರುಗುವಾಗ ಯಾವ್ದಾದ್ರೂ ಹೋಟೇಲಿನಲ್ಲಿ ಇಬ್ಬರೂ ತಿಂಡಿ ತಿಂದು ಮನೆಗೆ ಹೋಗ್ತೀವಿ. ರಾತ್ರಿಗೊಂದು ಸಾರು—ಪಲ್ಯ ಮಾಡೋದು ಕಲಿತಿದ್ದೇನೆ. ಆದರೂ ಒಂದು ದಿನ ಉಪ್ಪು ಹೆಚ್ಚು, ಮತ್ತೊಂದು ದಿನ ಖಾರ ಹೆಚ್ಚು' ಅವರ ಮಾತಿನ ಹಿಂದಿದ್ದ ನೋವಿನ ಎಳೆ ನನ್ನ ಹೃದಯ ಚುಚ್ಚಿತು. 'ಇಷ್ಟೆಲ್ಲಾ ಪಾಡು ಪಡೋ ಬದಲು ಇನ್ನೊಂದು ಮದುವೆಯಾಗಬಾರದೆ ಸರ್? ವಿದ್ಯಾಳಿಗೂ ತಾಯಿಯ ಮಮತೆ ಸಿಕ್ಕುತ್ತೆ' ಎಂದೆ. ಅದಕ್ಕವರು 'ನಾನು ಮದುವೆ ಆಗ್ತೀನಿ ಅಂದ್ರೆ ನಮ್ಮ ನೆಂಟರಲ್ಲಿ ಬೇಕಾದಷ್ಟು ಜನ ಹೆಣ್ಣು ಕೊಡಲು ತಯಾರಾಗಿದ್ದಾರೆ. ಆದರೆ ನನ್ನ ಮಗುವಿಗೆ ನಿಜವಾದ ತಾಯಿಯಾಗುವ ಹೆಣ್ಣು ನನಗೆ ಸಿಗಬೇಕಲ್ಲಾ! ಬರುವವಳು ಸ್ವಾರ್ಥಿಯಾದರೆ ನನ್ನ ಬಾಳೂ ನರಕವಾಗುತ್ತೆ. ಅದಕ್ಕಿಂತ ಈಗಿನ ಪಾಡೇ ವಾಸಿ. ಅತ್ಯಲ್ಪಕಾಲವಾದರೂ ನನ್ನ ಹೆಂಡತಿ ಸುಧಾಳನ್ನು ಮರೆಯಲು ನನ್ನಿಂದ ಸಾಧ್ಯವಾಗಿಲ್ಲ. ನನ್ನನ್ನು ಅರ್ಥ ಮಾಡಿಕೊಳ್ಳುವ, ನನ್ನ ವಿದ್ಯಾಳನ್ನು ಅಕ್ಕರೆಯಿಂದ ನೋಡಿಕೊಳ್ಳುವ ಹೆಣ್ಣು ಸಿಕ್ಕಿದ್ದೇ ಆದರೆ ನಾನು ಖಂಡಿತಾ ಮದುವೆಯಾಗುತ್ತೇನೆ. ಆದರೆ ನನ್ನದೊಂದು ಪ್ರಬಲವಾದ ಆಸೆ. ನಾನು ಮರುಮದುವೆಯಾಗುವವಳು ಒಮ್ಮೆ ಮದುವೆಯಾದ ಹೆಣ್ಣಾಗಿರಬೇಕು ಎಂದು. ಅವಳೊಬ್ಬ ವಿಧವೆಯೇ ಆಗಲಿ, ವಿಚ್ಛೇದಿತಳೇ ಆಗಿರಲಿ, ಅನ್ಯ ಜಾತಿಯವಳೇ ಆಗಿರಲಿ ನನಗೆ ಅಭ್ಯಂತರವಿಲ್ಲ. ಆದರೆ ಮಾನವೀಯ ಗುಣಗಳುಳ್ಳ ಹೆಣ್ಣಾಗಿದ್ದರೆ ಸಾಕು'. 'ಸಾರಿ ಸರ್, ಏನೇನೋ ಕೇಳಿ ನಿಮ್ಮ ಮನಸ್ಸಿನ ಗಾಯಕ್ಕೆ ಉಪ್ಪು ಹಾಕಿದ ಹಾಗಾಯ್ತು. ನಿಮ್ಮ [illegible] ಎಂದು ಹಾಳ್ಮಾಡ್ಬಿಟ್ಟೆ' [illegible] ಅವರ ಕೋಣೆಯಿಂದ ಹೊರ ಬಂದೆ. ಆದರೂ ರಜನಿ, ನನ್ನ ಮನಸ್ಸೆಲ್ಲಾ ಅವರ ನಿಸ್ಸಹಾಯ ಪರಿಸ್ಥಿತಿಯನ್ನು ಕಂಡು ದುಃಖಿಸುತ್ತಿದೆ. ಮದುವೆಯಿಂದ ಎಷ್ಟೆಲ್ಲಾ ತೊಂದರೆಗಳು ನೋಡಿದೆಯಾ? ಈ ದುರಂತ ಮಾಲೆಯನ್ನು ಕೊರಳಿಗೆ ಹಾಕಿಕೊಳ್ಳುವುದಕ್ಕಿಂತ ನನ್ನ ಹಾಗಿರುವುದೇ ಮೇಲು. ಅಲ್ಲವಾ?" ಕವಿತಾ ನನಗೆಸೆದ ಸವಾಲು, ಪ್ರಶ್ನಾರ್ಥಕವಾಗಿ ನನ್ನೆದುರು ಈಗಲೂ ಸುಳಿಯುತ್ತಿದೆ.

ಮನೆಗೆ ಬಂದು ನನ್ನ ಕೋಣೆಯ ಆರಾಮ ಕುರ್ಚಿಯ ಮೇಲೆ ಕುಳಿತು ಕವಿತಾಳ ಮಾತನ್ನು ಮೆಲುಕು ಹಾಕಿದೆ. ತಾಯಿಯ ಮಮತೆಗಾಗಿ ಹಾತೊರೆಯುವ ವಿದ್ಯಾಳ ಮುಗ್ಧ ಮುಖ, ಪತ್ನಿ ವಿಯೋಗದಿಂದ ನಿರಾಸೆಯೇ ಮೂರ್ತಿವೆತ್ತಂತಿರುವ ವಿಶ್ವಾಸರ ನಿಟ್ಟುಸಿರು, ನನ್ನೆದುರು ಬಂದಂತಾಯ್ತು. ನನ್ನ ಬದುಕಿನಲ್ಲಿ ಕತ್ತಲೆಯೇ ತುಂಬಿಕೊಂಡಿದ್ದರೂ, ಮತ್ತೊಬ್ಬರ ಬದುಕಿನ ಅಂಧಕಾರವನ್ನು ಕಾಣ ಸಹಿಸದ ಮನಸ್ಸು ನನ್ನದು. ವಿಶ್ವಾಸರಿಗಾಗಿ, ವಿದ್ಯಾಳಿಗಾಗಿ ಇಷ್ಟೊಂದು ಪರಿತಪಿಸುವ ನಾನು, ಆ ತೆರವಾದ ಸ್ಥಾನವನ್ನು ತುಂಬಬಾರದೇಕೆ? ವಾರದ ಹಿಂದೆ ಜಗದೀಶ್‌ನೊಡನೆ ವಿಶ್ವಾಸ್ ಆಡಿದ ಮಾತುಗಳು ನನ್ನೆದೆಯ ಭಾವನೆಗಳನ್ನು ಬಡಿದೆಬ್ಬಿಸಿದುವು. ಇಂದು ಕವಿತಾಳ ಅನುಕಂಪ, ಅದನ್ನು ಮತ್ತಷ್ಟು ಮೇಲೆಬ್ಬಿಸಿತ್ತು. ಈ ವಿಚಾರ ನನ್ನ ಮೆದುಳಿನ ಮೇಲೆ 'ತಕಧಿಮಿ' ನಾಟ್ಯವಾಡಿದಾಗ ನಾನು ಸಚೇತನಳಾದೆ. ಸಹಸ್ರ ದೀಪಗಳು ಒಮ್ಮೆಗೇ ಹತ್ತಿಕೊಂಡು ನನ್ನೆದೆಯ ಕತ್ತಲನ್ನು ಹೊಡೆದೋಡಿಸಿದ ಅನುಭವವಾಯ್ತು ನನಗೆ. ಓಹ್! ಯಾಕಾಗಬಾರದು? ವಿಶ್ವಾಸರ ವಿಶ್ವಾಸ ನನ್ನ ಮೇಲೆ ಆಳವಾಗಿರುವಾಗ, ಅವರು ನನ್ನ ಅಂಧಕಾರಭರಿತ ಬಾಳುವೆಗೆ ಒಂದು ಅರ್ಥ ಕೊಡಲು ಮುಂದೆ ಬಂದಿರುವಾಗ, ನಾನು ನಿಷ್ಕ್ರಿಯಳಾಗಬಾರದು. ನನ್ನಂತಹ ಕಲುಷಿತ ಸ್ತ್ರೀಯನ್ನು ಪವಿತ್ರ ಗಂಗಾನದಿಗೆ ಹೋಲಿಸಿದ ವಿಶ್ವಾಸರ ಅಂತಃಕರಣ ಅದೆಷ್ಟು ಉದಾತ್ತ! ನಾನು ನೆನೆದದ್ದನ್ನು ತತ್‌ಕ್ಷಣ ಕಾರ್ಯರೂಪಕ್ಕೆ ತರುವವಳು. ಅಲೋಕನನ್ನು ಮದುವೆಯಾದದ್ದು, ಅವನಿಂದ ವಿಚ್ಛೇದನ ಪಡೆದದ್ದು ಎರಡೂ ಹೀಗೆಯೇ. ಇಂದೂ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ನಾಳೆಯೇ ವಿಶ್ವಾಸರಿಗೆ ನನ್ನ ಅಭಿಪ್ರಾಯ ತಿಳಿಸಿಬಿಡುತ್ತೇನೆ ಎಂದುಕೊಂಡಾಗ ಮನಸ್ಸೆಷ್ಟೋ ಹಗುರವಾಯಿತು.

**ಇಲ್ಲಿಯವರೆಗೆ....**

ಅಂಕೆಗೆ ಸಿಕ್ಕದ ಹಕ್ಕಿಯಂತೆ ಇದ್ದ ಮೇನಕಾ ರಾಕೇಶ್‌ನ ಸಂಪರ್ಕಕ್ಕೆ ಬಂದಂದಿನಿಂದ ಅವನನ್ನು ಅಗಲಿರಲಾರೆನೆಂಬ ಅಭಿಪ್ರಾಯ ಹೊಂದಿದಳು. ಆದರೆ ಸತ್ಯ ಬೇರೆಯೇ ಆಗಿತ್ತು. ಆತ ತನ್ನ ಪ್ರಾಯದ ದಾಹ ತಣಿಸಲು ತಂದೆಯಿಂದ ನಿಯಮಿತನಾದ ವಿವಾಹಿತ ವ್ಯಕ್ತಿ ಎಂದು ತಿಳಿದಾಗ ಮೋಸ ಹೋದುದಕ್ಕೂ, ಜೀವನದಲ್ಲಿನ ಸೋಲನ್ನು ಎದುರಿಸಿ ನಿಲ್ಲುವ ಚೈತನ್ಯ ಇಲ್ಲದುದರಿಂದ ಬದುಕಿಗೆ ಕೊನೆ ಹಾಡಿದಳು. ಅದಕ್ಕೆ ತದ್ವಿರುದ್ಧವಾಗಿ ರಜನಿ ಬದುಕು ರೂಪಿಸಿಕೊಂಡಳು. ಆದರೆ ವಿಶ್ವಾಸ್ ತನಗಾಗಿ ಇನ್ನೂ ಕಾದಿದ್ದಾನೆ ಎಂದು ತಿಳಿದಾಗ ತತ್ತರಿಸಿ ಹೋದಳು. — ಇನ್ನು ಮೇಲೆ

## ಶ್ರುತಿ

ಬಿಂದು, ಅವಳ ಗಂಡ ರಾಜೇಶ್ ಅಂದು ಅನಿರೀಕ್ಷಿತವಾಗಿ ನಮ್ಮ ಮನೆಗೆ ಬಂದಾಗ ನಾನು ಅಚ್ಚರಿಗೊಂಡಿದ್ದೆ. ಬಿಂದು ಎಷ್ಟೋ ಬಾರಿ ನಮ್ಮ ಮನೆಗೆ ಒಬ್ಬಳೇ ಬಂದು ತನ್ನ ಸುಖ—ದುಃಖಗಳನ್ನು ಹೇಳಿಕೊಳ್ಳುವುದುಂಟು. ಆದರೆ ಅವಳು ಪತಿಯೊಡನೆ ನಮ್ಮಲ್ಲಿಗೆ ಬಂದಿದ್ದು ಅದೇ ಮೊದಲು. ಬಂದವರನ್ನು ಆದರದಿಂದ ಸ್ವಾಗತಿಸಿದೆ. ಇದ್ದ ಸ್ವಲ್ಪ ಹಾಲಿನಲ್ಲಿ ಕಾಫಿ ಮಾಡಿಕೊಟ್ಟೆ. ಭಾನುವಾರವಾದ್ದರಿಂದ ರೇಖಾ—ರವೀಂದ್ರ ಮನೆಯಲ್ಲೇಇದ್ದರು. ಬಿಂದು ತನ್ನ ಕೈಚೀಲದಿಂದ ಹಣ್ಣು ಸಿಹಿತಿಂಡಿ ತೆಗೆದು ಮಕ್ಕಳಿಗೆ ಕೊಟ್ಟಳು. ಅದು ಅವಳ ಮಾಮೂಲು ಅಭ್ಯಾಸವಾದ್ದರಿಂದ ನನಗಾಗಲೀ, ಮಕ್ಕಳಿಗಾಗಲಿ ಅದರಲ್ಲಿ ವಿಶೇಷ ಕಾಣಲಿಲ್ಲ. ರೇಖಾ ಸಿಹಿ ತಿಂದು, ಹೊರಗೆ ಹೊರಟಾಗ ಬಿಂದು ಅವಳನ್ನು ಕರೆದು ಹತ್ತಿರ ಕೂರಿಸಿಕೊಂಡು ಕೆನ್ನೆ ಸವರುತ್ತಾ ಕೇಳಿದಳು. "ಶ್ರುತಿ ಅತ್ತೆ ನಿನ್ನನ್ನು ನಮ್ಮ ಮನೆಗೆ ಕಳುಹಿಸಬೇಕೂಂತ ಇದ್ದಾಳೆ. ನಿನಗೆ ಬರೋದಕ್ಕೆ ಇಷ್ಟಾನಾ ರೇಖಾ?" ಅವಳ ಪ್ರಶ್ನೆ ರೇಖಾಳಂತೆಯೇ ನನಗೂ ಅನಿರೀಕ್ಷಿತವಾಗಿತ್ತು. ನಾನು ಏನೋ ಹೇಳಬೇಕೆನ್ನುವಷ್ಟರಲ್ಲಿ ಬಿಂದು ನನ್ನನ್ನು ಕಣ್ಸನ್ನೆಯಿಂದಲೇ ಸುಮ್ಮನಾಗಿಸಿದಳು. ಆರು ವರ್ಷದ ರೇಖಾ ನನ್ನ ಮುಖವನ್ನೊಮ್ಮೆ ಅಚ್ಚರಿಯಿಂದ ನೋಡಿ "ಖಂಡಿತ ಬರೋದಿಲ್ಲ. ಶ್ರುತಿ ಅತ್ತೆ ನನ್ನ ಬಿಟ್ಟು ಊಟಾನೂ ಮಾಡೋಲ್ಲ. ನಿದ್ದೇನೂ ಮಾಡಲ್ಲ. ನಿಮ್ಮ ಮನೆಗೆ ಬಂದುಬಿಟ್ರೆ ಅವರ ಜೊತೆ ಯಾರು ಚೆನ್ನೆಮಣೆ ಆಡ್ತಾರೆ. ದೇವಸ್ಥಾನಕ್ಕೆ ಶ್ರುತಿ ಆಂಟಿ ಯಾರ ಜೊತೆ ಹೋಗ್ತಾರೆ?" ತನ್ನ ಮನದಲ್ಲಿನ ಪ್ರಶ್ನೆಗಳನ್ನು ಮುಂದಿಟ್ಟಳು ಮುಗ್ಧ ಮನಸ್ಸಿನ ಬಾಲೆ. ಬಿಂದುವಿನ ಪತಿ ಅವಳನ್ನು ಹತ್ತಿರಕ್ಕೆಳೆದುಕೊಂಡು "ಈಗ ರವೀಂದ್ರನ ಜೊತೆ ಹೋಗ್ತಾರೆ. ಆಮೇಲೆ ಶ್ರುತಿ ಅತ್ತೆಗೆ ಮದುವೆಯಾಗ್ಬಿಟ್ರೆ ಆ ಮಾಮನ ಜೊತೆನೇ ಚೆನ್ನೆಮಣೇನೂ ಆಡ್ತಾರೆ. ದೇವಸ್ಥಾನಕ್ಕೂ ಹೋಗ್ತಾರೆ" ಎಂದರು ನಸುನಗುತ್ತ.

"ಇಲ್ಲ ಅಂಕಲ್, ಶ್ರುತಿ ಆಂಟಿ ನಂಗೆ ಹೇಳಿದ್ದಾರೆ. ಅವರು ಮದುವೇನೇ ಮಾಡ್ಕೊಳೋಲ್ಲವಂತೆ. ಅವರು ಮದುವೆ ಮಾಡ್ಕೊಂಡು ಬಿಟ್ರೆ ನನ್ನ—ರವೀಂದ್ರನ ನೋಡ್ಕೊಳೋವ್ರು ಯಾರು?"

"ಅದಕ್ಕೆ ಮರಿ ನಾವೀಗ ಬಂದಿರೋದು. ರವೀಂದ್ರ ಹೇಗೂ ಈ ವರ್ಷ ಏಳನೇ ಕ್ಲಾಸ್ ಓದ್ತಿದಾನೆ. ಅವನು ಪಾಸಾದ್ರೆ ಅವನನ್ನು ಹಾಸ್ಟೆಲಿನಲ್ಲಿ ಬಿಟ್ಟು ಓದಿಸಬಹುದು. ನಮ್ಮ ಮನೇಲಿ ಪುಟ್ಟ ಮಕ್ಕಳು ಯಾರೂ ಇಲ್ಲ. ನಮಗೂ ಬೇಜಾರಾಗಿದೆ. ಅದಕ್ಕೆ ನಾನು—ಅಂಕಲ್

ನಿನ್ನನ್ನು ನಮ್ಮ ಮನೇಗೆ ಕರೆದುಕೊಂಡು ಹೋಗಿ ಸಾಕಿಕೊಳ್ತೀವಿ. ಆಗ ಶ್ರುತಿ ಆಂಟಿಗೆ ಒಬ್ಬರೇ ಇರೋದಕ್ಕೆ ಬೇಜಾರಾಗಿ ಮದುವೆ ಮಾಡ್ಕೊಳ್ತಾರೆ. ಅಲ್ವಾ?'' ಬಿಂದೂಳ ಮಾತು ರೇಖಾಳಂತೆಯೇ ನನಗೂ ವಿಸ್ಮಯ ತಂದಿತ್ತು.

ನಾನು ಬಿಂದೂಳನ್ನು ನೇರವಾಗಿ ಕೇಳಿದೆ ''ಇದೆಲ್ಲಾ ಏನು ಬಿಂದು? ನನಗೇ ತಿಳಿಯದ ಹೊಸ ಏರ್ಪಾಡು? ಈ ಮಕ್ಕಳು ನನ್ನ ಮದುವೆಗೆ ಮುಳ್ಳಾಗಿವೆಯೇ? ಎಂಥದ್ದೂ ಇಲ್ಲ. ಮಕ್ಕಳನ್ನು ನನ್ನವೇ ಎಂದು ಭಾವಿಸಿ ಸಾಕುತ್ತಿದ್ದೇನಲ್ಲ''

''ನೀನು ಹೊರೆ ಎಂದು ಭಾವಿಸಿದ್ದೀಯಾ ಎಂಬುದಕ್ಕಲ್ಲ ಶ್ರುತಿ. ನಾನು ರಾಜೇಶ್ ಯಾವುದಾದರೂ ಮಗುವನ್ನು ದತ್ತು ತೆಗೆದುಕೊಳ್ಳುವ ನಿರ್ಧಾರಕ್ಕೆ ಬಂದಿದ್ದೇವೆ. ಅಂದ ಮೇಲೆ ಯಾವುದೋ ಕಂಡು ಕೇಳದ ಮಗುವೇಕೆ? ನಮ್ಮರೇಖಾ ಯಾಕಾಗಬಾರದು ಎನ್ನಿಸಿತು. ನೀನು ಅನುಮತಿ ಕೊಟ್ಟರೆ ಅವಳ ಲಾಲನೆ–ಪಾಲನೆಯ ಭಾರ ನಮಗೆ ಬಿಡು. ರೇಖಾ ನಿನ್ನ ಬಳಿಯಿದ್ದರೂ ಸರಿ, ನನ್ನ ಬಳಿಯಿದ್ದರೂ ಸರಿ, ಅವಳಿಗೆ ನೀನು ಅತ್ತೆಯೇ ತಾನೆ?''

ಬಿಂದುವಿನ ಆಲೋಚನೆಗಳು ನನಗೆ ಹೊಸತು. ನಾನು ಆ ಕೋನದಲ್ಲಿ ಎಂದೂ ಯೋಚಿಸಿರಲಿಲ್ಲ. ನನ್ನ ಪ್ರಯತ್ನ ಮಾಡುತ್ತಿರುವಾಗ ನಾನು ಬೇಡ ಎಂದರೆ ಸರಿಯಾದೀತೇ? ಬಿಂದು ಜೀವನದಲ್ಲಿ ಸಾಕಷ್ಟು ನೊಂದಿದ್ದಾಳೆ. ತನ್ನದೇ ಆದ ಒಂದು ಮಗುವಿಗಾಗಿ ಅವಳು ಹಂಬಲಿಸಿದ್ದು ಸ್ವಲ್ಪವೇ? ಅದು ಸಾಧ್ಯವಾಗದೆ ಹೋದಾಗ ಅವಳ ಅತ್ತೆ ಮನೆಯವರು ಕೊಟ್ಟ ಕಾಟ ಅಲ್ಪವೇ? ಅವಳ ಪತಿ ಇಷ್ಟರ ಮಟ್ಟಿಗೆ ಬದಲಾದದ್ದು ಬಿಂದೂನ ಅದೃಷ್ಟ, ಎಲ್ಲಾ ಪೂರ್ಣಳ ಮಧ್ಯಸ್ಥಿಕೆಯಿಂದ.

ಅವಳೆಂದಂತೆ ತಬ್ಬಲಿ ಮಕ್ಕಳಿಗೆ ಲಾಲಿಸುವವರು ಯಾರಾದರೇನು? ಅವುಗೇ ಹೊಂದಿಕೊಳ್ಳುತ್ತವೆ. ಮಗು ಎಲ್ಲಿದ್ದರೂ ನಾನೇನೂ ಅದಕ್ಕೆ ತಾಯಾಗಲಾರೆ. ಅಂದ ಮೇಲೆ ಬಿಂದುವಿನ ಆಸೆಯನ್ನು ಚಿವುಟುವುದೇಕೆ? ಬಿಂದುವಿಗೆ ರೇಖಳಲ್ಲದಿದ್ದರೆ ಮತ್ತೊಂದು ಮಗು



ಸಿಗಬಹುದು. ಆದರೆ ರೇಖಾ, ಬಿಂದುವಿನ ಮಾತೃಹೃದಯದ ಆಶ್ರಯದಲ್ಲಿ ಸುಖಿಯಾಗಿರುತ್ತಾಳೆ. ಒಳ್ಳೆಯ ವಿದ್ಯೆ ಕೊಡಿಸಿ, ಉತ್ತಮ ಸಂಬಂಧ.ಹುಡುಕಿ ಮದುವೆ ಮಾಡಲು ಬಿಂದು–ಅವಳ ಪತಿ ಶಕ್ತರಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ನನ್ನ ನಿಲುವೇನು? ಒಪ್ಪಿಕೊಳ್ಳುವುದೇ ಒಳ್ಳೆಯದು ಎನಿಸಿದಾಗ ಮೆಲ್ಲನೆ ಹೇಳಿದೆ "ನನಗೆ ತೊಂದರೆ ಎಂಬ ಕಾರಣಕ್ಕಾಗಿ ನೀವು ಈ ನಿರ್ಧಾರಕ್ಕೆ ಬಂದಿದ್ದರೆ, ನನಗೆ ರೇಖಾ–ರವಿ ಇಲ್ಲದೆ ಇರಲು ಅಸಾಧ್ಯ ಎಂದೇ ಹೇಳುತ್ತೇನೆ. ಆದರೆ ನಿಮಗೆ ಮಗುವನ್ನು ಸಾಕಬೇಕೆಂಬ ಆಸೆ ತೀವ್ರವಾಗಿದ್ದರೆ, ನಾನು ಅದಕ್ಕೆ ಅಡ್ಡಿಯಾಗಿ ನಿಲ್ಲುವುದಿಲ್ಲ. ರೇಖಾ ಜಾಣೆ. ಚೆನ್ನಾಗಿ ವಿದ್ಯೆ ಕಲಿಸಿ. ಒಳ್ಳೆಯ ಕಡೆ ಮದುವೆ ಮಾಡಿ ಕೊಡಿ. ನನ್ನ ಹಾರೈಕೆ ಎಲ್ಲಿದ್ದರೂ ಒಂದೇ. ನನ್ನ ಅಣ್ಣನ ಇನ್‌ಷೂರೆನ್ಸ್ ಹಣವನ್ನು ಮಕ್ಕಳ ಹೆಸರಿನಲ್ಲಿ ಎಫ್.ಡಿ. ಹಾಕಿದ್ದೇನೆ. ಅವಳಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನೂ ನಿಮಗೆ ತಲುಪಿಸುತ್ತೇನೆ''.

ಅದುವರೆಗೆ ನನ್ನ ಬೆನ್ನ ಹಿಂದೆ ನಿಂತು ನನ್ನ ಮಾತು ಕೇಳಿಸಿಕೊಳ್ಳುತ್ತಿದ್ದ ರೇಖಾ. ನನ್ನ ಸೆರಗು ಜಗ್ಗುತ್ತಾ ಪಿಸುದನಿಯಲ್ಲಿ ಕೇಳಿದಳು "ನನ್ನನ್ನು ಅವರ ಜೊತೆ ಕಳುಹಿಸಿಬಿಡ್ತೀಯಾ ಅತ್ತೆ? ಯಾಕೆ? ನಿಂಗೆ ನನ್ನ ಕಂಡ್ರೆ ಇಷ್ಟ ಇಲ್ವಾ? ರವಿ ಒಬ್ನೇ ಇಷ್ಟಾನಾ?'' ಮಗುವಿನ ಮನಸ್ಸು ಎಷ್ಟು ಸೂಕ್ಷ್ಮ ಎನಿಸಿ ನನಗೆ ಕಣ್ಣು ತುಂಬಿತು. ಹಿಂಗೈಯಿಂದ ಕಣ್ಣೊರೆಸಿಕೊಂಡು ಹೇಳಿದೆ "ಹಾಗಲ್ಲ ಮರಿ. ಆ ಆಂಟಿ–ಅಂಕಲ್ ಇಬ್ರೂ ತುಂಬಾ ಒಳ್ಳೆವ್ರು. ನಿಂಗೆ ಒಳ್ಳೊಳ್ಳೆ ಲಂಗ ಹೊಲಿಸ್ತಾರೆ. ರಿಬ್ಬನ್–ಫ್ರಾಕ್ ಎಲ್ಲಾ ತಕ್ಕೊಡ್ತಾರೆ. ಸರ–ಬಳೆ ಎಲ್ಲಾ ಕೊಡಿಸ್ತಾರೆ. ಆಟದ ಸಾಮಾನು ತಕ್ಕೊಡ್ತಾರೆ. ನಿನ್ನ ಸ್ಕೂಟರ್ನಲ್ಲಿ ತಿರುಗಾಡಿಸ್ತಾರೆ. ಅದೆಲ್ಲಾ ನಿಂಗೆ ಈ ಶ್ರುತಿ ಅತ್ತೆ ಮಾಡೋಕ್ಕಾಗತ್ತಾ ಪುಟ್ಟಾ? ಅದಕ್ಕೆ ನಿನ್ನ ಅವರ ಜೊತೆ ಕಳುಹಿಸ್ತಿದೀನಿ ತಿಳೀತಾ? ಎಲ್ಲಿ ನಿನ್ನ ಬಟ್ಟೆ–ಪುಸ್ತಕ ಎಲ್ಲಾ ಎತ್ತಿಟ್ಟುಕೊ. ಅವರು ಹೇಳಿದ ಹಾಗೆ ಕೇಳ್ಕೊಂಡು ಜಾಣೆಯಾಗಿರ್‍ತೀಯಾ? ರೇಖಾ ಒಳ್ಳೆ ಹುಡುಗಿ ಅಂತ ಬಿಂದು ಆಂಟಿ ನಂಗೆ ಹೇಳ್ಬೇಕು''

"ಅತ್ತೆ ನಾನು ಅವರ ಜೊತೆ ಇವತ್ತೇ ಹೋಗ್ಬೇಕಾ? ನಾನು ಇವತ್ತು ನಿಂಜೊತೆ ಚೆನ್ನೆಮಣೆ ಆಡ್ಬಿಟ್ಟು, ದೇವಸ್ಥಾನಕ್ಕೆ ಹೋಗಿ ಬಂದ್ಬಿಟ್ಟು, ರಾತ್ರಿ ನಿಂಜೊತೇನೇ ಮಲಕ್ಕೊಂಬಿಟ್ಟು.... ನಾಳೆ ಹೋಗ್ತೀನಿ'' ಮಗುವಿನ ಮುದ್ದು ಮಾತು ಹೃದಯ ತಟ್ಟಲು ಬಿಂದುವಿನ ಪತಿ ಮೇಲೆದ್ದು ಹೇಳಿದರು. "ಹಾಗೆ ಮಾಡು ರೇಖಾ. ಅತ್ತೆ ಜೊತೆ ಈವತ್ತೆಲ್ಲಾ ಇದ್ದುಬಿಟ್ಟು, ನಾಳೆ ನಮ್ಮ ಮನೆಗೆ ಬಾ. ನೀನು ಅತ್ತೇನ, ರವಿ ಅಣ್ಣನ್ನ ಯಾವಾಗ ನೋಡ್ಬೇಕೂಂತ ಆಸೆ ಪಡ್ತೀಯೋ ಆಗ ಕರೆದುಕೊಂಡು ಬರ್‍ತೀವಿ. ಸರಿಯಾ? ಇನ್ನು ಹೊಗೋಣ್ವಾ ಬಿಂದು?'' ಬಿಂದು ರೇಖಾಳ ತಲೆದಡವಿ, ಕೆನ್ನೆ ಸವರಿ ಹೇಳಿದಳು "ಅತ್ತೇನ ಬಿಟ್ಟಿರೋದಕ್ಕೆ ನಿಂಗೆ ತುಂಬಾ ಬೇಜಾರಾದ್ರೆ ನೀನು ಇಲ್ಲೇ ಇರು ರೇಖಾ. ನಾನು ನಿನ್ನ ಬಲವಂತ ಮಾಡೋಲ್ಲ'' ರೇಖಾ ಮಂಕಾಗಿ ನನ್ನ ಮುಖ ನೋಡಿದಳು. ನಾನು ಅವಳ ಮೈದಡವಿ ಹೇಳಿದೆ 'ರೇಖಾ ಚಿನ್ನೂ, ಇವರು ಇನ್ಮೇಲಿಂದ ನಿಂಗೆ ಅಪ್ಪ–ಅಮ್ಮ ಅವರಿಬ್ರನ್ನೂ ಹಾಗೆಯೇ ಕರೆಯಬೇಕು ತಿಳೀತಾ? ನೀನು ಅಮ್ಮನ್ಮನೇಲಿದ್ರೂ ನಾನು–ರವಿ ನಿನ್ನ ನೋಡೋಕ್ಕೆ ಬರ್‍ತಾನೇ ಇರ್‍ತೀವಲ್ಲ. ನೀನು ಅವರ ಮನೆಗೆ ನಾಳೆ ಹೋಗ್ತೀ ತಾನೇ?'' ರೇಖಾ ತಲೆ ಆಡಿಸಿದಳು 'ಹೌದು' ಎಂಬಂತೆ. ಅವಳ ಆ ಪುಟ್ಟ ಹೃದಯದಲ್ಲಿ ನಡೆಯುತ್ತಿದ್ದ ದ್ವಂದ್ವ ನಮ್ಮೆಲ್ಲರಿಗೂ ತಿಳಿಯದೇ ಇರಲಿಲ್ಲ. ಆದರೆ ಅದಕ್ಕೆ ಕಿವಿಗೊಡುವ ಸ್ಥಿತಿಯಲ್ಲಿ ನಾವ್ಯಾರೂ ಇರಲಿಲ್ಲ. ಮಕ್ಕಳ ಭವಿಷ್ಯವನ್ನು ಯೋಚಿಸಿ ನಿರ್ಧರಿಸಿದ್ದ ವಿಷಯವನ್ನು ಮತ್ತೆ ಮತ್ತೆ ಚೆದಕುವುದರಲ್ಲಿ ಅರ್ಥವಿಲ್ಲ. ಸದ್ಯಕ್ಕಂತೂ ಈ 'ಏರ್ಪಾಡು' ಒಳ್ಳೆಯದಕ್ಕೇ ಎನಿಸಿ ಅವರಿಬ್ಬರನ್ನೂ ನಗುಮೊಗದಿಂದ ಬೀಳ್ಕೊಟ್ಟೆ.

ರಾತ್ರಿ ನನ್ನ ಪಕ್ಕ ಮಲಗಿದ್ದ ಪುಟ್ಟ ರೇಖಾಳ ಕೈಗಳು ನನ್ನ ಕತ್ತಿನ ಸುತ್ತ ಬಿಗಿಯಾಗಿ ಹೆಣೆದಿಕೊಂಡಿದ್ದುವು. ನಡುನಡುವೆ ಬೆಚ್ಚಿ ರೇಖೆ ಕನವರಿಸುತ್ತಿದ್ದಳು. 'ಅತ್ತೇ... ನೀನು ಯಾವಾಗ ಬರ್‍ತೀಯ? ರವಿ ಸ್ಕೂಲಿಗೆ ಒಬ್ಬನೇ ಹೋಗ್ತಾನಾ?' ಎಂದೆಲ್ಲಾ, ನಾಲ್ಕು ದಿನ ಹೀಗಿರುತ್ತಾಳೆ. ಹೊಸ ವಾತಾವರಣಕ್ಕೆ ಹೊಂದಿಕೊಂಡರೆ ಎಲ್ಲಾ ಸರಿಯಾಗುತ್ತೆ ಎಂದುಕೊಂಡು ಅವಳನ್ನಪ್ಪಿಕೊಂಡೇ ಮಲಗಿದೆ.

## ಹೊಸ ಬಗೆಯ ರಥ ಯಾತ್ರೆ

'ದಂಡಿಯಾತ್ರೆ'ಯಿಂದ ಇತ್ತೀಚಿನ ಏಕತಾ ಯಾತ್ರೆಯ ವರೆಗೆ ಭಾರತದಲ್ಲಿ ಪಾದಯಾತ್ರೆ, ರಥಯಾತ್ರೆಗಳಿಗೆ ಕೊರತೆಯಿಲ್ಲ. ಆದರೆ ಕೆಲ ತಿಂಗಳುಗಳ ಹಿಂದೆ ಭಾರತದಲ್ಲಿ ಹೊಸ ರಥಯಾತ್ರೆ ಯೊಂದು ನಡೆಯಿತು. ಇದು ರಾಜಕೀಯ ಸಂದೇಶದ, ಮತ ಗಳಿಸುವ, ಶಕ್ತಿ ಪ್ರದರ್ಶನದ, ರಾಜಕೀಯ ನಾಯಕರ ಬಿಂಬವರ್ಧನೆಯ ಗುರಿ ಹೊಂದಿರಲಿಲ್ಲ. ಶಾಖಾಹಾರದ ಪ್ರಚಾರ, ಅದರ ಅಗತ್ಯದ ಕುರಿತು ಅರಿವು ಮೂಡಿಸುವುದೇ ಈ ರಥಯಾತ್ರೆಯ ಮೂಲೋದ್ದೇಶವಾಗಿತ್ತು. ಜೊತೆಗೆ ಜೈನಗುರು ಮಹಾವೀರರು ಉಪದೇಶಿಸಿದ ಅಹಿಂಸೆ, ಮತ್ತು ನೈತಿಕತೆಗಳ ಕುರಿತು ತಿಳುವಳಿಕೆ ಮೂಡಿಸುವ ಉದ್ದೇಶದಲ್ಲೂ ಈ ಯಾತ್ರೆ ಸಾಕಷ್ಟು ಸಫಲ ವಾಯಿತು. ಈ ರಥಯಾತ್ರೆ ರಾಜಸ್ತಾನ, ಬಿಹಾರ, ಮಧ್ಯಪ್ರದೇಶ, ಉತ್ತರಪ್ರದೇಶ, ಮಹಾರಾಷ್ಟ್ರ ಹಾಗೂ ಪಂಜಾಬ್ ರಾಜ್ಯಗಳಲ್ಲಿ ಯಶಸ್ವಿಯಾಗಿ ನಡೆಯಿತು. ಅದೇಕೋ ಸಮೂಹ ಮಾಧ್ಯಮಗಳು ಈ ರಥ ಯಾತ್ರೆಯಲ್ಲಿ ಅಷ್ಟೊಂದು ಆಸಕ್ತಿ ತೋರಲಿಲ್ಲ.

## ಪಂದ್ಯ ಮುಗಿದ ಮೇಲೆ

ಕ್ರಿಕೆಟ್ ಪಂದ್ಯ ಆರಂಭವಾಯಿತೆಂದರೆ ಜನತೆ ಸಮೂಹ ಸನ್ನಿಗೊಳಗಾಗುತ್ತದೆ. ಅದರಲ್ಲೂ ಕ್ರಿಕೆಟ್ ಆಟಗಾರರ ಅಭಿಮಾನಿಗಳಿಗೆ ಇದೊಂದು ಡೋಸ್ ಹೆಚ್ಚಾಗೇ ತಲೆಗೇರಿರುತ್ತದೆ. ಪಂದ್ಯ ಆರಂಭವಾ ದೊಡನೆ ತಮ್ಮ ತಂಡಕ್ಕೆ ಜಯ ಕಟ್ಟಿಟ್ಟ ಬುತ್ತಿ ಎಂದು ಎದೆಯುಬ್ಬಿಸುವ, ತಮ್ಮ ನೆಚ್ಚಿನ ಆಟಗಾರ ಇಂತಿಷ್ಟೇ ರನ್ ಬಾರಿಸುತ್ತಾನೆಂದೂ ಜಿದ್ದು ಕಟ್ಟುವ ಜಾಣರಿಗೆ ನಮ್ಮ ದೇಶದಲ್ಲಿ ಕೊರತೆಯಿಲ್ಲ. (ಇದಕ್ಕೆ ತದ್ವಿರುದ್ಧ ವಾಗಿ ಭಾರತೀಯ ಕ್ರೀಡಾಪಟುಗಳು ಎಷ್ಟೇ ಚೆನ್ನಾಗಿ ಆಡಿ ಗೆದ್ದರೂ, ಕೆಲ ವಿದೇಶೀ ಆಟಗಾರರನ್ನು ಹೆಸರಿಸಿ ಅವರು ಈ ಪಂದ್ಯದಲ್ಲಿ ಭಾಗವಹಿಸಲಿಲ್ಲವೆಂದೋ, ಅದೇಕೋ ನಮ್ಮ ಪ್ರತಿಸ್ಪರ್ಧಿ ತಂಡ ಅಷ್ಟು ಚೆನ್ನಾಗಿ ಆಡಲಿಲ್ಲವೆಂದು ಅಸಮಾಧಾನ ತೋರುವ, ಅಥವಾ ಅವರದು ಹೊಸಬರ ತಂಡ. ಆದುದರಿಂದ ನಮ್ಮವರು ಸುಲಭವಾಗಿ ಗೆದ್ದರು. ಇಲ್ಲದಿದ್ದರೆ ಇವರಿಂದೇನು ಸಾಧ್ಯ ಎಂದೋ, ಇಲ್ಲವೇ ಏನೋ [illegible] ಗದ್ದರು ಎಂದು ಭಾರತೀಯ ಕ್ರಿಕೆಟ್ ಆಟಗಾರರ ಗೆಲುವನ್ನು ಲಘುವಾಗಿ ಕಾಣುವ [illegible] "ಅಪ್ಪಟ ಕ್ರೀಡಾ [illegible]'' ಬೆಳೆಸಿಕೊಂಡ ಬುದ್ಧಿಜೀವಿ ವರ್ಗವೂ ಒಂದಿದೆ. ಅದು ಪ್ರತ್ಯೇಕ ವಿಷಯ.) ಆದರೆ ಪಂದ್ಯದಲ್ಲಿ ತಮ್ಮ ನಿರೀಕ್ಷೆಗೆ ವಿರುದ್ಧವಾಗಿ ಏನಾದರೂ ನಡೆದರೆ ಅದರ ಪರಿಣಾಮ ಮಾತ್ರ ವಿಪರೀತ.

ಕಳೆದ ಮಾರ್ಚ್ 1ರಂದು ಭಾರತ 1992 ವರ್ಲ್ಡ್ ಕಪ್ ಅನ್ನು ಆಸ್ಟ್ರೇಲಿಯಕ್ಕೆ ಬಿಟ್ಟುಕೊಟ್ಟಿತು. ವಿಶ್ವಕಪ್ ನಮಗೇ ಎಂಬ ಭಾವನೆ ಹೊಂದಿದ್ದ ಸೂರತ್‌ನ ನವವಿವಾಹಿತ ತರುಣನಿಗೆ ಈ ಸೋಲು ಅಸಹನೀಯ ವಾಯಿತು. ದುರ್ಭರವಾಯಿತು. ಉದ್ವೇಗಗೊಂಡ ಆತ ಆತ್ಮಹತ್ಯೆ ಮಾಡಿಕೊಂಡ. ಆಗ ತಾನೆ ವಿವಾಹ ವಾದ ತರುಣಿ ವಿಧವೆಯಾದಳು.

ಆದರೆ ದಕ್ಷಿಣ ಮುಂಬಯಿಯಲ್ಲಿರುವ ಗಿರಗಾಂವ್ ನಿವಾಸಿಗಳು ತಮ್ಮ ನಿರಾಶೆಯನ್ನು ತೋಡಿಕೊಂಡ ರೀತಿಯೇ ಬೇರೆ. ಅಲ್ಲಿನ ಬೀದಿಗಳಲ್ಲಿ ಜನರ ಕಣ್ಣಿಗೆ ಕಾಣುವಂತೆ ರವಿಶಾಸ್ತ್ರಿಯ ಭಾವಚಿತ್ರ ಗಳಿಗೆ ಮತ್ತು ಕಟೌಟ್‌ಗಳಿಗೆ ಪಾದುಕಾ ಮಾಲೆ ಹಾಕಿ ತಮ್ಮ ಸಂತಾಪವನ್ನು ಸೂಚಿಸಿದರು.

ನಮ್ಮ ತಂಡದ ಸೋಲು ಜನರ ಮೇಲೆ ಎಂತಹ ಪರಿಣಾಮ ಬೀರುತ್ತದೆ ಎಂಬುದರ ಸೂಚನೆ ಇವು. ಕ್ರೀಡಾಪಟುಗಳು ಇನ್ನು ಮೇಲಾದರೂ ಜವಾಬ್ದಾರಿ ಯಿಂದ ಆಡುತ್ತಾರೆಯೆ?! ಹಾಗೆಯೇ ಕ್ರಿಕೆಟ್ ಅಭಿ ಮಾನಿಗಳು ಆತ್ಮಹತ್ಯೆಗೆಳಸುವ ಹುಚ್ಚು ಕ್ರಿಕೆಟ್ ಪ್ರೇಮವನ್ನು ಬಿಡುತ್ತಾರೆಯೇ?

### ಪೂರ್ಣಾ

ಬಾಣಲೆಯಲ್ಲಿ ಹಾಕಿದ ಮೆಂತ್ಯ ಸೀದು ಕರಕಾದ ವಾಸನೆ ಮೂಗಿಗೆ ಬಡಿದಾಗ ನಾನು ನನ್ನ ಗುಂಗಿನಿಂದ ಹೊರ ಬಂದೆ. ಮೆಂತ್ಯವನ್ನು ಬಚ್ಚಲಿಗೆ ಸುರಿದು ಬಾಣಲೆಯನ್ನು ನಲ್ಲಿಯ ಕೆಳಗಿಟ್ಟು ನೀರು ಸುರಿದೆ. ಕಾದ ಬಾಣಲೆಯ ಮೇಲೆ ಬಿದ್ದ ನೀರು ಆವಿಯಾಗಿ ಹೋಗುವುದನ್ನೇ ನೋಡುತ್ತಾ ನಿಂತೆ. ನನ್ನ ಮನಸ್ಥಿತಿ ಆ ಕಾದ ಬಾಣಲೆಗಿಂತ ಹೆಚ್ಚು ಬೇರೆ ಎನಿಸಲಿಲ್ಲ. ದುಃಖದ ಉರಿಗೆ ನನ್ನ ಹೃದಯ ಬಾಣಲೆಯಂತೆ ಕಾದುಹೋಗಿತ್ತು. ಸೀದ ಮೆಂತ್ಯವನ್ನೇನೋ ಬಚ್ಚಲಿಗೆ ಎಸೆದುಬಿಟ್ಟೆ. ಆದರೆ ಸೀದು ಕರುಕಾದ ಮನಸ್ಸನ್ನೇನು ಮಾಡಲಿ!?

ಛೀ! ಸ್ಮೃತಿ ಇಂತಹ ಹೀನ ಮನಸ್ಸಿನ ಹೆಣ್ಣೆಂದು ನನಗೆ ತಿಳಿಯದೆ ಹೋಯ್ತಲ್ಲ! ಬಸುರಿಯಾಗಿದ್ದ ವಿಧವೆ ಹೆಣ್ಣಿಗೆ ಆಶ್ರಯ ನೀಡಲೆಂದು ನನ್ನ ಬಳಿ ತಂದಿಟ್ಟುಕೊಂಡದ್ದಕ್ಕೆ ನನ್ನ ಬದುಕಿಗೇ ಕೊಡಲಿಯೇಟು ಕೊಟ್ಟುಬಿಟ್ಟಳಲ್ಲಾ! ನಿರ್ಮಲ ಮನಸ್ಸಿನಿಂದ ಎಲ್ಲರನ್ನೂ ಪ್ರೀತಿಸುವ, ಎಲ್ಲರ ದುಃಖದ ಸಮಯದಲ್ಲಿ ಭುಜ ಕೊಡುವ ನನಗೆ ದೇವರು ಇಂತಹ ಶಿಕ್ಷೆಯನ್ನೇಕೆ ಕೊಟ್ಟ?

ಓಹ್! ಮೇನಕಾಳಂತಹ ಸ್ವಚ್ಛಂದ ಪ್ರವೃತ್ತಿಯ ಹೆಣ್ಣಿಗೇ, ಭಗ್ನಪ್ರೇಮದಿಂದ ಸಾವು ಹಿತವೆನಿಸಿದಾಗ, ನನ್ನಂತವಳ ಗತಿ? ಆದರೆ, ಬದುಕನ್ನು ಅತೀವವಾಗಿ ಪ್ರೀತಿಸುವ ನಾನು, ಸಾವನ್ನೂ ಸ್ವಾಗತಿಸಲಾರೆ. ಸುಹಾಸ್–ಸಂಗೀತ ಅಯಸ್ಕಾಂತದಂತೆ ಎಳೆದು ನನ್ನನ್ನು ಈ ಸಂಸಾರಕ್ಕೆ ಕಟ್ಟಿಬಿಟ್ಟಿದ್ದಾರೆ. ಅವರಿಗಾಗಿಯಾದರೂ ನಾನು ಬದುಕಬೇಕು.

ಆದರೆ! ಇಷ್ಟೆಲ್ಲಾ ಕಂಡ ಮೇಲೂ, ನಾನು ಶ್ರೀಹರಿಯನ್ನು ಮೊದಲಿನಂತೆ ಪ್ರೀತಿಸಲು ಸಾಧ್ಯವೇ? ಸ್ಮೃತಿಯೇನೋ ಪತಿಯಿಲ್ಲದ ಹೆಣ್ಣು. ಯೌವನದ ಅಮಲಲ್ಲಿ ತಪ್ಪಿ ನಡೆದಿರಬಹುದು. ಆದರೆ ನಾನು ಬದುಕಿದ್ದು, ಪ್ರೀತಿಯ ಕೊಡದಿಂದಲೇ ಅವರಿಗೆ ಅಭಿಷೇಕ ಮಾಡುತ್ತಿರುವಾಗ ನನ್ನನ್ನೇ ಅಷ್ಟೊಂದು ಪ್ರೀತಿಸುತ್ತಿದ್ದ ಶ್ರೀಹರಿ ಹೀಗೆ ಮಾಡಬಹುದೇ? ಎರಡು ಮಕ್ಕಳ ತಂದೆಯಾಗಿ ಹೀಗೆ ತಪ್ಪು ಹೆಜ್ಜೆಯಿಡಬಹುದೇ?

ಶ್ರೀಹರಿ ನನ್ನನ್ನು ಪ್ರಥಮ ಬಾರಿ ನೋಡಿದ್ದು ಮಾನಸಗಂಗೋತ್ರಿಯ ಗ್ರಂಥಾಲಯದಲ್ಲಿ. ಪುಸ್ತಕವೊಂದನ್ನು ತೆಗೆದುಕೊಳ್ಳಲು ನಾನು ಬುಕ್‌ಷೆಲ್ಫ್ ಬಳಿ ಹೋಗಿದ್ದೆ. ಷೆಲ್ಫ್‌ನ ಮತ್ತೊಂದು ಕಡೆಯಲ್ಲಿ ನಿಂತಿದ್ದ ಶ್ರೀಹರಿ ನನಗೆ ಕಂಡಿರಲಿಲ್ಲ. ಒಂದೇ ಪುಸ್ತಕಕ್ಕಾಗಿ ನಾವಿಬ್ಬರೂ ಒಟ್ಟಿಗೇ ಕೈಹಾಕಿದಾಗ ಪುಸ್ತಕ ಇಬ್ಬರ ಕೈಜಾರಿ ಕೆಳಗೆ ಬಿದ್ದಿತ್ತು. ಆದರೆ ನಮ್ಮ ಕೈಗಳು ಪರಸ್ಪರ ಹಿಡಿತದಲ್ಲಿ ಭದ್ರವಾಗಿತ್ತು. ಕ್ಷಣಾರ್ಧದಲ್ಲಿ ನಡೆದ ಈ ಘಟನೆ ನಮ್ಮನ್ನು ಹತ್ತಿರ ತಂದಿತ್ತು. ನಯನಗಳ ಮಿಲನದಲ್ಲಿ ಆರಂಭವಾದ ನಮ್ಮ ಒಲವು ಹೃದಯಗಳ ಮಿಲನದಲ್ಲಿ ಪರ್ಯವಸಾನಗೊಂಡಿತ್ತು. ಹಿರಿಯರ ಒಪ್ಪಿಗೆ ಪಡೆದು ಒಂದಾಗಿದ್ದ ನಾವು ಎಂದೂ ಒಬ್ಬರನ್ನೊಬ್ಬರು ನೋಯಿಸಿರಲಿಲ್ಲ. ಸಹೃದಯರೂ, ಸ್ನೇಹಪರರೂ ಆಗಿದ್ದ ಶ್ರೀಹರಿ ಎಲ್ಲರೊಡನೆಯೂ ಸ್ನೇಹದಿಂದ ಮಾತನಾಡುತ್ತಿದ್ದರು. ಅವರು ಹೆಂಗಸರೊಡನೆ ನಗುನಗುತ್ತಾ ಮಾತನಾಡುವಾಗ ನನಗೇನೂ ಬೇಸರವಾಗಿರಲಿಲ್ಲ. ಈರ್ಷೆ ಉಕ್ಕಿ ಬಂದಿರಲಿಲ್ಲ. ನನಗೆ ಸ್ಫುರದ್ರೂಪಿಯಾದ ಪತಿಯಿದ್ದಾರೆಂಬ ಹೆಮ್ಮೆ ನನ್ನಲ್ಲಿತ್ತೇ ಹೊರತು, ಅವರು ನನ್ನ ಕೈ ಬಿಟ್ಟು ಹೋದಾರು ಎಂಬ ಕಲ್ಪನೆ ಕೂಡಾ ನನ್ನಲ್ಲಿ ಹುಟ್ಟಿರಲಿಲ್ಲ. ಅವರ ನಡತೆಯನ್ನು ಕಾವಲಿಡಬೇಕೆಂಬ ಭಾವನೆಯ ಲವಲೇಶವೂ ನನ್ನಲ್ಲಿ ಮೂಡಿರಲಿಲ್ಲ. ಆದರೆ ಮೊನ್ನೆಯ ಘಟನೆಯನ್ನು ನೆನೆದರೆ ನನ್ನ ನರನಾಡಿಗಳು ಸೆಟೆದು ನಿಲ್ಲುತ್ತಿವೆ. ನಂಬಿಕೆ ಎಂಬ ಪದ ಅರ್ಥಹೀನವಾಗಿ ಕಾಣುತ್ತಿದೆ.

ವಾರದ ಹಿಂದೆ ಶ್ರೀಹರಿಗೆ ತುಂಬಾ ಜ್ವರ ಬಂದದ್ದರಿಂದ ನಾನೂ ರಜೆ ಹಾಕಿ ಮನೆಯಲ್ಲಿದ್ದು ಅವರಿಗೆ ಔಷಧೋಪಚಾರ ಮಾಡಿದ್ದೆ. ಮೊನ್ನೆ ಅವರು ಸ್ವಲ್ಪ ಆರೋಗ್ಯವಾದದ್ದರಿಂದ ಬ್ಯಾಂಕಿಗೆ ಹೊರಟೆ. ಹೊರಡುವ ಮುನ್ನ ಗಂಜಿ–ಸಾರು ಮಾಡಿಟ್ಟು, ಸ್ಮೃತಿಯ ಮನೆಗೆ ಹೋಗಿ, ಊಟದ ಸಮಯಕ್ಕೆ ಎಲ್ಲವನ್ನೂ ಬಿಸಿ ಮಾಡಿ ಶ್ರೀಹರಿಗೆ ಬಡಿಸುವಂತೆ ಹೇಳಿದೆ. ಅವಳ ಮಗುವಿಗಿನ್ನೂ ಮೂರು ತಿಂಗಳು ತುಂಬಿರಲಿಲ್ಲವಾದ್ದರಿಂದ, ಸ್ಮೃತಿ ಬ್ಯಾಂಕಿನ ಕೆಲಸಕ್ಕಿನ್ನೂ ಹಾಜರಾಗಿರಲಿಲ್ಲ. ತೊಟ್ಟಿಲಲ್ಲಿ ಕೈ–ಕಾಲು ಬಡಿಯುತ್ತಿದ್ದ ಪಾಪುವನ್ನು ಮುದ್ದಿಸಿ ಬ್ಯಾಂಕಿಗೆ ಹೋದೆ. ಮಧ್ಯಾಹ್ನದ ಊಟವನ್ನು ಕೈಯಲ್ಲಿ ತೆಗೆದುಕೊಂಡೇ ಹೋಗಿದ್ದರೂ ಮನಸ್ಸು ಶ್ರೀಹರಿಯ ಆರೋಗ್ಯದ ಕಡೆಗೇ ಮಿಡಿಯುತ್ತಿದ್ದುದರಿಂದ, ತಡೆಯದೆ ಬಿಡುವಿನ ವೇಳೆಗೆ ಸ್ವಲ್ಪ ಮುಂಚೆಯೇ ಮನೆಗೆ ಬಂದೆ. ನಾನು ಮನೆ ತಲುಪಿದಾಗ ಹೊರ ಬಾಗಿಲು ತೆರೆದಿತ್ತು.

'ಸ್ಮೃತಿ ಊಟ ಬಡಿಸಲು ಬಂದಿರಬಹುದು' ಎಂದುಕೊಂಡೇ 'ವೆರಾಂಡ'ಕ್ಕೆ ಕಾಲಿಟ್ಟೆ. ಹಜಾರದಲ್ಲಿ ಶ್ರೀಹರಿ ಮಲಗಿದ್ದ ಜಾಗ ಖಾಲಿಯಾಗಿತ್ತು. ಅಡಿಗೆ ಮನೆಯಲ್ಲಿ ಊಟ ಮಾಡುತ್ತಿರಬಹುದೆಂದು ಒಳಗೆ ನಡೆದೆ. ಅಡಿಗೆ ಮನೆಯ ಬಾಗಿಲಲ್ಲಿ ನಾನು ಅರೆಕ್ಷಣ ಗರ ಬಡಿದು ನಿಂತೆ. ಒಲೆಯ ಮೇಲೆ ಸಾರನ್ನು ಬಿಸಿಯಾಗಲು ಇಟ್ಟು ನನಗೆ ಬೆನ್ನು ಮಾಡಿ ನಿಂತಿದ್ದಳು ಸ್ಮೃತಿ. ಅವಳ ಸೊಂಟವನ್ನು ಹಿಂದಿನಿಂದ ಬಳಸಿ ಅವಳ ಬೆನ್ನಿನ ಮೇಲೆ ಮುಖವಿಡುತ್ತಿದ್ದುದು ಶ್ರೀಹರಿಯೇ ಎಂದು ನನ್ನಿಂದ ನಂಬಲಾಗಲಿಲ್ಲ. ಆದರೆ ಕಣ್ಣುಗಳು ಕಂಡದ್ದನ್ನು ನಂಬಲೇಬೇಕಷ್ಟೆ!

ಮುಂದೇನಾಯಿತೆಂದು ನೋಡುವುದು ನನಗೆ ಬೇಕಾಗಿರಲಿಲ್ಲ. ಅರೆಕ್ಷಣದಲ್ಲಿ ನಾನು ಬೀದಿಯಲ್ಲಿದ್ದೆ. ಮೈ–ಮನಸ್ಸುಗಳ ಉರಿ ಮಧ್ಯಾಹ್ನದ ಸೂರ್ಯನ ಶಾಖಕ್ಕಿಂತ ಹೆಚ್ಚು ಪ್ರಖರವಾಗಿದ್ದವು. ಬರುವ ಅವಸರದಲ್ಲಿ ಮನೆಯಲ್ಲೇ ನನ್ನ ಚಪ್ಪಲಿಯನ್ನು ಬಿಟ್ಟು ಬಂದಿದ್ದೆ. ಸುಡುತ್ತಿದ್ದ ಕಾಲಾಗಲೀ, ತಲೆಯಾಗಲೀ ನನ್ನ ಮನದ ತಾಪಕ್ಕೆ ಸಾಟಿಯಾಗಿರಲಿಲ್ಲ. ನೇರವಾಗಿ ಬ್ಯಾಂಕಿಗೆ ಹೋಗಿ ನನ್ನ ಕುರ್ಚಿಯಲ್ಲಿ ಕುಸಿದೆ. ತಲೆಯ ಮೇಲೆ ತಿರುಗುತ್ತಿದ್ದ ಫ್ಯಾನ್‌ಗೆ ನನ್ನೆದೆಯ ಧಗೆಯನ್ನು ಶಮನಗೊಳಿಸಲು ಅಸಾಧ್ಯವಾಗಿತ್ತು.

ಸಂಜೆಯವರೆಗೆ ಕೆಲಸವನ್ನೇನೂ ಮಾಡಲಾಗದೆ ಸುಮ್ಮನೆ ಕುಳಿತಿದ್ದೆ. ನನ್ನೊಡನೆ ಮಾತನಾಡಿದವರೊಡನೆಯೂ ಸಹಜವಾಗಿ ವರ್ತಿಸಲಾಗಲಿಲ್ಲ. ತಲೆನೋವೆಂದು ಊಟವನ್ನೂ ಮಾಡಲಿಲ್ಲ. ಹೆಣ್ಣು ಎಲ್ಲಾ ಕಷ್ಟವನ್ನು ಸಹಿಸಿಯಾಳು. ಆದರೆ ತನ್ನದು ಮಾತ್ರ ಎಂದು ಭಾವಿಸಿದ ವ್ಯಕ್ತಿ ಅನ್ಯರ ಪಾಲಾದಾಗ ಅವಳು ಸಹಿಸಲಾರಳು. ಎಲ್ಲೋ ಭಾಸ ಕಲ್ಪಿಸಿದ ವಾಸವದತ್ತೆಯರಂತೆ ಒಬ್ಬಿಬ್ಬರು ಇಂತಹ ಸಮಯದಲ್ಲಿ ಉದಾತ್ತವಾಗಿ ನಡೆದುಕೊಂಡಿರಬಹುದು. 'ಕ್ಷಮಯಾಧರಿತ್ರಿ' ಎಂದಿದೆ ಶಾಸ್ತ್ರ. ಸಂಸಾರಕ್ಕೆ ಬಿದ್ದ ಹೆಣ್ಣು, ಭೂಮಿಯಂತೆ, ತನ್ನನ್ನು ತುಳಿಯುವವರನ್ನು ಕ್ಷಮಿಸಬೇಕು ಎಂಬುದೂ ಹೇಳಿಕೆ. ಆದರೆ ನಿಜಜೀವನದಲ್ಲಿ ಇದು ಸಾಧ್ಯವೇ? ನನ್ನಲ್ಲಿ ಏನು ಸಿಗಲಿಲ್ಲವೆಂದು ಶ್ರೀಹರಿ ಹೀಗೆ ಮಾಡಿದರು? ಶ್ಯಾಮಸುಂದರನನ್ನು ಅಷ್ಟೊಂದು ಗಾಢವಾಗಿ ಪ್ರೀತಿಸುತ್ತಿದ್ದ ಸ್ಮೃತಿಯೇ ಈ ದಾರಿ ಹಿಡಿದಳೆಂದರೆ ಪ್ರೀತಿಯ ಬೆಲೆಯೇನಾಯ್ತು?

(–ಸಶೇಷ)

# ವನಿತಾ

## ಓದುಗರ ಗಮನಕ್ಕೆ

ಬಹುಕಾಲದಿಂದ "ವನಿತಾ"ದಲ್ಲಿ ಧಾರಾವಾಹಿಯಾಗಿ ಬರುತ್ತಿರುವ ಡಾ। ಉಷಾ ರಾವ್ ಅವರ "ಸಂಮೋಹಿನಿ ಚಿಕಿತ್ಸೆ" ವಿಶೇಷ ಜನಾದರಣೆ ಪಡೆದಿದ್ದು ಇದರ ಕೊನೆಯ ಕಂತು ಈಗ ನಿಮ್ಮ ಕೈಯಲ್ಲಿದೆ. ಈ ದಿಸೆಯಲ್ಲಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಬಯಸುವವರೂ ಇರಬಹುದು. ಕಾರಣ ಅಂತಹವರ ಅನುಕೂಲಕ್ಕಾಗಿ "ಸಂಮೋಹಿನಿ ಪ್ರಶ್ನೋತ್ತರ ವೇದಿಕೆ"ಯನ್ನು ಬಹುಬೇಗ ಆರಂಭಿಸಲಿದ್ದೇವೆ. ಕಾರಣ ಸಮಸ್ಯೆಗಳಿಗೆ ಪರಿಹಾರ ಬಯಸುವವರು ಪ್ರಶ್ನೆಯನ್ನು ಚಿಕ್ಕದಾಗಿ ಚೊಕ್ಕವಾಗಿ ಅಂಚೆ–ಕಾರ್ಡ್‌ನಲ್ಲಿ ಬರೆದು "ವನಿತಾ"ದ ಮದರಾಸು ಕಾರ್ಯಾಲಯಕ್ಕೆ ಕಳಿಸಬೇಕು. ಡಾ। ಉಷಾರಾವ್ ಅವರಿಂದ ಉತ್ತರಗಳನ್ನು ಪಡೆದು 'ವನಿತಾ'ದಲ್ಲಿ ಪ್ರಕಟಿಸಲಾಗುವುದು.

ನಿಮ್ಮ ಪ್ರಶ್ನೆಗಳನ್ನು ಕಳಿಸುವ ವಿಳಾಸ :

"ವನಿತಾ"
ಸಂಮೋಹಿನಿ ಪ್ರಶ್ನೋತ್ತರ ವೇದಿಕೆ
ಡಾಲ್ಟನ್ ಪಬ್ಲಿಕೇಷನ್ಸ್–
ಚಂದಮಾಮ ಬಿಲ್ಡಿಂಗ್ಸ್
ವಡವಳನಿ, ಮದರಾಸು–600 026.

## ಕುಂಭಕರ್ಣೋಪಾಧ್ಯಾಯ

ಮಿಡ್ನಾಪುರದ ನಕಿಂದಿ ಹರಿಚರಣ ಪ್ರಾಥಮಿಕ ಶಾಲೆಯಲ್ಲಿ ಒಂದು ವಿಶೇಷ ಘಟನೆ ನಡೆಯಿತು. ಅದರ ಉಪಾಧ್ಯಾಯನೊಬ್ಬ ಕುಂಭಕರ್ಣ ಗೋತ್ರಿ. ನಿದ್ರಾಪ್ರೇಮಿ. ತರಗತಿಯಲ್ಲಿ ಕುರ್ಚಿಯಲ್ಲಿ ಕುಳಿತು ಮೇಜಿನ ಮೇಲೆ ಉದ್ದಕ್ಕೂ ಕಾಲು ಚಾಚಿ ಮಲಗಿ ನಿದ್ರೆ ಹೋದನೆಂದರೆ ಆನೆ ಮೈ ತುಳಿದು ಹೋದರೂ ಎಚ್ಚರವಾಗದಷ್ಟು ಪರವಶತೆ. ವಿದ್ಯಾರ್ಥಿಗಳು ಕರೆದರೂ, ಕೂಗಿದರೂ, ಅಲುಗಾಡಿಸಿದರೂ ಏಳುತ್ತಿರಲಿಲ್ಲ. ಗುರುಗಳ ಈ ಚಾಳಿಯಿಂದ ರೋಸಿ ಹೋದ ಶಿಷ್ಯ ವರ್ಗ ಕೊನೆಗೂ ಒಂದು ನಿರ್ಧಾರಕ್ಕೆ ಬಂದಿತು. ಅದೊಂದು ದಿನ ಎಂದಿನಂತೆ ಗುರು ಮಹಾಶಯ ನಿದ್ರಾಪರವಶನಾಗಿ ಸಮಾಧಿಸ್ಥಿತಿ ತಲುಪಿದಾಗ ಶಿಷ್ಯೋತ್ತಮರೆಲ್ಲ ಗುರುವನ್ನು ಹೊತ್ತುಕೊಂಡು ಹೋಗಿ ಸಮೀಪದಲ್ಲಿರುವ ಚಿಕ್ಕ ಕೆರೆಯಲ್ಲಿ ಎಸೆದುಬಿಟ್ಟರು. ಕೆರೆಯ ತಳ ಕಂಡೊಡನೆ ನಿದ್ರೆಯ ಆಳಕ್ಕಿಳಿದ ಗುರುವರ್ಯನಿಗೆ ನಿದ್ರಾ ಭಂಗವಾಗಿ ಗಡಬಡಿಸಿ, "ನೀರೊಳಗಿರ್ದುಂ ಬೆಮರ್ತ ಉರಗ ಪತಾಕಂ"ನಂತೆ ಕೋಪೋದ್ರಿಕ್ತನಾಗಿ ಮೇಲೆದ್ದು ಬಂದಾಗ ಸುತ್ತಲೂ ನೆರೆದ ಹಳ್ಳಿಗರೆಲ್ಲಾ ಪಕಪಕನೆ ನಗುತ್ತಿದ್ದರಂತೆ; ಈ ಕುಂಭಕರ್ಣೋಪಾಧ್ಯಾಯ ನಂತರ ಪೋಲೀಸರಿಗೆ ದೂರು ನೀಡಿದರಂತೆ.



# ಪ್ರಪಂಚ ಪ್ರದಕ್ಷಿಣೆ

## ಖಾರಿಯಲ್ಲಿ ಕಳವಳ....

ಖಾರಿ ಯುದ್ಧ ನಿಂತು ಇನ್ನೂ ಒಂದೂವರೆ ವರ್ಷ ಪೂರ್ತಿ ಆಗಿಲ್ಲ. ಆ ಯುದ್ಧದ ಪರಿಣಾಮ ಇಡೀ ಪ್ರಪಂಚದ ಮೇಲೆ ಆಗಿರುವುದು ಎಲ್ಲರಿಗೂ ತಿಳಿದ ಸಂಗತಿ. ಈ ಯುದ್ಧದ ನೆಪದಲ್ಲಿ ನಮ್ಮ ಕೇಂದ್ರ ಸರ್ಕಾರ ವಿಧಿಸಿದ ಖಾರಿಯುದ್ಧದ ಸರ್‌ಚಾರ್ಜ್ ಇನ್ನೂ ನಮ್ಮ ತಲೆಯ ಮೇಲೆ ಸವಾರಿ ಮಾಡುತ್ತಿದೆ. ಈಗ ಮತ್ತೆ ಖಾರಿ ಪ್ರದೇಶದಲ್ಲಿ ಯುದ್ಧ ಪ್ರಾರಂಭ ವಾಗುವ ಕಳವಳಕಾರಿ ಸುದ್ದಿಗಳು ಬರುತ್ತಿವೆ. ಇಡೀ ಪ್ರಪಂಚದ ಪೋಲೀಸ್ ತಾನು ಎಂದು ಭಾವಿಸಿರುವ ಅಮೇರಿಕ ಈಗಾಗಲೇ ಸಂತ್ರಸ್ತವಾಗಿರುವ ಇರಾಕ್ ಮೇಲೆ ದಾಳಿ ನಡೆಸಲು ಸಂಚು ನಡೆಸುತ್ತಿದೆ. ಅದರ ಇತ್ತೀಚಿನ ಒಂದು ಪ್ರಯತ್ನ ಸದ್ದಾಂ ಹುಸೇನರ ಮುತ್ಸದ್ದಿತನದಿಂದಾಗಿ ವಿಫಲವಾಯಿತು.

ಖಾರಿ ಯುದ್ಧದ ಶಾಂತಿ ಒಪ್ಪಂದದ ಷರತ್ತುಗಳ ಪ್ರಕಾರ, ಇರಾಕ್‌ನ ರಾಸಾಯನಿಕ ಅಸ್ತ್ರ ಮತ್ತು ಕ್ಷಿಪಣಿಗಳ ತಯಾರಿಕೆಯ ದಾಖಲೆಗಳನ್ನು ಕೃಷಿ ಸಚಿವಾಲಯದ ಕಟ್ಟಡದಲ್ಲಿ ಬಚ್ಚಿಡಲಾಗಿದೆ ಎಂಬ ಗುಮಾನಿಯ ಮೇಲೆ ಆ ಕಟ್ಟಡವನ್ನು ಪರೀಕ್ಷಿಸಲು ವಿಶ್ವಸಂಸ್ಥೆಯ ಇನ್ಸ್‌ಪೆಕ್ಟರುಗಳಿಗೆ ಅನುಮತಿ ನೀಡಬೇಕೆಂದು ಕೇಳಲಾಗಿತ್ತು. ಇಂಥ ಒಂದು ಕೇಳಿಕೆ ಇರಾಕ್‌ನ ಸಾರ್ವಭೌಮತ್ವಕ್ಕೆ ಅಪಚಾರ ಹಾಗೂ ಅದರ ಆಂತರಿಕ ವಿಷಯಗಳಲ್ಲಿ ಹಸ್ತಕ್ಷೇಪ ಆಗುವುದರಿಂದ ಇದಕ್ಕೆ ಅನುಮತಿ ನೀಡಲಾಗುವುದಿಲ್ಲ ಎಂದು ಇರಾಕ್‌ನ ಅಧ್ಯಕ್ಷ ಸದ್ದಾಂ ಹುಸೇನ್ ಘೋಷಿಸಿದರು. ಇದಕ್ಕೆ ಪ್ರತಿಯಾಗಿ ಇರಾಕ್ ಮೇಲೆ ಮತ್ತೆ ದಾಳಿ ನಡೆಸಲು ಅಮೆರಿಕ ಯುದ್ಧ ನೌಕೆಗಳು ಹಾಗೂ ಶಸ್ತ್ರಾಸ್ತ್ರಗಳನ್ನು ಸಿದ್ಧ ಮಾಡತೊಡಗಿತು. ಹೀಗೆ ಮಾಡಲು ಅಮೆರಿಕಕ್ಕೆ ವಿಶ್ವಸಂಸ್ಥೆ ಯಾವ ಅಧಿಕಾರ ವನ್ನೂ ಕೊಟ್ಟಿರಲಿಲ್ಲ. ಆದರೂ ಕೇವಲ ಒಂದೂವರೆ ವರ್ಷದಲ್ಲಿ ಮತ್ತೊಂದು ಯುದ್ಧ ಸಂಭವಿಸಿ ಖಾರಿ ಪ್ರದೇಶ ನಾಶವಾಗುವುದನ್ನು ತಪ್ಪಿಸುವ ಉದ್ದೇಶ ದಿಂದ ಸದ್ದಾಂ ಹುಸೇನರು ವಿಶ್ವಸಂಸ್ಥೆಯ ಇನ್ಸ್‌ಪೆಕ್ಟರ್ ಗಳಿಗೆ ತನಿಖೆ ನಡೆಸಲು ಅನುಮತಿ ನೀಡಿದರು. ಆದರೆ ಅವರಿಗೆ ಅಲ್ಲಿ ಯಾವ ದಾಖಲೆ ಯಾಗಲೀ, ಪುರಾವೆಗಳಾಗಲೀ ದೊರೆಯಲಿಲ್ಲ. ಇದು ಅಗತ್ಯ ವಾಗಿತ್ತೇ ಎಂಬ ಪ್ರಶ್ನೆ ರಾಜಕೀಯ ತಜ್ಞರನ್ನು ಕಾಡುತ್ತಿದೆ. ಸದ್ಯಕ್ಕಂತೂ ತಕ್ಷಣ ಯುದ್ಧದ ಗಂಡಾಂತರ ತಪ್ಪಿದೆ. ಆದರೆ ನಾಳೆ ಹೇಗೋ ಹೇಳಲು ಬರುವುದಿಲ್ಲ. ಇರಾಕ್ ಬಗೆಗೆ ಅಮೇರಿಕದ ದ್ವೇಷ ಹೊಸತೇನಲ್ಲ. ಹೇಗಾದರೂ ಮಾಡಿ ಖಾರಿಯಲ್ಲಿ ತನ್ನ ಪ್ರಭಾವ ವನ್ನು ಬೆಳೆಸಿಕೊಳ್ಳುವುದು ಅಮೆರಿಕದ ಉದ್ದೇಶ. ಜತೆಗೆ ರಾಷ್ಟ್ರದಲ್ಲಿ ಚುನಾವಣೆಯನ್ನು ಎದುರಿಸುತ್ತಿರುವ ಅಧ್ಯಕ್ಷ ಜಾರ್ಜ್ ಬುಷ್ ಅವರಿಗೆ ಜನತೆಯ ಬೆಂಬಲ ದೊರಕಿಸಲು ಇದೊಂದು ತಂತ್ರ ಎಂದು ಹೇಳಲಾ ಗುತ್ತಿದೆ. ಯಾವುದು ಹೇಗೇ ಇರಲಿ ಇರಾಕ್ ಮೇಲೆ ಯುದ್ಧ ಮಾಡಲು ಅಮೆರಿಕಕ್ಕೆ ಈಗ ತಕ್ಷಣ ಯಾವ ಕಾರಣವೂ ಹೊಳೆ ಯುತ್ತಿಲ್ಲ. ಆದರೆ ಅಮೆರಿಕ ಈ ಬಗೆಗೆ ಯೋಚಿಸುತ್ತಲೇ ಇದೆ. ಮುಂದಿನ ಬೆಳವಣಿಗೆ ಯನ್ನು ಕಾದು ನೋಡಬೇಕು.



## ಬಾಲ್ಟಿಕ್ ಪ್ರದೇಶದಲ್ಲಿ....

ಹಿಂದಿನ ಸೋವಿಯೆತ್ ಒಕ್ಕೂಟದ ಅಂಗವಾಗಿದ್ದ ಬಾಲ್ಟಿಕ್ ಗಣ ರಾಜ್ಯಗಳಾಗಿದ್ದ ಎಸ್ತೋನಿಯಾ, ಲಾತ್ವಿಯಾ ಹಾಗೂ ಲಿಥುವೇನಿಯ ಬಹಳ ಹಿಂದೆಯೇ ಒಕ್ಕೂಟದಿಂದ ಬೇರ್ಪಟ್ಟು ಸ್ವತಂತ್ರವಾಗಲು ಹವಣಿ ಸಿದುವು. ಅದಕ್ಕೆ ಸೋವಿಯೆತ್ ಒಕ್ಕೂಟದ ಸುವಿಧಾನ ದಲ್ಲಿ ಅವಕಾಶವೂ ಇತ್ತು. ಕಳೆದ ವರ್ಷ ಸೋವಿಯೆತ್ ಒಕ್ಕೂಟ ವಿಸರ್ಜನೆಯಾಗುವುದಕ್ಕೆ ಮುಂಚೆಯೇ ಎಸ್ತೋನಿಯಾ ಒಕ್ಕೂಟದಿಂದ ಬೇರ್ಪಟ್ಟಿತ್ತು. ಹಿಂದೆ 1940 ರಲ್ಲಿ ಸೋವಿಯೆತ್ ಒಕ್ಕೂಟ ಎಸ್ತೋನಿಯವನ್ನು ಆಕ್ರಮಿಸಿದಂದಿನಿಂದಲೂ ಎಸ್ತೋನಿಯನ್ನರು ರಷ್ಯ ನರನ್ನು ವಿರೋಧಿಸುತ್ತ ಬಂದಿದ್ದಾರೆ.

ಸುವಿಧಾನಾತ್ಮಕವಾಗಿಯೇ, ಜನಮತ ಸಂಗ್ರಹಿಸಿ ಎಸ್ತೋನಿಯಾ ತನ್ನ ಸೇನೆಯನ್ನು ಅಲ್ಲಿ ಬೀಡುಬಿಟ್ಟಿತ್ತು. ಎಸ್ತೋನಿಯಾದಲ್ಲಿರುವ ರಷ್ಯನರ ಕ್ಷೇಮಕ್ಕಾಗಿ ಈ ಕ್ರಮ ಎಂದು ಹೇಳಲಾಗುತ್ತಿತ್ತು. ಆದರೆ ಈಗ ಸೋವಿಯೆತ್ ಒಕ್ಕೂಟವೇ ಇಲ್ಲ. ರಷ್ಯಾ ಪ್ರತ್ಯೇಕ ರಾಷ್ಟ್ರವಾಗಿದೆ. ಹೀಗಿರುವಾಗ ಸೇನೆ ಎಸ್ತೋನಿಯಾ ದಲ್ಲೇಕಿರಬೇಕು ಎಂಬ ಪ್ರಶ್ನೆ ರಾಜಕೀಯ ಚಿಂತಕರನ್ನು ಕಾಡುತ್ತಿದೆ. ಎಸ್ತೋನಿಯಾದಲ್ಲಿರುವ ಅಲ್ಪ ಸಂಖ್ಯಾತ ಜನಾಂಗಗಳಲ್ಲೊಂದು ರಷ್ಯನ್ ಜನಾಂಗ. ಅಲ್ಲಿರುವ ಸೇನೆಯಿಂದ ಈ ರಷ್ಯನರಿಗೆ ರಕ್ಷಣೆ ಇದೆ. ಆದರೆ ರಷ್ಯದ ಸೇನೆ ಇನ್ನೂ ಎಸ್ತೋನಿಯಾದಿಂದ ಕಾಲ್ತೆಗೆಯ ದಿರುವುದರ ಬಗೆಗೆ ಅನೇಕ ಊಹಾಪೋಹಗಳಿವೆ. ಎರಡು ವರ್ಷಗಳ ಹಿಂದೆ ಎಸ್ತೋನಿಯಾದಲ್ಲಿರುವ ರಷ್ಯನರಿಗೆ ಚುನಾವಣೆಗಳಲ್ಲಿ ಮತದಾನಾವಕಾಶ ಇತ್ತು. ಈಗ ಅದನ್ನು ವಾಪಸ್ ಪಡೆಯಲಾಗಿದೆ. ತಮ್ಮ ನೆಲದಲ್ಲಿ ಪರದೇಶದ ಸೈನಿಕರಿರುವುದನ್ನು ಎಸ್ತೋನಿಯಾದ ಜನತೆ ಸಹಿಸುತ್ತಿಲ್ಲ. ಇದು ತಮ್ಮ ಸಾರ್ವಭೌಮತೆಗೆ ಕುಂದು ಎಂದೇ ಅವರು ಭಾವಿಸಿದ್ದಾರೆ. ಅಂತೆಯೇ ರಷ್ಯದ ಸೇನೆಗೆ ಕಿರುಕುಳ ಕೊಡಲು ಗೆರಿಲ್ಲಾಗಳ ಸೇನೆ ಸಿದ್ಧವಾಗುತ್ತಿದೆ. ಇದಕ್ಕೆಲ್ಲಾ ಮುಖ್ಯ ಕಾರಣವೆಂದರೆ, ಇಷ್ಟೆಲ್ಲಾ ಆದರೂ ರಷ್ಯ ಎಸ್ತೋನಿಯಾ ದಿಂದ ತನ್ನ ಸೇನೆಯನ್ನು ವಾಪಸ್ ಕರೆಸಿಕೊಳ್ಳಲು ನಿರಾಕರಿಸುತ್ತಿರುವುದು, ಹಾಗೂ ರಷ್ಯ ಎಸ್ತೋನಿಯಾವನ್ನು ಮತ್ತೆ ಆಕ್ರಮಿಸಿಕೊಳ್ಳಲು ಸನ್ನಾಹ ನಡೆಸುತ್ತಿದೆ ಎಂಬ ಭೀತಿ. ಆದರೆ ಅಲ್ಲಿರುವ ಸೇನೆ ಎಸ್ತೋನಿಯಾ ಜನರ ನೆಮ್ಮದಿಯನ್ನು ಕೆಡಿಸಿದೆ ಎಂಬುದಂತೂ ಸತ್ಯ.



## ಪಾಕಿಸ್ತಾನದಲ್ಲಿ....

ಪಾಕಿಸ್ತಾನದಲ್ಲಿ ಹೊಸದಾಗಿ ಚುನಾವಣೆಗಳನ್ನು ನಡೆಸಬೇಕೆಂದು ಒತ್ತಾಯಪಡಿಸಿ ವಿರೋಧ ಪಕ್ಷಗಳ ಒಕ್ಕೂಟ ಪ್ರತಿಭಟನಾ ಮೆರವಣಿಗೆಗಳನ್ನು ಹಾಗೂ ಪ್ರದರ್ಶನಗಳನ್ನು ನಡೆಸುತ್ತಿದೆ. ರಾಷ್ಟ್ರೀಯವಾಗಿ ಜನರ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸುವಲ್ಲಿ ಹಾಗೂ ಅಂತಾರಾಷ್ಟ್ರೀಯವಾಗಿ ರಾಷ್ಟ್ರಕ್ಕೆ ಸುಭದ್ರತೆ ಕಲ್ಪಿಸುವಲ್ಲಿ ಇಂದಿನ ಸರ್ಕಾರ ವಿಫಲವಾಗಿದೆ ಎಂದು ವಿರೋಧ ಪಕ್ಷಗಳು ಆಪಾದಿಸಿವೆ. ಜನತೆಯೂ ಈ ಆಡಳಿತದಿಂದ ರೋಸಿ ಹೋಗಿದೆ. ಎಂದಿಗೆ ನಾವು ಶಾಂತಿಯಿಂದ, ನೆಮ್ಮದಿಯಿಂದ ಜೀವಿಸಲು ಸಾಧ್ಯ ವಾಗುವುದು ಎಂಬ ಪ್ರಶ್ನೆಯನ್ನು ಪಾಕಿಸ್ತಾನದ ಪ್ರಜೆಗಳು ಕೇಳುತ್ತಿದ್ದಾರೆ.

ಪ್ರಜೆಗಳ ಗಮನವನ್ನು ಬೇರೆಡೆ ಸೆಳೆಯುವ ಉಪಾಯವಾಗಿ ಪಾಕ್ ಆಡಳಿತಗಾರರು ಭಾರತದ ಗಡಿಯಲ್ಲಿ ಯಾವುದೇ ಪ್ರೇರಣೆ ಇಲ್ಲದೆ ಸೈನಿಕರನ್ನು ನುಗ್ಗಿಸುವುದಲ್ಲದೆ, ಕಾಶ್ಮೀರದ ಉಗ್ರಗಾಮಿಗಳನ್ನು ಬಗಲಿಗೆ ಹಾಕಿಕೊಂಡು ಅವರಿಗೆ ಭಯೋತ್ಪಾದಕ ಕೃತ್ಯಗಳಲ್ಲಿ ತರಬೇತಿ ನೀಡುತ್ತಿದ್ದಾರೆ. ಆತ್ಮರಕ್ಷಣೆಗಾಗಿ ಭಾರತದ ಗಡಿಯಲ್ಲಿರುವ ಭದ್ರತಾ ದಳದವರು, ಗುಂಡು ಹಾರಿಸಿದ ಪಾಕ್ ಸೈನಿಕರು ಮೃತರಾದರೆ ಅದನ್ನು ಭಾರತದ ಮೇಲೆ ಗೂಬೆ ಕೂರಿಸುವ ಪ್ರಯತ್ನವನ್ನೂ ಮಾಡಲಾಗುತ್ತಿದೆ.

ಭಾರತದ ಒಂದು ಭಾಗವಾಗಿದ್ದು ರಾಜಕಾರಣಿಗಳ ಕುಟಿಲ ಕಾರಸ್ಥಾನದಿಂದಾಗಿ ಪ್ರತ್ಯೇಕಗೊಂಡು ಸ್ವತಂತ್ರ ಪಾಕಿಸ್ತಾನ ಅಸ್ತಿತ್ವಕ್ಕೆ ಬಂದಾಗಿನಿಂದ (1947) ಆ ರಾಷ್ಟ್ರ ಒಂದಲ್ಲ ಒಂದು ರೀತಿಯಲ್ಲಿ ಮತಾಂಧ ಮುಸ್ಲಿಂ ಮಿಲಿಟರಿ ಆಡಳಿತಗಾರರ ಕೈಯಲ್ಲಿ ಸಿಕ್ಕು ನಲುಗುತ್ತಿದೆ. ಈ ಲಷ್ಕರಿ ಆಡಳಿತದಿಂದಾಗಿ ಪಾಕಿಸ್ತಾನದ ಪ್ರಜೆಗಳಿಗೂ ನೆಮ್ಮದಿಯಿಲ್ಲ, ನೆರೆಯ ಭಾರತಕ್ಕೂ ನೆಮ್ಮದಿಯಿಲ್ಲದಂತಾಗಿದೆ.

ಭುಟ್ಟೋ, ಅಯೂಬ್‌ಖಾನ್‌ರಿಂದ ಇಂದಿನ ನವಾಜ್ ಷರೀಫ್‌ವರೆಗೆ ಪಾಕಿಸ್ತಾನವನ್ನು ಆಳಿದ ನಾಯಕರು ಶಾಂತಿ ಮಂತ್ರವನ್ನು ಜಪಿಸುತ್ತಲೇ ಭಾರತದೊಂದಿಗೆ ಕಾಲುಕೆರೆದು ಜಗಳ ಮಾಡುತ್ತ ಬಂದಿದ್ದಾರೆ. ಮೂರು ಸಾರಿ ಭಾರತದ ಮೇಲೆ ಮಿಲಿಟರಿ ಕಾರ್ಯಾಚರಣೆಯ ಸಾಹಸ ಮಾಡಿ ಸೋತು ಮಣ್ಣು ಮುಕ್ಕಿದ್ದಾರೆ. ತಮ್ಮದಲ್ಲದ ನೆಲ ಕಾಶ್ಮೀರ ತಮ್ಮದೆಂದು ವಿಶ್ವಸಂಸ್ಥೆಯಲ್ಲಿ ವ್ಯಾಜ್ಯ ತೆಗೆದು (ಭಾರತ ಇಲ್ಲದಿರುತ್ತಿದ್ದರೆ ಪಾಕಿಸ್ತಾನದ ಅಸ್ತಿತ್ವ ಎಲ್ಲಿರುತ್ತಿತ್ತು?) ಆಗಾಗ್ಗೆ ಗಡಿ ಪ್ರದೇಶದಲ್ಲಿ ತಂಟೆ ಮಾಡುತ್ತಿದೆ. ಇತ್ತೀಚೆಗೆ ನಮ್ಮ ರಾಜತಾಂತ್ರಿಕ ರನ್ನು ಬಂಧಿಸಿ ಕಿರುಕುಳ ನೀಡುವ ಪರಿಪಾಠವನ್ನೂ ಪ್ರಾರಂಭಿಸಿದೆ. ಹೀಗೇ ಮುಂದುವರಿದರೆ ಭಾರತ ಪಾಕಿಸ್ತಾನಗಳೊಳಗಿನ ರಾಜತಾಂತ್ರಿಕ ಸಂಬಂಧವನ್ನು ಕಡಿದುಕೊಳ್ಳಬೇಕಾಗುವುದು. ಅಂಥ ವಿಪರೀತ ಕ್ರಮ ಉಭಯರಿಗೂ ಒಳ್ಳೆಯದಲ್ಲ. ಮತಾಂಧ ಪಾಕ್ ಮುಖಂಡರಿಗೆ ಇನ್ನಾದರೂ ವಿವೇಕೋದಯ ವಾಗುವುದೇ?

Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026

# CHANDAMAMA



# CHANDAPAPA



## CHANDAMAMA REACHES OVER 60 LAKH ADULTS EVERY MONTH

No kidding.

The NRS IV confirms the fact that Chandamama is quite a favourite with several mamas and papas. In fact, it has been certified as the second largest title in the country (India Today, being the largest). That too, without taking into account its primary target audience, children, who aren't covered in the Survey. Furthermore, the fact that Chandamama is published in 12 languages clearly suggests the wide span of people it reaches.

Yet, there are more figures to toy with.

54% of its readers live in below 5 lakh towns.

63% belong to Rs. 1,000-4,000 HHI category.

72% are in the B, C or D socio-economic groups.

So it's the middle class that we're talking about. And that's where lies the buying power.

And what's more, while you can reach the adult segment at just half a paise per person, the large audience of children comes absolutely free!

So the next time you wish to capture 60 lakh readers, advertise in Chandamama.

Effectiveness will be child's play, thereafter.




**CHANDAMAMA**

THE SECOND MOST WIDELY READ TITLE AMONG ADULTS

CLARION-M

